## ದಯವಿಟ್ಟು ಗಮನಿಸಿ

ಪ್ರತಿ ಪುಸ್ತಕಕ್ಕೂ ಮುಖ ಬೆಲೆಯ ಶೇ. ೨೦ರಷ್ಟು
ರಿಯಾಯಿತಿ ನೀಡಲಾಗುವುದು.



ಶೇ. ೩೩ರಷ್ಟು ರಿಯಾಯಿತಿಯಿದೆ. ಒಂದು ಸಾವಿರ ರೂಪಾಯಿಗಳಿಗೆ
ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಬೇಕು.



ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲೀಷ್
ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ
'ಅನಿಕೇತನ'ಕ್ಕೆ ಚಂದಾದಾರರಾಗಿರಿ.

| | | |
|---|---|---|
| ಬಿಡಿ ಪ್ರತಿ | - | ೩೦-೦೦ |
| ವಾರ್ಷಿಕ ಚಂದಾ | - | ೧೦೦-೦೦ |
| ಆಜೀವ ಚಂದಾ | - | ೩೦೦-೦೦ |

## ಕರ್ನಾಟಕ ಸಾಹಿತ್ಯ ಅಕಾಡೆಮಿಯ ಹೊಸ ಪ್ರಕಟಣೆಗಳು

### ಕವಿ-ಕೃತಿ ಆಧುನಿಕ ಚಿಂತನ ಮಾಲೆ

| | | | |
|---|---|---|---|
| ೧. | ಬೇಂದ್ರೆ ಕಾವ್ಯ | ಜಿ.ಎಸ್. ಆಮೂರ | ೧೫೦.೦೦ |
| ೨. | ಕುವೆಂಪು ಕಾದಂಬರಿಗಳು | ಗುರುಪಾದ ಮರಿಗುದ್ದಿ | ೧೫೦.೦೦ |
| ೩. | ಬಸವ ಸಾಹಿತ್ಯ | ಮೃತ್ಯುಂಜಯ ರುಮಾಲೆ | ೧೨೫.೦೦ |
| ೪. | ಕುಮಾರವ್ಯಾಸನ ಕನ್ನಡ ಭಾರತ | ಶ್ಯಾಮಸುಂದರ ಬಿದರಕುಂದಿ | ೧೨೫.೦೦ |
| ೫. | ಅಲ್ಲಮಪ್ರಭು - ಚಿಂತನ | ಡಾ. ಎಸ್.ಕೆ. ಕೊಪ್ಪಾ | ೧೨೫.೦೦ |
| ೬. | ಪುರಂದರದಾಸ-ಕೀರ್ತನ | ಮಧುಕರ ಯಕ್ಕುಂಡಿ | ೬೫.೦೦ |
| | | ಒಟ್ಟು | ೭೪೦.೦೦ |

ಎಂದಿನಂತೆಯೇ ಶೇ. ೨೦ರ ರಿಯಾಯಿತಿ ಉಂಟು.

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಏಪ್ರಿಲ್ - ಜೂನ್ - ೨೦೦೫

*ಸಂಪಾದಕ*

ಡಾ. ಎಂ.ಎಸ್. ಶೇಖರ್



ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು - ೫೬೦ ೦೦೨
ದೂರವಾಣಿ : ೨೨೨೧ ೧೬೫೦

ANIKETHANA : A Literary Journal (Quarterly)
Edited by : Dr. M.S. Shekar
Published by : Registrar, Karnataka Sahithya Academy
Kannada Bhavana, J.C. Road, Bangalore - 560 002

Pages : x + 134

Registration No. 45646/88

ಸಂಪುಟ : ೧೬

ಸಂಚಿಕೆ : ೪

ಪ್ರತಿಗಳು : ೧೨೦೦

ಪುಟಗಳು : ೧೦ + ೧೩೪

*ಪ್ರಧಾನ ಸಂಪಾದಕರು*

**ಗೀತಾ ನಾಗಭೂಷಣ**

ಅಧ್ಯಕ್ಷರು

ಕರ್ನಾಟಕ ಸಾಹಿತ್ಯ ಅಕಾಡೆಮಿ

*ಪ್ರಕಾಶಕರು*

**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**

ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ. ಸಿ. ರಸ್ತೆ

ಬೆಂಗಳೂರು - ೫೬೦ ೦೦೨

ಬಿಡಿ ಪ್ರತಿ : ರೂ. ೩೦/-

ವಾರ್ಷಿಕ ಚಂದಾ : ರೂ. ೧೦೦/-

ಆಜೀವ ಚಂದಾ : ರೂ. ೩೦೦/-

ಮುಖಪುಟ ಕಲೆ : ಕೆ.ಟಿ. ಶಿವಪ್ರಸಾದ್

ರಕ್ಷಾಪುಟ ವಿನ್ಯಾಸ : ಅನಿತಾ

ಲಕ್ಷ್ಮಿ ಮುದ್ರಣಾಲಯ

LAKSHMI MUDRANALAYA

ISO 9001-2000

ಚಾಮರಾಜಪೇಟೆ, ಬೆಂಗಳೂರು-೧೮

ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

## ಸಂಚಿಕೆಯ ಮುನ್ನ...

೨೦೦೫ರ ಅಕಾಡೆಮಿಯ ಹೊಸ ಸಮಿತಿಯು ನನಗೆ 'ಅನಿಕೇತನ' ತ್ರೈಮಾಸಿಕದ ಸಂಪಾದಕ ಜವಾಬ್ದಾರಿಯನ್ನು ವಹಿಸಿದ ನಂತರ; ಅಕಾಡೆಮಿಯ ಸಮಿತಿಯು ಇಲ್ಲದಿದ್ದ ಸಮಯದಲ್ಲಿನ ಕೆಲ ಸಂಚಿಕೆಗಳು ಬರುವುದು ವಿಳಂಬವಾದುದ್ದರಿಂದ, ಮೊದಲ ಸಂಚಿಕೆಯನ್ನು ಸಂಯುಕ್ತ ಸಂಚಿಕೆಯನ್ನಾಗಿ ರೂಪಿಸಲಾಗಿತ್ತು. ತುಂಬು ಪರಿಶ್ರಮದಿಂದ ರೂಪಿಸಿದ್ದ ಆ ಸಂಚಿಕೆಯ ಬಗ್ಗೆ ನಮ್ಮ ಅಕಾಡೆಮಿಯ ಅಧ್ಯಕ್ಷರು, ಸದಸ್ಯರುಗಳು ಹಾಗೂ ಅಕಾಡೆಮಿಯ ಆಡಳಿತದವರೆಲ್ಲ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಜೊತೆಗೆ ಅನೇಕ ಲೇಖಕ ಮಿತ್ರರು ಹಾಗೂ ಓದುಗರು ಕೂಡ ಮೊದಲ ಸಂಚಿಕೆಯ ಬಗ್ಗೆ ಉತ್ತಮ ಪ್ರತಿಕ್ರಿಯೆಯನ್ನು ತೋರಿದ್ದಾರೆ. ಇವರೆಲ್ಲರ ಪ್ರೋತ್ಸಾಹ ಅಭಿಪ್ರಾಯಗಳು ನನಗೆ ಸಂಚಿಕೆಯನ್ನು ಇನ್ನಷ್ಟು ಸೂಕ್ಷ್ಮವಾಗಿ ರೂಪಿಸಲು ಸಾಧ್ಯವಾಗುತ್ತದೆಯೇನೊ ಅನ್ನುವ ಕಾರಣದಿಂದ ನಾನು ಅವರಿಗೆಲ್ಲ ಕೃತಜ್ಞ. ವೈಯಕ್ತಿಕವಾಗಿ ಆ ಸಂಚಿಕೆ ಇನ್ನಷ್ಟು ಚೆನ್ನಾಗಿ ಬರಬೇಕಾಗಿತ್ತೇನೊ ಅಂತ ನನಗೆ ಅನ್ನಿಸಿದೆ. ಬಹುಶಃ ಆ ನನ್ನ ಅತೃಪ್ತಿಯೆ, ನನ್ನ ಸಂಪಾಕದತ್ವದಲ್ಲಿ ರೂಪುಗೊಂಡಿರುವ ಈ ಎರಡನೆಯ ಸಂಚಿಕೆ, ಇನ್ನಷ್ಟು ಗಟ್ಟಿ ಬರಹಗಳನ್ನು ಒಳಗೊಳ್ಳಲು ಕಾರಣವಾಗಿದೆ ಅಂತ ಅನ್ನಿಸುತ್ತಿದೆ.

ಈ ಸಂಚಿಕೆಯ ವಿಶೇಷ ಎಂದರೆ; ಅನುವಾದ ಬರಹಗಳನ್ನೊಳಗೊಂಡ ಕತೆ, ಕವನ, ವಿಮರ್ಶೆ ಮುಂತಾದ ಬರಹಗಳ ಜೊತೆಗೆ ಪ್ರಸಿದ್ಧ ಲೇಖಕರೊಬ್ಬರ ಸಂದರ್ಶನ ಹಾಗೂ ವಿಶ್ವಖ್ಯಾತ ಚಿತ್ರಕಲಾವಿದರೊಬ್ಬರ ಬಗೆಗಿನ ಲೇಖನಗಳನ್ನು ಒಳಗೊಂಡಿರುವುದು. ಇದು ಅನಿಕೇತನ ಓದುಗರಿಗೆ ಒಂದು ಹೊಸ ಬಗೆಯ ಅಭಿರುಚಿಯನ್ನುಂಟು ಮಾಡಬಹುದೆನಿಸುತ್ತದೆ.

ಮುಖ್ಯವಾಗಿ; ಅಗಾಧ ಮನುಷ್ಯ ಪ್ರೀತಿಯ, ಪ್ರಖ್ಯಾತ ಉರ್ದು ಲೇಖಕರಾದ ಸಾದತ್ ಹಸನ್ ಮಂಟೊ ಅವರ ಬರಹಗಳನ್ನು, ಈ ಸಂಚಿಕೆ ಒಳಗೊಂಡಿರುವುದು ಮಹತ್ವದ್ದೆನ್ನಿಸುತ್ತಿದೆ. ತುಂಬು ಒಳನೋಟದ ಮಂಟೊ ಬರಹಗಳು; ದೇಶ ವಿಭಜನೆಯ ಅಪಾರ ನೋವು, ಆತಂಕಗಳನ್ನು ತುಂಬ ಸೂಕ್ಷ್ಮವಾದ ನೆಲೆಯಲ್ಲಿಯೆ ಕಟ್ಟಿಕೊಡುತ್ತ,

ತಣ್ಣನೆಯ ವಿಷಾದವನ್ನುಟ್ಟಿಸುತ್ತವೆ. ಇಂತಹ ಕಥಾನಕಗಳನ್ನು, ನಮ್ಮ ಸೂಕ್ಷ್ಮ ಸಂವೇದನೆಯ ಪ್ರಸಿದ್ಧ ಚಲನಚಿತ್ರ ನಿರ್ದೇಶಕರು, ಲೇಖಕರು ಆದ ಎನ್.ಎಸ್. ಶಂಕರ್ ಅವರು ಅನುವಾದಿಸಿ ಕೊಟ್ಟಿದ್ದಾರೆ. ಜೊತೆಗೆ ಸಾದತ್ ಹಸನ್ ಮಂಟೊ ಅವರ ಬರಹ ಕುರಿತ ಲೇಖನವೊಂದನ್ನು ನೀಡಿರುವುದು ಅರ್ಥಪೂರ್ಣವಾಗಿದೆ. ನಮ್ಮ ಮಹತ್ವದ ಕವಿಯತ್ರಿಯರುಗಳಾದ; ಎಂ.ಆರ್. ಕಮಲ ಅವರು, ಫ್ರಾನ್ಸಿಸ್ ಎಲೆನ್ ಹಾರ್ಪರ್‌ಳ ನೀಗ್ರೊ ಮೂಲದ ಕವಿತೆಗಳನ್ನು, ಸವಿತಾ ನಾಗಭೂಷಣ ಅವರು ಪಂಜಾಬಿ ಮೂಲದ ವನಿತಾ ಅವರ ಕವಿತೆಗಳನ್ನು ಅನುವಾದ ಮಾಡಿಕೊಟ್ಟಿರುವ ಕವಿತೆಗಳು ಕೂಡ ನಮ್ಮನ್ನು ತಟ್ಟುವಂತಿವೆ. ಟೋನಿಮಾರಿಸನ್ ಅವರ 'ಕಪ್ಪುತನವೇಕೆ ಮುಖ್ಯ' ಎಂಬ ಲೇಖವನ್ನು ಲೇಖಕಿ ಬಿ.ಎಸ್. ಉಷಾ ಅವರು ಅನುವಾದ ಮಾಡಿಕೊಟ್ಟಿದ್ದಾರೆ. ಹಿರಿಯ ಲೇಖಕರಾದ ಪ್ರೊ. ಚೆ. ರಾಮಸ್ವಾಮಿ ಅವರು ತಮಿಳು ಕಥೆಗಾರರಾದ ಜಯಕಾಂತನ್ ಅವರ 'ನಾನು ಕಿಟಕಿ ಹತ್ತಿರ ಕುಳಿತ್ತಿದ್ದೇನೆ' ಎಂಬ ಮಹತ್ವದ ಕಥೆಯನ್ನು ಅನವಾದಿಸಿ ಕೊಟ್ಟಿದ್ದಾರೆ. ಹಾಗೆಯೆ, ಮಲೆಯಾಳಂ, ತೆಲುಗು-ಚೀನಿ ಬರಹಗಳನ್ನು ಈ ಸಂಚಿಕೆ ಒಳಗೊಂಡಿದೆ.

ಮಹಾಕವಿ ಪಂಪನ ಕಾವ್ಯಗಳಲ್ಲಿ ಮಾನವೀಯತೆಯ ಮಿಡಿತ ಹೇಗಿದೆ ಎಂಬುದನ್ನು ಪ್ರೊ. ಶಾಂತಿನಾಥದಿಬ್ಬದ ಅವರ ಲೇಖನ ಮನದಟ್ಟು ಮಾಡಿಕೊಡುತ್ತದೆ. ಬದುಕಿನ ಬಗ್ಗೆ ಒಳನೋಟ ಬೀರುವ, ಜಿ.ಪಿ. ಬಸವರಾಜು ಮತ್ತು ಸತ್ಯಾನಂದ ಪಾತ್ರೋಟ ಕವಿತೆಗಳು ಮಹತ್ವದವುಗಳಾಗಿವೆ. ಇಪ್ಪತ್ತನೆಯ ಶತಮಾನದ ಆದಿಯಲ್ಲಿಯೆ; ಸಾಹಿತ್ಯ ಕೃಷಿ ಮಾಡಿ ಸುಮಾರು ಹತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ, ಆಧುನಿಕ ಕನ್ನಡ ಸಾಹಿತ್ಯದ ಮೊದಲ ತಲೆಮಾರಿನ ದಲಿತ ಕವಿಗಳಾದ ಸೋಸಲೆ ಸಿದ್ದಪ್ಪ ಅವರು, ೧೯೨೦ರ ದಶಕದಲ್ಲಿಯೆ 'ಗೋವುಗಳ ಗೋಳಾಟ' ಎಂಬ ಮಹತ್ವದ ಕಾವ್ಯವನ್ನು ಹೊರತಂದಿದ್ದಾರೆ. ಇಂತಹ ತುಂಬು ಮಹತ್ವದ ಈ ಹಿರಿಯ ಕವಿ, ಕ್ರೂರ ಜಾತಿ ವ್ಯವಸ್ಥೆಯ ಕಾರಣದಿಂದ ಬೆಳಕಿಗೆ ಬಾರದಿರುವುದು ತುಂಬು ವಿಷಾದವೆನಿಸುತ್ತದೆ. ಅಂತಹ ಹಿರಿಯ ಕವಿಯ ಕಾವ್ಯವು ಈ ಸಂಚಿಕೆಗೆ ಸೇರ್ಪಡೆ ಆಗಿರುವುದು ಒಂದು ಹೊಸ ಶೋಧ ಎನಿಸುತ್ತದೆ.

ಟೀಪುಸುಲ್ತಾನ್ ಸೈನ್ಯದ ಅಜ್ಞಾತ ಸೈನಿಕನೊಬ್ಬನ ವಂಶದ ಕಥೆಯೊಂದನ್ನು ಆಧರಿಸಿ ರಚಿತವಾಗಿರುವ ಮನಜ (ಮ.ನ. ಜವರಯ್ಯ) ಅವರ 'ಸೂರಪ್ಪ' ಎಂಬ ಹೊಸ ಕಾದಂಬರಿಯನ್ನು ಕುರಿತಂತೆ, ಯುವ ಲೇಖಕರಾದ ಡಾ. ಅಪ್ಪಗೆರೆ ಡಿ. ಸೋಮಶೇಖರ ಅವರು ವಿಶ್ಲೇಷಿಸಿರುವುದು ಹೊಸ ನೋಟದ್ದೆನಿಸುತ್ತದೆ. ಪ್ರಸಿದ್ಧಲೇಖಕಿ ಸಾರಾ ಅಬೂಬಕ್ಕರ್ ಅವರನ್ನು ಪ್ರೊ. ಅಭಯಕುಮಾರ್ ಅವರು ಸಂದರ್ಶನ ಮಾಡಿಕೊಟ್ಟಿದ್ದಾರೆ. ಪ್ರಖ್ಯಾತ ಚಿತ್ರ ಕಲಾವಿದರಾದ ಪಿಕಾಸೊ ಕುರಿತ ಕೆ.ವಿ. ಸುಬ್ರಹ್ಮಣ್ಯಂ ಅವರ ಲೇಖನ ಸೂಕ್ಷ್ಮ ಸಂಬಂಧಿಯಾದುದ್ದಾಗಿದೆ. ಬಾನುಮುಷ್ತಾಕ್, ಹರೀಶ್‌ಕಟ್ಟೆ ಬೆಳಗುಲಿ ಅವರ ಕವಿತೆಗಳು ಈ ಸಂಚಿಕೆಯಲ್ಲಿವೆ. ಆಫ್ರಿಕನ್ ಸಾಹಿತ್ಯದ ಗರುಡ 'ಅಚೀಬೆ' ಎಂಬ ಬಿ.ಎಲ್. ರಾಜು ಅವರ ಲೇಖನ ಹೊಸ ಬೆಳಕನ್ನು ನೀಡುತ್ತದೆ.

ಹೀಗೆ; ಈ ಸಂಚಿಕೆಯಲ್ಲಿರುವ ಎಲ್ಲ ಬರಹಗಳು ಕೂಡ ಓದುಗರಿಗೆ ಸದಭಿರುಚಿಯನ್ನು ಮೂಡಿಸುವಂತಿವೆ. ಹಾಗಾಗಿ ಇದಕ್ಕೆ ಕಾರಣರಾಗಿರುವ ಈ ಸಂಚಿಕೆಯ ಎಲ್ಲ ಹಿರಿಯ ಲೇಖಕ ಮಿತ್ರರುಗಳಿಗೂ; ಸಂಚಿಕೆಯ ಮುಖಪುಟ ಕಲೆಗಾಗಿ ತಮ್ಮ ಚಿತ್ರಕಲೆಯೊಂದನ್ನು ನೀಡಿರುವ ಬದುಕಿನ ಬಗ್ಗೆ ತಮ್ಮದೇ ಆದ ವಿಶಿಷ್ಟ ಒಳನೋಟಗಳಿರುವ, ದಟ್ಟ ಮನುಷ್ಯ ಪ್ರೀತಿಯ ನಾಡಿನ ಪ್ರಖ್ಯಾತ ಚಿತ್ರಕಲಾವಿದರಾದ ಕೆ.ಟಿ. ಶಿವಪ್ರಸಾದ್-ಇವರಿಗೆಲ್ಲರಿಗೂ ನನ್ನ ನೆನಕೆಗಳು.

ಎಂದಿನಂತೆ; ಈ ಸಂಚಿಕೆಯು ರೂಪುಗೊಳ್ಳುವಲ್ಲಿ ಎಲ್ಲ ಬಗೆಯ ಸಹಕಾರ ನೀಡುತ್ತಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಗೂ, ರಿಜಿಸ್ಟ್ರಾರ್ ಅವರಿಗೂ ಹಾಗೂ ಅಕಾಡೆಮಿಯ ಎಲ್ಲ ಸಿಬ್ಬಂದಿಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಈ ಬಗೆಯ ಸದಭಿರುಚಿಯ ಬರಹಗಳನ್ನು ನಮ್ಮ ಅನಿಕೇತನ ಓದುಗರು, ಎಂದಿನ ಸಹೃದಯತೆಯಿಂದ ಸ್ವೀಕರಿಸುತ್ತಾರೆಂಬ ವಿಶ್ವಾಸದಿಂದ, ಓದುಗರ ಮತ್ತು ಲೇಖಕರುಗಳೆಲ್ಲರ ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತ ಈ ನನ್ನ ಸಂಚಿಕೆಯ ಮುನ್ನ ಮಾತುಗಳನ್ನು ಮುಗಿಸುವೆ.

ಸಂಪಾದಕ

**ಡಾ. ಎಂ.ಎಸ್. ಶೇಖರ್**

# ಪರಿವಿಡಿ

## ಭಾಗ - ೧

# ರಕ್ತ ಮತ್ತು ಸ್ವಾತಂತ್ರ್ಯ

## ...ಮತ್ತು ಸಾದತ್ ಹಸನ್ ಮಂಟೊ.*

ಎನ್.ಎಸ್. ಶಂಕರ್

**ದೇ**ಶ ವಿಭಜನೆಯಿಂದ ಕೆಲ ವರ್ಷಗಳ ನಂತರ ಒಂದು ಆಲೋಚನೆ ಬಂತು. ಸೆರೆ ಸಿಕ್ಕ ಸೈನಿಕರನ್ನು ಭಾರತ ಪಾಕಿಸ್ತಾನಗಳು ವಿನಿಮಯ ಮಾಡಿಕೊಂಡ ಹಾಗೆಯೇ, ಎರಡೂ ದೇಶದ ಹುಚ್ಚಾಸ್ಪತ್ರೆಗಳಲ್ಲಿ ಉಳಿದುಕೊಂಡ ರೋಗಿಗಳನ್ನು ಆಯಾ ದೇಶಕ್ಕೆ ಒಪ್ಪಿಸಬಾರದೇಕೆ? ಮುಸ್ಲಿಂ ಹುಚ್ಚರನ್ನು ಪಾಕಿಸ್ತಾನಕ್ಕೂ, ಹಿಂದೂ-ಸಿಖ್ ಹುಚ್ಚರನ್ನು ಭಾರತಕ್ಕೂ ಯಾಕೆ ರವಾನಿಸಬಾರದು?

ಯೋಚನೆ ಬಂದ ಮೇಲೆ ಎರಡೂ ದೇಶಗಳ ಉನ್ನತ ಅಧಿಕಾರಿಗಳ ನಡುವೆ ಗಂಭೀರ ಸಮಾಲೋಚನೆಗಳು ನಡೆದು, ಅಂತೂ ಒಪ್ಪಂದಕ್ಕೆ ಸಹಿ ಹಾಕಲಾಯಿತು.

ಈ ಸುದ್ದಿ ಲಾಹೋರಿನ ಹುಚ್ಚಾಸ್ಪತ್ರೆ ತಲುಪಿದಾಗ ಅಲ್ಲಿ ದೊಡ್ಡ ಗೊಂದಲವೇ ಶುರುವಾಯಿತು. ಅಲ್ಲಿದ್ದ ಹುಚ್ಚರು, ಅರೆ ಹುಚ್ಚರು, ಶಿಕ್ಷೆ ತಪ್ಪಿಸಿಕೊಳ್ಳಲು ಲಂಚ ಕೊಟ್ಟು ಹುಚ್ಚರೆಂಬ ಹೆಸರಲ್ಲಿ ಸೇರಿಕೊಂಡ ಕೊಲೆಗಡುಕರು, ಕಡೆಗೆ ಜೈಲು ಸಿಬ್ಬಂದಿಗೂ ಈ ಆಜ್ಞೆಯ ತಲೆಬುಡ ತಿಳಿಯಲಿಲ್ಲ. ಯಾಕೆಂದರೆ, ಪಾಕಿಸ್ತಾನ ಎಲ್ಲಿದೆ ಎಂಬ ಕಲ್ಪನೆ ಅವರಾರಿಗೂ ಇರಲಿಲ್ಲ. ತಾವಿರುವ ಜಾಗ ಪಾಕಿಸ್ತಾನವೋ, ಭಾರತವೋ ಗೊಂದಲ. ಇದು ಭಾರತವಾದರೆ, ಹಾಳಾದ್ದು ಆ ಪಾಕಿಸ್ತಾನ ಅನ್ನುವುದು ಎಲ್ಲಿದೆಯೋ ಇದೇ ಪಾಕಿಸ್ತಾನ ಅನ್ನುವುದಾದರೆ ಮತ್ತೆ ನಿನ್ನೆ ಮೊನ್ನೆಯವರೆಗೂ ಭಾರತ ಅನ್ನಿಸಿಕೊಳ್ಳುತ್ತಿತ್ತಲ್ಲ?!

ಆ ಹುಚ್ಚಾಸ್ಪತ್ರೆಯಲ್ಲಿ ಬಿಷನ್ ಸಿಂಗ್ ಎಂದೊಬ್ಬ ಹುಚ್ಚು ಮುದುಕ. ಗಂಟೆ, ದಿನ, ವಾರ

---

* ಮಂಟೊ ಮತ್ತು ಅವನ ಬರಹ ಕುರಿತ ಧ್ಯಾನ.

ಯಾವುದೂ ಅವನ ಅರಿವಿನಲ್ಲಿರದಿದ್ದರೂ, ತನ್ನೂರು ತೋಬಾ ಟೇಕ್ ಸಿಂಗ್ ಅನ್ನುವುದನ್ನು ಅವನು ಮರೆತಿರಲಿಲ್ಲ. ಅವನು ಆ ಊರಿನ ಜಮೀನ್ದಾರನಾಗಿದ್ದು ಇದ್ದಕ್ಕಿದ್ದಂತೆ ಹುಚ್ಚು ಹಿಡಿದುಬಿಟ್ಟಿತ್ತು ಅನ್ನುತ್ತಿದ್ದರು. ಕೋಮು ಗಲಭೆಗಳು ಶುರುವಾಗುವವರೆಗೂ ವಾರಕ್ಕೊಮ್ಮೆ ಅವನ ಬಂಧುಗಳು ಊರಿನಿಂದ ಬಂದು ಅವನನ್ನು ನೋಡಿ ಹೋಗುವುದು ಸಾಧ್ಯವಾಗುತ್ತಿತ್ತು. ಅವರು ಬರುವ ದಿನ ಅದು ಹೇಗೆ-ಆರನೇ ಇಂದ್ರಿಯದ ಮೂಲಕವೆಂಬಂತೆ ಗೊತ್ತಾಗುತ್ತಿತ್ತೋ, ಆವತ್ತು ಮಾತ್ರ ಬಿಷನ್ ಸಿಂಗ್ ಸ್ನಾನ ಮಾಡಿ, ತಲೆ ಬಾಚಿ ತಯಾರಾಗಿಬಿಡುತ್ತಿದ್ದ. ಈಗ ಅವರೂ ಬರುವುದು ನಿಂತುಹೋಗಿ ಹೊರಗಿನ ಸಂಪರ್ಕ ಸಂಪೂರ್ಣ ಕಡಿದುಹೋಗಿತ್ತು. ಅಷ್ಟಾದರೂ ಅವನು ಯಾವಾಗಲೂ ತನ್ನೂರಿನ ಬಗ್ಗೆ ವಿಚಾರಿಸುತ್ತಿದ್ದುದರಿಂದ ಅವನಿಗೂ ತೋಬಾ ಟೇಕ್‌ಸಿಂಗ್ ಎಂಬ ಹೆಸರೇ ಬಿದ್ದಿತ್ತು.

ಅಂಥ ತೋಬಾ ಟೇಕ್‌ಸಿಂಗ್ ತಾನು ಆ ಆಸ್ಪತ್ರೆಯಲ್ಲಿದ್ದ ಹದಿನೈದು ವರ್ಷಗಳಲ್ಲಿ ಒಂದು ಗಳಿಗೆಯೂ ಕಣ್ಣುರೆಪ್ಪೆ ಮುಚ್ಚಿ ನಿದ್ದೆ ಮಾಡಿಲ್ಲ ಅನ್ನುವ ಪ್ರತೀತಿಯಿತ್ತು. ಮತ್ತು ಸದಾ ನಿಂತೇ ಇರುತ್ತಿದ್ದ ಅವನ ಕಾಲುಗಳು ಬ್ರಹ್ಮಾಂಡವಾಗಿ ಬಾತುಕೊಂಡಿದ್ದರೂ ಆ ಕಡೆ ಅವನ ಲಕ್ಷ್ಯವಿರಲಿಲ್ಲ. ಮತ್ತು ಆಗಾಗ ಅಸಂಬದ್ಧವಾಗಿ "ಊಪರ್ ದಿ ಗೂಡ್ ಗೂಡ್ ದಿ ಅನೆಕ್ಸ್ ದಿ ಬೇ ಧಾಯನಾ ದಿ ಮೂಂಗ್ ದಿ ದಾಲ್ ಆಫ್ ದಿ ಲಾಲ್ಟೇ.." ಎಂದೇನೇನೋ ಗೊಣಗುತ್ತಿದ್ದ. ಅವನು ಈಗ ಸಿಕ್ಕಸಿಕ್ಕವರನ್ನೆಲ್ಲ ತನ್ನೂರು ತೋಬಾ ಟೇಕ್ ಸಿಂಗ್ ಭಾರತದಲ್ಲಿದೆಯೋ ಪಾಕಿಸ್ತಾನದಲ್ಲೋ ಎಂದು ವಿಚಾರಿಸುತ್ತಿದ್ದರೂ ಯಾರಿಂದಲೂ ಸಮರ್ಪಕ ಉತ್ತರ ಸಿಗದೆ ಚಡಪಡಿಕೆ ಹೆಚ್ಚಾಗಿತ್ತು. ಒಮ್ಮೆ ಇನ್ನೊಬ್ಬ ಹುಚ್ಚನನ್ನು-ಆತ ತನ್ನನ್ನು ತಾನು ದೇವರು ಅಂದುಕೊಂಡಿದ್ದ-ಇದೇ ಪ್ರಶ್ನೆ ಕೇಳಿದಾಗ ಆ ಊರು ಭಾರತದಲ್ಲೂ ಇಲ್ಲ, ಪಾಕಿಸ್ತಾನದಲ್ಲೂ ಇಲ್ಲ; ಯಾಕೆಂದರೆ ನಾವಿನ್ನೂ ತಕ್ಕ ಆಜ್ಞೆ ಹೊರಡಿಸಿಲ್ಲ ಎಂಬ ಉತ್ತರ ಬಂತು! ಬಿಷನ್ ಹಾಗೂ ಬಿಡದೆ ಸ್ಪಷ್ಟನೆಗಾಗಿ ಪೀಡಿಸಿದಾಗ ಆ ದೇವರು ಬೇರೆ ಬೇರೆ ಇನ್ನೂ ಮುಖ್ಯ ವಿಚಾರಗಳಲ್ಲಿ ಮಗ್ನವಾಗಿದ್ದರಿಂದ ಇವನ ಕಡೆ ಗಮನ ಕೊಡಲಿಲ್ಲ. ಕಡೆಗೆ ತೋಬಾ ಟೇಕ್ ಸಿಂಗ್ ಅದೇ "ಊಪರ್ ದಿ ಗೂಡ್ ಗೂಡ್..." ಗೊಣಗಿಕೊಂಡು ಹೋದ,-"ನೀನು ಮುಸ್ಲಿಂ ದೇವರಾದ್ದರಿಂದ ನನ್ನ ಪ್ರಾರ್ಥನೆಗೆ ಓಗೊಡಲಿಲ್ಲ. ಸಿಖ್ ದೇವರಾಗಿದ್ದರೆ ಉತ್ತರಿಸುತ್ತಿದ್ದೆ" ಎಂಬರ್ಥದಲ್ಲಿ...

ಕೊನೆಗೊಂದು ಚಳಿಗಾಲದ ಸಂಜೆ ಹುಚ್ಚರನ್ನು ಆಯಾ ದೇಶಕ್ಕೆ ವಿಧ್ಯುಕ್ತವಾಗಿ ಒಪ್ಪಿಸಲೆಂದು ಇವರನ್ನೆಲ್ಲ ಬಸ್ಸಿನಲ್ಲಿ ಹತ್ತಿಸಿಕೊಂಡು ಸಶಸ್ತ್ರ ಕಾವಲುಗಾರರು ಮತ್ತು ಅಧಿಕಾರಿಗಳು ವಾಘಾ ಗಡಿಗೆ ಬರುತ್ತಾರೆ. ಅಲ್ಲಿ ವಿನಿಮಯದ ವಿಧಿ ವಿಧಾನಗಳು ಮೊದಲಾಗುತ್ತಿದ್ದಂತೆಯೇ ದೊಡ್ಡ ಕೋಲಾಹಲವೇ ಎದ್ದುಬಿಡುತ್ತದೆ. ಮೊದಲಿಗೆ ಅವರಾರಿಗೂ ತಾವಿರುವ ಜಾಗದಿಂದ ಕದಲುವ ಮನಸ್ಸಿಲ್ಲ. ಇವರು ಯಾಕೆ, ಎಲ್ಲಿಗೆ ಕರೆತಂದಿದ್ದಾರೆ ಗೊತ್ತಿಲ್ಲ. ಅಧಿಕಾರಿಗಳು ಬಲವಂತ ಮಾಡಿದಾಗ ಬಿಚ್ಚೊಟ್ಟರು ಒಂದೊಂದು ದಿಕ್ಕಿನಲ್ಲಿ ಚೆಲ್ಲಾಪಿಲ್ಲಿ ಓಡತೊಡಗಿದರು. ಕೆಲವರಂತೂ ನಟ್ಟ ನಗ್ನರಾಗಿದ್ದರು. ಕೆಲವರು ಬೈಯುತ್ತಿದ್ದರೆ, ಇನ್ನು ಹಲವರು ಹಾಡುತ್ತಿದ್ದರು. ಮತ್ತೂ ಹಲವರು ಬಿಕ್ಕಳಿಸಿ ಅಳುತ್ತಿದ್ದರು. ಅಲ್ಲಲ್ಲೇ ಹೊಡೆದಾಟಗಳೂ ಶುರುವಾದವು. ಹೆಂಗಸರ ಗಲಾಟೆ ಇನ್ನೂ ಜೋರಾಗಿತ್ತು. ಕೊರೆಯುವ ಚಳಿ.

ಬಿಷನ್‌ಸಿಂಗ್‌ನ ಸರದಿ ಬಂದಾಗ ಆತ ಹೆಸರುಗಳನ್ನು ಬರೆದುಕೊಳ್ಳಲು ಕೂತಿದ್ದ ಗುಮಾಸ್ತನನ್ನು

ಕೇಳಿದ : ತೋಬಾ ಟೇಕ್ ಸಿಂಗ್ ಭಾರತದಲ್ಲಿಯೋ, ಪಾಕಿಸ್ತಾನದಲ್ಲೋ? ಅದಕ್ಕೆ ಆತ ಅಸಭ್ಯವಾಗಿ ನಕ್ಕು "ಪಾಕಿಸ್ತಾನದಲ್ಲಿ" ಅಂದ.

ಬಿಷನ್‌ಸಿಂಗ್ ಉರುಫ್ ತೋಬಾ ಟೇಕ್ ಸಿಂಗ್ ಇದ್ದಕ್ಕಿದ್ದಂತೆ ಅಲ್ಲಿಂದ ಓಡತೊಡಗಿದ. ಅಧಿಕಾರಿಗಳು ಬೆನ್ನಟ್ಟಿ ಹಿಡಿದು ಅವನನ್ನು ಭಾರತದ ಗಡಿಯ ಕಡೆ ದಬ್ಬಲೆತ್ನಿಸಿದರೂ ಆ ಹುಚ್ಚು ಮುದುಕ "ಇದೇ ತೋಬಾ ಟೇಕ್ ಸಿಂಗ್" ಅನ್ನುತ್ತ ಒಂದು ಕಡೆ ಚಂಡಿ ಹಿಡಿದು ವಿಗ್ರಹವಂತೆ ನಿಂತುಬಿಟ್ಟ. ಆತನೊಬ್ಬ ನಿರುಪದ್ರವಿ ಮುದುಕನಾದ್ದರಿಂದ ಅವನ ಪಾಡಿಗೆ ಅವನನ್ನು ಬಿಟ್ಟು ಉಳಿದ ಶಿಷ್ಟಾಚಾರಗಳನ್ನು ಮುಗಿಸಿದರು. ಕಡೆಗೆ ಬೆಳಕು ಹರಿಯುವ ಹೊತ್ತಿಗೆ ಆತ ಒಮ್ಮಿಂದೊಮ್ಮೆಲೇ ಚೀರಿಕೊಂಡಾಗ ಎರಡೂ ಕಡೆಯ ಅಧಿಕಾರಿಗಳು ಓಡಿಬಂದರು. ಆದರೆ ಅವರು ಹತ್ತಿರ ಬರುವುದರೊಳಗೇ, ಹದಿನೈದು ವರ್ಷಗಳಿಂದ ರೆಪ್ಪೆ ಮಿಟುಕಿಸದೆ ನಿಂತೇ ಕಳೆದಿದ್ದ ತೋಬಾ ಟೇಕ್ ಸಿಂಗ್ ನಿಂತಲ್ಲೇ ಕುಸಿದು ನೆಲಕ್ಕೆ ಬಿದ್ದಿದ್ದ.

ಈ ಕಡೆ ಮುಳ್ಳಿನ ತಂತಿ ಬೇಲಿಯ ಹಿಂದೆ ಭಾರತ; ಇನ್ನೊಂದು ಕಡೆ ಇನ್ನಷ್ಟು ಮುಳ್ಳುಬೇಲಿಯ ಹಿಂದೆ ಪಾಕಿಸ್ತಾನ. ನಡುವೆ ಯಾರಿಗೂ ಸೇರದ, ಯಾವ ಹೆಸರೂ ಇರದ ತಟಸ್ಥ ಭೂಮಿಯ (no man's land) ಪುಟ್ಟ ತುಣುಕಿನ ಮೇಲೆ ಬಿದ್ದುಕೊಂಡ ತೋಬಾ ಟೇಕ್ ಸಿಂಗ್....

ಇದು ಸಾದತ್ ಹಸನ್ ಮಂಟೋ ಎಂಬ ಮೇರು ಲೇಖಕನ ಶ್ರೇಷ್ಠ ಕಥೆಯೊಂದರ ಸಾರ.

ತನ್ನದಾದ ಭಾರತದಲ್ಲಿ ಮುಸ್ಲಿಮನಾಗಿ ಹುಟ್ಟಿ ತನ್ನದಲ್ಲದ ಪಾಕಿಸ್ತಾನದಲ್ಲಿ ಸತ್ತ ಮಂಟೊ, ಉಪಖಂಡದ ಎದೆ ಸೀಳಿದ ವಿಭಜನೆಯ ಶಾಪಕ್ಕೆ ತುತ್ತಾಗಿ ಮಹಾ ಕೋಮುವಾದಿಯಾಗಬಹುದಿತ್ತು; ಅಥವಾ ಹುಚ್ಚನಾಗಬಹುದಿತ್ತು; ಅಥವಾ ಭಂಡನಾಗಿದ್ದರೆ ಪಾಕಿಸ್ತಾನದ ಭಾರತ-ವಿರೋಧಿ ರಾಜಕಾರಣಿಯಾಗಿ ಬೆಂಕಿ ಕಾರಬಹುದಿತ್ತು. ಆದರೆ ಮಂಟೊ ಅದೇನೂ ಆಗದೆ ತನ್ನ ಕಥಾನಾಯಕ ತೋಬಾ ಟೇಕ್ ಸಿಂಗ್‌ನಂತೆ-ಈ ಕಡೆ ಭಾರತವಲ್ಲದ ಆ ಕಡೆ ಪಾಕಿಸ್ತಾನವಲ್ಲದ, ಹಿಂದೂ ಅಲ್ಲದ ಮುಸ್ಲಿಮನಲ್ಲದ, ಯಾವ ಹೆಸರೂ ಇಲ್ಲದ ತನ್ನದೇ ತಟಸ್ಥ ನೆಲದ ತುಣುಕು ಅರಸಿ ಬರೆಯತೊಡಗಿದ....

ಸ್ವಾತಂತ್ರ್ಯೋತ್ಸವದ ಈ ತಿಂಗಳಲ್ಲಿ, ನಾನು ಹುಟ್ಟುವ ಮೊದಲೇ ನಮ್ಮ ದೇಶ ಪಡೆದ ಸ್ವಾತಂತ್ರ್ಯ ಯಾವ ಯಾವ ಅರ್ಥಗಳಲ್ಲಿ ನನ್ನನ್ನು ಮುಟ್ಟಿದೆ ಎಂದು ನೋಡಿಕೊಳ್ಳುವಾಗ, ಈ ಸ್ವಾತಂತ್ರ್ಯಕ್ಕೆ ಮೆತ್ತಿಕೊಂಡ ರಕ್ತದ ವಾಸನೆ ಬೆನ್ನಟ್ಟಿ ಬರುತ್ತದೆ. ನಮ್ಮೆರಡು ದೇಶಗಳಲ್ಲಿ ಇನ್ನೂ ಆರದ ಗಾಯಗಳ ಹಸಿ ಚುಂಗು ಮೂಗಿಗೆ ಬಡಿಯುತ್ತದೆ. ಜೊತೆಗೆ, ಈ ಅರ್ಥವಿಲ್ಲದ ಹುಚ್ಚಿಗೆ ಕಂಗೆಟ್ಟು ತಡಕಾಡುವಾಗ, ವಿಭಜನೆಯ ದುರಂತಕ್ಕೆ ಎದೆಯೊಡ್ಡಿ ಮಾತಾಡಿದ ಸಾದತ್ ಹಸನ್ ಮಂಟೊ ನೆನಪಾಗುತ್ತಾನೆ....

**ಮಂ**ಟೊ ಜೀವನ ಬೇರುಗಳು ಅಲ್ಲಾಡುವಂಥ ಸಂದಿಗ್ಧ ಎದುರಾದದ್ದು, ಭಾರತಕ್ಕೆ ಸ್ವಾತಂತ್ರ್ಯ ಬಂದ ಮುಂಚಿನ ಮತ್ತು ನಂತರದ ಕೋಮು ಹಿಂಸಾಕಾಂಡದ ಸಂದರ್ಭದಲ್ಲಿ.

ವಿಭಜನೆಯಿಂದಾಗಿ ಉಪಖಂಡದಲ್ಲಿ ಹರಿದ ಧಾರ್ಮಿಕ ಮತ್ತು ಪ್ರತ್ಯೇಕವಾದದ ರಕ್ತಕ್ಕೆ ಸಾಟಿಯಾದ ಉದಾಹರಣೆಗಳು ನಾಗರಿಕ ಮನುಷ್ಯನ ಚರಿತ್ರೆಯಲ್ಲೇ ಅಪರೂಪ. ಆಗೊಮ್ಮೆ

ಈಗೊಮ್ಮೆ ಎದುರಾಬದುರಾಗಿ ಕಟ್ಟಾಡಿದ್ದು ಬಿಟ್ಟರೆ ಶತಮಾನಗಳ ಕಾಲ ಸಾಮಾನ್ಯ ಸೈರಣೆಯಲ್ಲೇ ಬದುಕಿದ್ದ ಜನಾಂಗಗಳಿಗೆ ಆಗ ಒಮ್ಮಿಂದೊಮ್ಮೆಲೇ ಹುಚ್ಚು ಹಿಡಿದಿತ್ತು. ಸರ್ವನಾಶದ ಆ ಮೃಗೀಯ ರೊಚ್ಚು, ದೇಶದ ಆತ್ಮಕ್ಕೆ ಮೂಲಭೂತವಾದ ಯಾವುದೋ ಜೀವತಂತುವನ್ನೇ ಕಡಿದು ಬಿಸಾಕಿತ್ತು. ಆ ದಿನಗಳಲ್ಲಿ ಕೋಮುದ್ವೇಷಕ್ಕೆ ಬಲಿಯಾದವರ ಸಂಖ್ಯೆ ನಿಖರವಾಗಿ ಗೊತ್ತಿಲ್ಲ. ಲಾರ್ಡ್ ಮೌಂಟ್ ಬ್ಯಾಟನ್ ಎರಡೂವರೆ ಲಕ್ಷದ ಸಂಖ್ಯೆ ದಾಟಲು ಹೆದರಿದರೆ, ಕೆಲವರು ಐದು ಲಕ್ಷ ಅಂದರು. ಇಪ್ಪತ್ತು ಲಕ್ಷವೆಂದ ಇತಿಹಾಸಕಾರರೂ ಇದ್ದಾರೆ! ನೆನಪಿಡಿ : ಇದು ಸುನಾಮಿ, ಭೂಕಂಪಗಳಂಥ ನೈಸರ್ಗಿಕ ದುರಂತವಲ್ಲ; ಜರ್ಮನಿಯಲ್ಲಾದಂತೆ ಸರ್ಕಾರವೇ ನಡೆಸಿದ ಮಾರಣಹೋಮವೂ ಅಲ್ಲ. ವರ್ಷಗಳ ಕಾಲ ಜೊತೆಗೇ ಇದ್ದ ಸ್ನೇಹಿತರು, ನೆರೆಹೊರೆಯವರೇ- ಹೆಂಗಸರು, ಮಕ್ಕಳು, ಮುದುಕರನ್ನೂ ಬಿಡದೆ ಪರಸ್ಪರ ಕೊಂದುಕೊಂಡ ಹಿಂಸಾಗಾಥೆ....

ಅಷ್ಟೂ ಕಾಲ ಜಾತ್ಯತೀತವಾಗಿಯೇ ಉಳಿದಿದ್ದ ಮುಂಬಯಿ ಚಿತ್ರರಂಗ ಕೂಡ ಈ ಕ್ಷೋಭೆಯಿಂದ ಪಾರಾಗುವುದು ಸಾಧ್ಯವಿರಲಿಲ್ಲ.

ಮಂಟೋನ ಪ್ರತಿಭೆಗೆ ಮೊದಲ ಮನ್ನಣೆ ನೀಡಿದ್ದೇ ಹಿಂದಿ ಚಿತ್ರರಂಗ. ಕಟ್ಟುನಿಟ್ಟಿನ ತಂದೆಯ ಎರಡನೇ ಹೆಂಡತಿಯ ಕೊನೆಯ ಮಗನಾಗಿ, ಹನ್ನೊಂದು ಜನ ಸೋದರ ಸೋದರಿಯರೊಂದಿಗೆ ಲೂಧಿಯಾನದ ಸಮ್ರಾಲದಲ್ಲಿ ಹುಟ್ಟಿದ (೧೯೧೨) ಮಂಟೋ ಬೆಳೆದಿದ್ದು, ಮಲತಾಯಿ ನೆರಳಿನ ಪ್ರೀತಿರಹಿತ ಕುಟುಂಬದಲ್ಲಿ. ತಂದೆಯವರ ಅತೀವ ಭಯ. ತಾರುಣ್ಯಕ್ಕೆ ಅಡಿಯಿಡುತ್ತಿದ್ದ ಮಂಟೋ, ಅಮೃತಸರದ ರಾತ್ರಿಗಳನ್ನು ಪೋಲಿ ಸಹವಾಸದಲ್ಲಿ ಕಳೆಯುತ್ತ ಮೆಟ್ರಿಕ್‌ನಲ್ಲಿ ಎರಡು ಸಲ ಡುಂಕಿ ಹೊಡೆದ. ಮೂರನೇ ಸಲ ಕಷ್ಟಪಟ್ಟು ಪಾಸಾದರೂ, ಆ ಸೋಲಿನ ಅವಮಾನದಿಂದ ಆತ ಕೊನೆಯವರೆಗೂ ಮುಕ್ತನಾಗಲಿಲ್ಲ.

೧೯೩೭ರಲ್ಲಿ ಸಿನಿಮಾ ಮಾಸಿಕವೊಂದರ ಸಂಪಾದಕನಾಗಿ ಮುಂಬಯಿಗೆ ಬಂದ ಮಂಟೋ-ತಾರೆಗಳು, ಚೆಲುವೆಯರು, ಮೈಕಸುಬಿನವರು ಮತ್ತು ವಂಚಕರಿಂದ ತುಂಬಿದ್ದ ಚಿತ್ರಲೋಕವನ್ನು ಕಂಡ. ಮುಂದಕ್ಕೆ ಎರಡನೇ ವಿಶ್ವಯುದ್ಧದ ಸಮಯದಲ್ಲಿ (೧೯೪೧-೪೨) ದೆಹಲಿ ಆಕಾಶವಾಣಿಯಲ್ಲಿ ಬರಹಗಾರನಾಗಿ ದುಡಿದು ಅಲ್ಲೂ ಜಗಳವಾಡಿ ಹೊರಬಂದರೂ, ಅದಕ್ಕೆ ಮುಂಚೆಯೇ ಆಕ್ಷೀ ನಗರಿಯಾ ಚಿತ್ರಕ್ಕೆ ಕಥೆ ಬರೆದು ಮಂಟೋ ಚಿತ್ರರಂಗದ ಭ್ರಮಾಲೋಕಕ್ಕೆ ಕಾಲಿರಿಸಿದ್ದಾನೆ. ಅದಕ್ಕೂ ಮುಂಚೆಯೇ ತೀಕ್ಷ್ಣ ಸ್ವಂತಿಕೆಯ ಬರಹಗಾರನಾಗಿಯೂ ಖ್ಯಾತನಾಗಿದ್ದಾನೆ. ಹಾಗಾಗಿ ಮುಂಬಯಿಗೆ ವಾಪಸು ಬಂದಾಗ ಅವನಿಗೆ ತುಂಬು ಹೃದಯದ ಸ್ವಾಗತ. ಆಠ್ ದಿನ್, ಮಿರ್ಜಾ ಘಾಲಿಬ್ ಮುಂತಾದ ಚಿತ್ರಗಳಲ್ಲಿ; ಹಾಗೂ ಬಾಂಬೇ ಟಾಕೀಸಿನ 'ದಾದಾಮೋನಿ' ಅಶೋಕ್‌ಕುಮಾರ್‌ನಂಥ ಸಮಾನ ಮನಸ್ಕ ಗೆಳೆಯರೊಂದಿಗೆ ಕೆಲಸ ಮಾಡುವ ಅವಕಾಶ. ಚಿತ್ರರಂಗ ಅವನಿಗೆ ಹೆಸರು, ಹಣ, ಸ್ವಾತಂತ್ರ್ಯ ಎಲ್ಲ ಸುರಿದು ಕೊಟ್ಟರೂ ಜೀವಮಾನವಿಡೀ ಪ್ರೀತಿಯಿಲ್ಲದೆ ಕಳೆದ ಅವನ ತಳಮಳ ನಿಂತಿಲ್ಲ. ತಾನು ಬೇಡದವನು ಎಂಬ ಅಶಾಂತಿ ತಗ್ಗಿಲ್ಲ....

ಆ ಸಮಯದಲ್ಲಿ ಬಾಂಬೇ ಟಾಕೀಸಿನಲ್ಲಿ ಪ್ರಮುಖ ಸ್ಥಾನಗಳನ್ನು ಪಡೆದಿದ್ದ ಮುಸ್ಲಿಂ ಪ್ರತಿಭೆಗಳ ವಿರುದ್ಧ ಅಶೋಕ್ ಕುಮಾರ್‌ಗೆ ಬೆದರಿಕೆ ಪತ್ರಗಳು ಬರತೊಡಗಿದಾಗ, ಮುಟ್ಟಿದರೆ ಮುನಿಯುವಂಥ ಸೂಕ್ಷ್ಮ ಪ್ರಕೃತಿಯ ಮಂಟೋ ಕೆಲಸಕ್ಕೆ ಹೋಗುವುದನ್ನೇ ನಿಲ್ಲಿಸಿದ. ಸದಾ ರೂಮಿನ ಸೋಫಾ

ಮೇಲೆ ಶೂನ್ಯವನ್ನು ದಿಟ್ಟಿಸುತ್ತಾ ಬಿದ್ದುಕೊಂಡಿರುತ್ತಿದ್ದ. ನಿಜಕ್ಕೂ ಅವನಿಗೆ ದೇಶ ಬಿಟ್ಟು ಹೋಗುವ ಪ್ರಚೋದನೆ ಯಾವ ಗಳಿಗೆಯಲ್ಲಿ, ಯಾವ ಕಾರಣಕ್ಕೆ ಬಂತೋ ಗೊತ್ತಿಲ್ಲ. ಅವನ ಕಥೆಗಳಲ್ಲಿ ಸಿಗುವ ಸುಳಿವುಗಳನ್ನೇ ಆಧರಿಸಿ ಊಹೆ ಮಾಡಬೇಕಷ್ಟೇ.

ಆ ಸಮಯದಲ್ಲೊಮ್ಮೆ ಮಂಟೊ ತನ್ನ ಪರಮಾಪ್ತಮಿತ್ರ ಶ್ಯಾಂ-ಆಗಿನ ಜನಪ್ರಿಯ ನಾಟಕ ನಟ-ಜತೆ ಪಾಕಿಸ್ತಾನದ ರಾವಲ್ಪಿಂಡಿಯಿಂದ (ಶ್ಯಾಂನ ಹುಟ್ಟೂರು) ಬಂದ ಕೆಲವು ಸಿಖ್ ನಿರಾಶ್ರಿತರನ್ನು ಭೇಟಿಯಾಗುತ್ತಾನೆ. ಆ ಬಗ್ಗೆ ಮಂಟೊ ಬರೆಯುತ್ತಾನೆ :

....ಅವರು ತಪ್ಪಿಸಿಕೊಂಡು ಬಂದ ಭಯಾನಕ ಕಥನವನ್ನು ಮೌನವಾಗಿ ಕೇಳುತ್ತ ದಿಗ್ಭ್ರಾಂತರಾಗಿದ್ದೆವು. ಶ್ಯಾಂ ತೀರಾ ವಿಚಲಿತನಾಗಿದ್ದ. ಅವನೊಳಗೆ ನಡೆದಿದ್ದ ಹೊಯ್ದಾಟ ನನ್ನ ಅರಿವಿಗೆ ಬರುತ್ತಿತ್ತು. ಹೊರ ಬಂದ ಮೇಲೆ ಕೇಳಿದೆ: ನಾನೂ ಮುಸ್ಲಿಂ, ನಿನಗೆ ನನ್ನನ್ನು ಕೊಲ್ಲಬೇಕು ಅನಿಸುತ್ತಿಲ್ಲವೇ? “ಈಗಿಲ್ಲ”-ಅವನು ಗಂಭೀರವಾಗಿ ಉತ್ತರ ಕೊಟ್ಟ-“ಆದರೆ ಮುಸ್ಲಿಮರ ದೌರ್ಜನ್ಯಗಳ ಬಗ್ಗೆ ಅವರು ಹೇಳುತ್ತಿದ್ದ ಆ ಗಳಿಗೆಯಲ್ಲಿ ನಾನು ನಿನ್ನನ್ನು ಕೊಂದರೂ ಕೊಲ್ಲಬಹುದಿತ್ತು...”! ಆ ಉತ್ತರ ಕೇಳಿ ನಾನು ತತ್ತರಿಸಿಹೋದೆ....

ಇದೇ ಬಗೆಯ ಸಂದರ್ಭ ಅವನದೊಂದು ಕಥೆಯಲ್ಲೂ ಬರುತ್ತದೆ. ಆಪ್ತ ಹಿಂದೂ ಗೆಳೆಯ ಜುಗಲ್‌ನ ಇಂಥದೇ ಒಂದು ಮಾತಿನಿಂದ ಮುಸ್ಲಿಂ ಕಥಾನಾಯಕ ಮುಮ್ತಾಜ್ ಯಾರ ಮಾತೂ ಕೇಳದೆ ಪಾಕಿಸ್ತಾನಕ್ಕೆ ಹೋಗಿಬಿಡುತ್ತಾನೆ. ಕಡೆಗೆ ಮಂಟೊ ಮಾಡಿದ್ದು ಅದೇ. ಅಶೋಕ್‌ಕುಮಾರ್ ಮತ್ತು ವಚ್ಚಾ ಅನ್ನುವ ಬಾಂಬೇ ಟಾಕೀಸಿನ ಗೆಳೆಯರ ಒತ್ತಾಯವನ್ನೂ ತಳ್ಳಿಹಾಕಿ ಲಾಹೋರಿಗೆ ಹೊರಟೇಬಿಡುತ್ತಾನೆ. ೧೯೪೮ರ ಜನವರಿಯಲ್ಲಿ. ಆಗಲೂ ಅವನಿಗೆ ತನ್ನ ತಾಯ್ನೆಲ ಯಾವುದೆಂಬ ನಿಶ್ಚಯವಿಲ್ಲ. ಹೆಂಡತಿ-ಮೂವರು ಹೆಣ್ಣು ಮಕ್ಕಳ ಅವನ ಕುಟುಂಬ ಮೊದಲೇ ಅಲ್ಲಿಗೆ ಹೋಗಿ ನೆಲೆಸಿದ್ದರೂ, ಆ ಸಮಯದಲ್ಲಿ ಅದಿನ್ನೂ ಪಾಕಿಸ್ತಾನವಲ್ಲ. ಮತ್ತು ಈ ವಿದಾಯ ಅವನಿಗೆ ಸುಲಭದ್ದಾಗಿರಲಿಲ್ಲ. ಯಾಕೆಂದರೆ ಸಾಯುವವರೆಗೂ ಮುಂಬಯಿ ಸೆಳೆತದಿಂದ ಅವನು ಪಾರಾಗಲಿಲ್ಲ. “ಯಾವ ಪ್ರಶ್ನೆಗಳನ್ನೂ ಕೇಳದ” ಮುಂಬಯಿ ಅವನ ಸ್ವಂತದ್ದಾಗಿತ್ತು. ಈಗ ಬಲಿತ ಮರದ ಬೇರು ಕಿತ್ತು ಇನ್ನೊಂದು ಕಡೆ ನೆಟ್ಟಂತೆ-ಮಂಟೊ ಬದುಕಿನ ಸೂತ್ರವೇ ಹರಿದುಹೋಯಿತು. ಹಾಗೆ ಲಾಹೋರ್-ಅಥವಾ ಪಾಕಿಸ್ತಾನ-ಅವನಿಗೆಂದೂ ಸ್ವಂತದ್ದಾಗಲೇ ಇಲ್ಲ.

ತನ್ನ ಆತ್ಮಕ್ಕೆ ಕೊಳ್ಳಿಯಿಟ್ಟ ಈ ಹೃದಯ ವಿದ್ರಾವಕ ತಲ್ಲಣವನ್ನು ಅವನು ಅರಗಿಸಿಕೊಳ್ಳಲೇಬೇಕಿತ್ತು. ಚರಿತ್ರಕಾರರು ಮತ್ತು ಸಮಾಜ ವಿಜ್ಞಾನಿಗಳೂ ಹೆಜ್ಜೆಯಿಡಲಾಗದ ಸೋತ ಕಡೆ ಭೇದಿಸಿ ಅರಿಯುವುದು-ಬರಹಗಾರ ಮಂಟೊಗೆ ಜೀವನ್ಮರಣದ ಪ್ರಶ್ನೆಯಾಗಿತ್ತು:

....ವಿಭಜನೆ ನಂತರ ಸಂಭವಿಸಿದ ವಿಪ್ಲವದ ಪರಿಣಾಮಗಳನ್ನು ನಾನು ಬಹಳ ದೀರ್ಘಕಾಲ ಒಪ್ಪಿಕೊಳ್ಳಲು ಸಾಧ್ಯವಾಗಲಿಲ್ಲ. ಈಗಲೂ ನನ್ನ ಮನಸ್ಥಿತಿ ಅದೇ. ಆದರೆ ಕಡೆಗೊಮ್ಮೆ ಈ ಭಯಾನಕ ವಾಸ್ತವವನ್ನು ನಾನು ಆತ್ಮಮರುಕ ಅಥವಾ ಹತಾಶೆಯಿಲ್ಲದೆ ಸ್ವೀಕರಿಸಲು ಸಾಧ್ಯವಾಯಿತೇನೋ. ಮತ್ತು ಆ ಹಾದಿಯಲ್ಲಿ, ಈ ಮನುಷ್ಯ ನಿರ್ಮಿತ ನೆತ್ತರ ಕಡಲಿನಿಂದ ವಿರಳ ರಂಗಿನ ಮುತ್ತುಗಳನ್ನು ಹೆಕ್ಕಿ ತೆಗೆಯಲು ಯತ್ನಿಸಿದೆ. ಮನುಷ್ಯ ಮನುಷ್ಯನನ್ನು ಕೊಲ್ಲುವಾಗಿನ

ವಿಕಟಚಿತ್ರ ಧೃಷತೆ; ಕೆಲವರಲ್ಲಿ ಮೂಡಿದ ಪಶ್ಚಾತ್ತಾಪ; ತಮ್ಮಲ್ಲಿನ್ನೂ ಮನುಷ್ಯ ಭಾವನೆಗಳೇಕೆ ಉಳಿದಿವೆಯೆಂದು ದಿಗ್ಭ್ರಮೆಗೊಳ್ಳುವ ಕೊಲೆಗಡುಕರ ಕಣ್ಣೀರು....

ಮತ್ತು ಈ ದುರಂತದ ನಿರರ್ಥಕತೆ. ಭಾರತ ತೊರೆದುಹೋದ ಕತೆಯಲ್ಲಿ ಮಂಟೋನ ನಾಯಕ ಹೇಳುತ್ತಾನೆ:

....ಎರಡು ಲಕ್ಷ ಜನ ಪ್ರಾಣ ಕಳೆದುಕೊಂಡಿದ್ದಕ್ಕಿಂತ ದೊಡ್ಡ ದುರಂತವೆಂದರೆ-ಇಷ್ಟು ಜೀವಗಳ ನಷ್ಟ ಕೂಡ ವ್ಯರ್ಥವಾಯಿತು ಅನ್ನುವುದು. ಒಂದು ಲಕ್ಷ ಹಿಂದೂಗಳನ್ನು ಕೊಂದ ಮುಸ್ಲಿಮರು, ತಾವು ಹಿಂದೂ ಧರ್ಮವನ್ನೇ ನಾಶ ಮಾಡಿದೆವು ಅಂದುಕೊಳ್ಳಬಹುದು. ಆದರೆ ಹಿಂದೂ ಧರ್ಮ ಸತ್ತಿಲ್ಲ, ಸಾಯುವುದೂ ಇಲ್ಲ. ಅದೇ ರೀತಿ ಒಂದು ಲಕ್ಷ ಮುಸ್ಲಿಮರನ್ನು ಕೊಂದ ಹಿಂದೂಗಳು ಇಸ್ಲಾಂ ಧರ್ಮವನ್ನೇ ನಾಶ ಮಾಡಿದ್ದಾಗಿ ಸಂಭ್ರಮಪಡಬಹುದು. ಆದರೆ ಇಸ್ಲಾಂಗೆ ಯಾವ ಕೊಂಕೂ ತಾಗಿಲ್ಲ...(ಹಿಂದೂ ಗೆಳೆಯ ಜುಗಲ್‌ಗೆ) ನೀನು ನನ್ನನ್ನು ಕೊಂದಿದ್ದರೆ, ನೀನು ಸಾಯಿಸಿದ್ದು ನಿನ್ನ ಗೆಳೆಯನಾದ ಮುಮ್ತಾಜ್ ಎಂಬ ಮುಸ್ಲಿಮನನ್ನಲ್ಲ, ಒಬ್ಬ ಮನುಷ್ಯನನ್ನು ಎಂಬುದು ನಿನ್ನ ಅರಿವಿಗೆ ಬರುತ್ತಿತ್ತು. ಅಂದರೆ ಸತ್ತವನೊಬ್ಬ ಸೂಳೆಮಗನಾಗಿದ್ದರೆ ನೀನು ಅವನ 'ಸೂಳೇಮಗತನ'ವನ್ನು ಕೊಲ್ಲಲು ಆಗುತ್ತಿರಲಿಲ್ಲ. ಅದೇ ರೀತಿ ನೀನು ಒಬ್ಬ ಮುಸ್ಲಿಮನನ್ನು ಕೊಂದರೂ ಅವನ ಮುಸ್ಲಿಂತನವನ್ನು ಕೊಲ್ಲಲಲು ಸಾಧ್ಯವಿಲ್ಲ. ಅಲ್ಲಿ ಬರೀ ಒಬ್ಬ ಮನುಷ್ಯ ಸತ್ತಿರುತ್ತಿದ್ದ....

ಮಂಟೊಗೆ ಲಾಹೋರ್ ಬದುಕುವ ಅವಕಾಶವನ್ನೇ ಕೊಡಲಿಲ್ಲ. ಅವನು ನೆಚ್ಚಬಹುದಾಗಿದ್ದ ಅಲ್ಲಿನ ಚಿತ್ರರಂಗ, ವಿಭಜನೆ-ವಲಸೆಗಳಲ್ಲಿ ನಾಶವಾಗಿ ಹೋಗಿತ್ತು. ಹೆಂಡತಿ ಮೂವರು ಹೆಣ್ಣುಮಕ್ಕಳ ಸಂಸಾರ. ಜೀವನಕ್ಕೇನು ಮಾಡುವುದು? ಬೆಳಗಾಗೆದ್ದು ಶುಭ್ರವಾಗಿ ತಯಾರಾಗಬಹುದು. ಆದರೆ ಹೋಗುವುದೆಲ್ಲಿಗೆ?!

ಲಾಹೋರ್-ಅಪಾರ ವೈಯಕ್ತಿಕ ಶಿಸ್ತಿನ ಮನುಷ್ಯನಾಗಿದ್ದ ಮಂಟೋನ ಗೊತ್ತುಗುರಿಗಳನ್ನೇ ಕಿತ್ತುಕೊಂಡಿತ್ತು. ಪರಿಣಾಮ-ಮಂಟೊ ದಿನವಿಡೀ ಕುಡಿಯುವ ವ್ಯಸನಿಯಾದ. ಬರೆದೇ ದುಡಿಯಬೇಕಿತ್ತು, ಬರೆದ. ಅದೂ ಹೇಗೆ ಬರೆದ! ಹಗಲೂ ರಾತ್ರಿ ಒಂದೇ ಸಮ. ಒಮ್ಮೆ ಬರೆದಿದ್ದನ್ನು ಮತ್ತೆ ತಿದ್ದದೆ, ಹಾಳೆಗೆ ಇಟ್ಟ ಪೆನ್ನಿಗೆ ಬಿಡುವು ಕೊಡದೆ....ಇನ್ನೂರೈವತ್ತು ಕತೆಗಳು, ಹಲವಾರು ನಾಟಕಗಳು, ಒಂದು ಕಾದಂಬರಿ, ಅನೇಕ ಪ್ರಬಂಧಗಳು....ಎಷ್ಟೋ ಸಲ, ಒಂದು ಪತ್ರಿಕಾ ಕಚೇರಿಗೆ ಹೋಗುವುದು. ಅಲ್ಲೇ ಮೂರು ನಾಲ್ಕು ಹಾಳೆ ಪಡೆದು ಕೂತು ಒಂದು ಕತೆ ಬರೆದು ಮುಗಿಸಿ ಕೊಟ್ಟುಬಿಡುವುದು. ೧೫ ರಿಂದ ೩೦ ರೂಪಾಯಿವರೆಗೆ ಸಂಭಾವನೆ-ಆ ಕಾಲದಲ್ಲಿ ಅದೇನೂ ಸಣ್ಣ ಮೊತ್ತವಲ್ಲ-ಆದರೆ ಅವನ ಕುಡಿತಕ್ಕೆ ಸಾಲದು! ಅವನ ಈ ಚಟ ಬಿಡಿಸಲು ಹೆಂಡತಿ ಒಮ್ಮೆ ಹುಚ್ಚಾಸ್ಪತ್ರೆಗೂ ಸೇರಿಸಿದ್ದಳು. (ಆ ಅನುಭವದ ಫಲವೇ-ಮೊದಲಲ್ಲಿ ಉಲ್ಲೇಖಿಸಿದ ತೋಬಾ ಟೇಕ್ ಸಿಂಗ್ ಕತೆ)...

ವರ್ಷಗಳ ಕಾಲ ಹೀಗೆ ದಿನವಿಡೀ ಎರಡು ತುಂಡು ಬ್ರೆಡ್ಡು ಮತ್ತು ಕುಡಿತ, ಬರಹಗಳಲ್ಲಿ ಕಳೆದ ಮಂಟೊ ಜೀವಿಸುವ ಉದ್ದೇಶವೇ ಬತ್ತಿಹೋಗದವನಂತೆ ಬದುಕಿದ. ಇಷ್ಟರ ಮೇಲೆ ಅವನ ಸರ್ವೋತ್ಕೃಷ್ಟ ಕಥೆಗಳನ್ನು ಹೀಯಾಳಿಸಿ "ಅಶ್ಲೀಲತೆ"ಯ ಆರೋಪದ ಮೇಲೆ ಒಂದಾದ

ಮೇಲೊಂದು (ಒಟ್ಟು ಐದು) ಕೋರ್ಟು ಖಟ್ಲೆಗಳು ಏರಿ ಬಂದಾಗ ಮಂಟೊಗೆ ರೋಸಿಹೋಯಿತು. ಆ ಅವಹೇಳನವನ್ನು ಅವನು ಮರೆಯಲೂ ಇಲ್ಲ. ಕ್ಷಮಿಸಲೂ ಇಲ್ಲ. ಮೊದಲೇ ಕಿರಿಕಿರಿಯ ವಿಕ್ಷಿಪ್ತ ಆಸಾಮಿಯಾಗಿದ್ದವನು ಇನ್ನಷ್ಟು ನಂಜು ತುಂಬಿಕೊಂಡು ತನ್ನಲ್ಲೇ ನಂಬಿಕೆ ಕಳೆದುಕೊಳ್ಳುತ್ತಾ ಬಂದ. ಆಶ್ಚರ್ಯವೆಂದರೆ ಮನುಷ್ಯನಲ್ಲಿ ಮಾತ್ರ ಅವನ ನಂಬಿಕೆ ಕುಸಿಯಲೇ ಇಲ್ಲ!....

ಮತ್ತು ಈ ಮಾನವಪ್ರೇಮ ಟೊಳ್ಳು ಆದರ್ಶದ ಅಂತರಿಕ್ಷದಲ್ಲಿ ನೇತಾಡುವಂಥದಲ್ಲ. ಯಾಕೆಂದರೆ ಮಂಟೊ ಮನುಷ್ಯನ ಕ್ರೌರ್ಯದ ಎಲ್ಲೆಗಳನ್ನು ಕಂಡು ಬಂದಿದ್ದಾನೆ. ಅಂತರಾತ್ಮದ ಕಗ್ಗತ್ತಲನ್ನು ಮುಟ್ಟಿ ನೋಡಿದ್ದಾನೆ. ಎಲ್ಲ ಶ್ರೇಷ್ಠ ಬರಹಗಾರರಂತೆ ತನ್ನ ತಲೆಮಾರಿನ ಪಾಪ ಪುಣ್ಯಗಳ ಶಿಲುಬೆ ಹೊತ್ತು ನಡೆದಿದ್ದಾನೆ.

ಅಶ್ಲೀಲತೆಯ ಆರೋಪ ಎದುರಿಸಿದ ಅವನದೊಂದು ಕತೆ ಹೀಗಿದೆ :

ರೈಲು ಹಿಡಿದು ಲಾಹೋರ್ ತಲುಪಿದ ಸಿರಾಜುದ್ದೀನನ ಹೆಂಡತಿಯನ್ನು ಹೊಟ್ಟೆ ಸೀಳಿ ಕೊಂದಿದ್ದಾರೆ. ಮಗಳು? ಎಡಗೆನ್ನೆಯ ಮೇಲೆ ಕಪ್ಪು ಮಚ್ಚೆಯುಳ್ಳ ಹದಿನೇಳು ವರ್ಷದ ಚೆಲುವೆ? ಅವಳೆಲ್ಲಿ ತಪ್ಪಿಸಿಕೊಂಡಳು? ಸಿರಾಜುದ್ದೀನ್ ದಿಕ್ಕೆಟ್ಟು ನಿರಾಶ್ರಿತರ ಶಿಬಿರಗಳನ್ನು ಒಂದೊಂದೇ ಹುಡುಕುತ್ತಾ ಹೋದರೂ ಮಗಳು ಸಕೀನಾಳ ಸುಳಿವಿಲ್ಲ. ಕೆಲವು ದಿನಗಳ ಮೇಲೆ ಬಂದೂಕುಗಳನ್ನು ಹಿಡಿದ ಆ ಎಂಟು ಯುವಕರ ಗುಂಪು ಇವನಿಗೆ ಭರವಸೆ ಕೊಡುತ್ತದೆ. "ನಿನ್ನ ಮಗಳು ಜೀವಂತವಾಗೇ ಇದ್ದರೆ ನಾವು ಖಂಡಿತ ಕರೆತರುತ್ತವೆ...." ತಮ್ಮ ಜೀವನವನ್ನೇ ಪಣವಾಗಿಟ್ಟು ಅವರು ತಮ್ಮದೇ ಟ್ರಕ್ಕಿನಲ್ಲಿ ಮತ್ತೆ ಮತ್ತೆ ಅಮೃತಸರಕ್ಕೆ ಹೋಗಿ ತಪ್ಪಿಸಿಕೊಂಡ ಮುಸ್ಲಿಂ ಕುಟುಂಬಗಳ ಸದಸ್ಯರನ್ನು ಹುಡುಕಿ ಹುಡುಕಿ ತರುತ್ತಿದ್ದಾರೆ. ಆದರೆ ಮಗಳು ಮಾತ್ರ ಇನ್ನೂ ಸಿಕ್ಕಿಲ್ಲ.

ಮುದುಕ ಕಾದೇ ಕಾಯುತ್ತಾನೆ. ಸಕೀನಾ ಸಿಕ್ಕಿಲ್ಲ. ಒಂದು ದಿನ ಭಾರತದ ರಸ್ತೆ ಬದಿಯಲ್ಲಿ ಆ ಗುಂಪು ಇವಳನ್ನು ನೋಡುತ್ತದೆ. ಅದೇ ಎಡಗೆನ್ನೆ ಮೇಲಿನ ಮಚ್ಚೆ. ಹೆದರಿಕೊಂಡ ಅವಳಿಗೆ ಧೈರ್ಯ ಹೇಳಿ ಸಂತೈಸಿ ತಮ್ಮ ಟ್ರಕ್ಕಿಗೆ ಹತ್ತಿಸಿಕೊಳ್ಳುತ್ತದೆ. ಈ ಕಡೆ ಮುದುಕ ಶಿಬಿರ ಶಿಬಿರಕ್ಕೂ ಅಲೆಯುತ್ತಲೇ ಇದ್ದಾನೆ. ಆ ಆಪದ್ಬಾಂಧವರ ಗುಂಪು ಒಮ್ಮೆ ಕಣ್ಣಿಗೆ ಬಿದ್ದಾಗ ಕೇಳುತ್ತಾನೆ : ನನ್ನ ಮಗಳು ಸಿಕ್ಕಿದಳಾ? "ಸಿಗ್ತಾಳೆ, ಸಿಗ್ತಾಳೆ...." ಅವರು ಆಶ್ವಾಸನೆ ಕೊಟ್ಟು ಹೋಗುತ್ತಾರೆ. ಇವನಿಗೆ ಅಷ್ಟಿಷ್ಟು ಸಮಾಧಾನ.

ಅದೇ ಸಂಜೆ, ರೈಲ್ವೆ ಹಳಿಗಳ ಪಕ್ಕ ಪ್ರಜ್ಞಾಹೀನ ಸ್ಥಿತಿಯಲ್ಲಿ ಬಿದ್ದಿದ್ದ ಯುವತಿಯ ದೇಹವನ್ನೇ ನಾಲ್ವರು ಯುವಕರು ಶಿಬಿರದ ಆಸ್ಪತ್ರೆಗೆ ಹೊತ್ತು ತರುತ್ತಾರೆ. ಸಿರಾಜುದ್ದೀನ್ ಹಿಂಬಾಲಿಸುತ್ತಾನೆ. ತುಸು ಹೊತ್ತು ಹೊರಗೇ ನಿಂತಿದ್ದು ಮತ್ತೆ ಒಳಹೋದಾಗ ಸ್ಟ್ರೆಚರ್ ಮೇಲೆ ಮಲಗಿದ ಯುವತಿಯ ದೇಹ. ಎಡಗೆನ್ನೆಯ ಮೇಲೆ ಅದೇ ಕಪ್ಪು ಮಚ್ಚೆ. ಸಿರಾಜುದ್ದೀನ್ ಸಕೀನಾ ಎಂದು ಕಿರುಚಿಕೊಳ್ಳುತ್ತಾನೆ. ದೀಪದ ಸ್ವಿಚ್ ಹಾಕಿದ ಡಾಕ್ಟರ್ ಇವನನ್ನು ದಿಟ್ಟಿಸಿದಾಗ "ನಾನೇ ಇವಳ ಅಪ್ಪ" ಅನ್ನುತ್ತಾನೆ. ಡಾಕ್ಟರು ನಾಡಿ ಹಿಡಿದು ಪರೀಕ್ಷಿಸುತ್ತಾ ಗಾಳಿಯಾಡಲೆಂದು ರೂಮಿನಲ್ಲಿದ್ದ ಒಂದೇ ಕಿಟಕಿ ಕಡೆ ತೋರಿಸಿ ತೆಗೆದುಬಿಡು ಅನ್ನುತ್ತಾನೆ.

ಆ ದನಿಗೆ ಸ್ಟ್ರೆಚರಿನ ಮೇಲೆ ಸಣ್ಣ ಹೊರಳಾಟ. ಕಷ್ಟ ಪಟ್ಟು ತನ್ನ ಸೊಂಟದ ಪತ್ತಿರ

ಸೆಲ್ವಾರಿನ ಲಾಡಿಯನ್ನು ಹುಡುಕುವ ಅವಳ ಕೈಗಳು. ತೆರೆದು ಬಿಡು ಅನ್ನುವುದನ್ನು ಕೇಳಿಸಿಕೊಂಡ ಆ ಅರೆಜೀವ, ಅಪಾರ ಶ್ರಮದಿಂದ ನಿಧಾನವಾಗಿ ಹುಡುಕಿ ಲಾಡಿ ಬಿಚ್ಚಿ ತನ್ನ ಸೆಲ್ವಾರನ್ನು ಕೆಳಗಿಳಿಸಿ ತೊಡೆ ಅಗಲಿಸುತ್ತಾನೆ. ಅವಳಲ್ಲಿ ಈ ಚಲನೆ ಕಂಡ ಕೂಡಲೇ ಮುದುಕ ಹರ್ಷದಿಂದ ಚೀರುತ್ತಾನೆ : ಹೋ ನನ್ನ ಮಗಳು ಬದುಕಿದ್ದಾಳೆ....ಡಾಕ್ಟರ್ ನಡುಗತೊಡಗುತ್ತಾನೆ!

ಎಲ್ಲಿದೆ ಇಲ್ಲಿ ಕೋಮುದ್ವೇಷ? ಹಿಂದೂ ಮುಸ್ಲಿಂ ಘರ್ಷಣೆ?

ಇಮಾಂಸಾಬಿ-ಗೋಕುಲಾಷ್ಟಮಿ ಗಾದೆಯ ಸುಳಿಗೆ ಬಿದ್ದ ಮನಸ್ಸಿಗೆ ಮಂಟೊನ ಈ ನಿರಂಕುಶ ಪ್ರತಿಭೆ ದಕ್ಕುವುದಿಲ್ಲ. ಮಂಟೊ ತಾನು ಕುಡಿದಷ್ಟು ದಿನಚರಿಯಂತೆ ನೇರವಾಗಿ ಒಪ್ಪಿಸುವ ಲೇಖಕನಲ್ಲ. ಅನುಭವ ಅವನ ಒಳಹೊಕ್ಕು ಸುಟ್ಟು, ಹೊಸ ಹುಟ್ಟು ಪಡೆದು ಮನುಕುಲದ ವ್ಯಾಕುಲ ಹಾಡಾಗಿ ಹೊಮ್ಮುತ್ತದೆ....

ಇದೇ ರೀತಿ, ಅಶ್ಲೀಲತೆಗಾಗಿ ಕೋರ್ಟು ಮೆಟ್ಟಿಲೇರಿದ ಇನ್ನೊಂದು ಕತೆ :

ಕಲವಂತ ಕೌರ್ ತೋರ ನಿತಂಬ, ಮಾಂಸಲ ತೊಡೆಗಳು ಮತ್ತು ನಿಮಿರಿದ ಸ್ತನಗಳ ತುಂಬಿದ ಹೆಣ್ಣು. ಅವಳ ಪ್ರಿಯಕರ ಈಶ್ವರಸಿಂಗ್ ಮಧ್ಯರಾತ್ರಿ ಕಳೆದು ಬಂದಿದ್ದಾನೆ. ತನ್ನ ಗಂಡಸುತನದಲ್ಲಿ ಕಲವಂತಳಿಗೆ ತಕ್ಕ ಜೋಡಿ ಅವನು. ಅವನು ಕಳೆದ ಬಾರಿ ಬಂದಾಗ, ಮುಸ್ಲಿಮರ ಮನೆಗಳನ್ನು ದೋಚಿ ತಂದಿದ್ದ ಒಡವೆಗಳನ್ನು ತನಗೆ ತೊಡಿಸಿ ತನ್ನ ಪಕ್ಕ ಮಲಗಿ ತನ್ನಲ್ಲಿ ಕಾಮನೆ ಕೆರಳಿಸಿ....ಇದ್ದಕ್ಕಿದ್ದಂತೆ ಎದ್ದುಹೋಗಿದ್ದ. ಇಲ್ಲ, ಅವನು ಈ ಸಲ ಉತ್ತರ ಹೇಳಲೇಬೇಕು.

ಎಲ್ಲಿ ಹೋಗಿದ್ದೆ?

ಪ್ರಶ್ನೆಗಳು, ಇವನು ಹೇಳಲಾರದ ಉತ್ತರಗಳು. ಈಗಲೂ ಅವಳನ್ನು ತಬ್ಬಿ ಮಲಗಿ ಅವಳನ್ನು ಕೆರಳಿಸಿ ಮತ್ತೆ ಸೋತುಹೋಗುತ್ತಿದ್ದಾನೆ. ಇವಳು ಕೇಳುತ್ತಾಳೆ-ಏನಾಗಿದೆ ನಿನಗೆ? ಈಶ್ವರಸಿಂಗ್ ತನ್ನ ಕೃಪಾಣ್ ತೋರಿಸಿ ಇದರಲ್ಲಿ ಆರು ಜನ ಮುಸ್ಲಿಮರನ್ನು ಕೊಂದೆ ಅನ್ನುತ್ತಾನೆ. ಅವಳು ಬಿಡುವುದಿಲ್ಲ. ಏನಾಯಿತು? ಇನ್ನೊಂದು ಹೆಣ್ಣಾ?

ತನಗಾಗುತ್ತಿರುವುದನ್ನು ಹೇಗೆ ವಿವರಿಸುವುದೋ ತಿಳಿಯದೆ ಅವನು ಹೂಂಗುಟ್ಟಿದ್ದೇ ತಡ, ಆ ಭರ್ಜರಿ ಹೆಣ್ಣು ಅವನದೇ ಕೃಪಾಣ್ ಎಳೆದು ಅವನ ಕುತ್ತಿಗೆ ಇರಿದುಬಿಡುತ್ತಾಳೆ. ಕತ್ತು ಎದೆ ನೆತ್ತರಲ್ಲಿ ನೆನೆಯುವಾಗ ಅವನು ಸಾಯುವ ಮುನ್ನ ಹೇಳುತ್ತಾನೆ: ಆ ಮನೆಯಲ್ಲಿ ಆರು ಜನ ಗಂಡಸರು. ಮುಸ್ಲಿಮರು. ಆ ಆರು ಜನರನ್ನೂ ಕೊಂದ ಮೇಲೆ ಕೆಳಗೆ ಬಿದ್ದಿದ್ದ ಆ ತರುಣಿಯನ್ನೂ ಸೀಳಬೇಕೆಂದವನು, ಮನಸ್ಸು ಬದಲಿಸಿ ಹೊತ್ತುಕೊಂಡು ಕಾಲುವೆಯ ಪಕ್ಕ ಒಯ್ಯುತ್ತಾನೆ. ಅಲ್ಲಿ ಇಳಿಸಿ ಇವಳ ರುಚಿ ನೋಡಬೇಕೆನಿಸಿ ಕೂಡುತ್ತಾನೆ. ಆಮೇಲೆ ಅರಿವಿಗೆ ಬರುತ್ತೆ-ಅವಳು ಸತ್ತು ಎಷ್ಟೋ ಹೊತ್ತಾಗಿದೆ! ತಾನು ಹೆಣದ ಜೊತೆ...ಹೆಣದೊಂದಿಗೆ ಮಲಗಿದವನು ತನ್ನ ಗಂಡಸುತನವನ್ನೇ ಕಳೆದುಕೊಂಡು ಬಂದಿದ್ದಾನೆ. ಈಗ ಬೇಡುತ್ತಾನೆ-ಕೈ ಕೊಡು ಕಲವಂತ್. ಇವಳು ಅವನ ಕೈ ಹಿಡಿದುಕೊಂಡರೆ ಅದು ಮಂಜುಗಡ್ಡೆಯಂತೆ ಶೀತಲವಾಗಿದೆ....!

೧೯೫೫ ಜನವರಿ ೧೮ರ ಮುಂಜಾನೆ ಸಾದತ್ ಹಸನ್ ಮಂಟೊನ ಮೂಗಿನಿಂದ ರಕ್ತ

ಸುರಿಯತೊಡಗಿತು. ಅವನನ್ನು ಸ್ಟ್ರೆಚರ್ ಮೇಲಿರಿಸಿ ಆಂಬುಲೆನ್ಸಿನಲ್ಲಿ ಆಸ್ಪತ್ರೆಗೆ ಒಯ್ಯುವ ಮುನ್ನ ಮಂಟೊ ತುಸು ಹೆಂಡಕ್ಕಾಗಿ ಯಾಚಿಸಿದನಂತೆ! ಆಸ್ಪತ್ರೆ ತಲುಪಿದಾಗ ವೈದ್ಯರು-"ನೀವು ತಪ್ಪು ಜಾಗಕ್ಕೆ ಬಂದಿದ್ದೀರಿ" ಅಂದರು-"ಸೀದಾ ಸ್ಮಶಾನಕ್ಕೆ ಒಯ್ಯಬೇಕಿತ್ತು..."!

ಮಂಟೊ ಸತ್ತಾಗ ಅವನಿಗಿನ್ನೂ ೪೩ ವರ್ಷವೂ ತುಂಬಿರಲಿಲ್ಲ. ಆದರೆ ಸ್ವತಃ ಅವನಿಗೇ ತೀರಾ ತಡವಾಯಿತು ಅನ್ನಿಸಿತ್ತು! ಯಾಕೆಂದರೆ ಮಂಟೊ ಎಲ್ಲವನ್ನೂ ನೋಡಿಯಾಗಿತ್ತು. ಅಥವಾ ಎಲ್ಲರೂ ಹೇಳುವಂತೆ "ಕಂಡುಂಡಾಗಿತ್ತು". ಮತ್ತು ತಾನು ಕಂಡಿದ್ದಕ್ಕೆ ಅಸಾಧಾರಣ ಅಕ್ಷರ ರೂಪ ಕೊಟ್ಟಾಗಿತ್ತು.

ಅವನು ಭಾರತ ಬಿಟ್ಟುಹೋದ ಮೇಲೆ ಲಾಹೋರಿನಲ್ಲಿ ಕಳೆದಿದ್ದು ಏಳು ವರ್ಷ. ಆ ಏಳು ವರ್ಷ ಭಾವನಾತ್ಮಕವಾಗಿ ಮತ್ತು ಆರ್ಥಿಕವಾಗಿ ಅವನ ಪಾಲಿಗೆ ಅತ್ಯಂತ ದುರ್ದಮವಾದ ಕಾರ್ಪಣ್ಯದ ದಿನಗಳು. ವಿಪರ್ಯಾಸವೆಂದರೆ ಮಂಟೊ ತನ್ನ ಜೀವಮಾನದ ಶ್ರೇಷ್ಠತಮ ಬರವಣಿಗೆ ಸಾಧಿಸಿದ್ದೂ ಈ ಅವಧಿಯಲ್ಲೇ....ತನ್ನನ್ನು ಸುಟ್ಟುಕೊಂಡು ಬೇರೆಯವರಿಗೆ ಬೆಳಕು ಕೊಟ್ಟಂತೆ ಅನ್ನುವುದು ಮಂಟೊ ವಿಷಯದಲ್ಲಿ ಮಾತ್ರ ಸವಕಲು ಮಾತಲ್ಲ.

ನಮ್ಮೆರಡು ಸೋದರ ದೇಶಗಳು ಸ್ವಾತಂತ್ರ್ಯ ಗಳಿಸಿ ಅರ್ಧ ಶತಮಾನಕ್ಕೂ ಮಿಕ್ಕಿ ಕಳೆದುಹೋಗಿದೆ. ಆದರೆ ಮಂಟೊ ಎಂಬ ಬರಹಗಾರನನ್ನು ಅಲ್ಲಾಡಿಸಿಟ್ಟ ವಿಭಜನೆಯ ಶಾಪವಿನ್ನೂ ನೀಗಿಲ್ಲ. ದುಃಸ್ವಪ್ನ ಮತ್ತೆ ಮತ್ತೆ ಮರುಕಳಿಸುತ್ತಲೇ ಇದೆ-ಇನ್ನಷ್ಟು ಅಯೋಧ್ಯೆಗಳು, ಗೋಧ್ರಾ-ಗುಜರಾತಗಳು, ದತ್ತಪೀಠಗಳ ರೂಪದಲ್ಲಿ-ಹಳೇ ಸಿನಿಮಾದ ಅಚ್ಚ ಹೊಸ ಕಾಪಿಗಳಂತೆ.

ಹಾಗಾದರೆ ಮುಸ್ಲಿಂ ದ್ವೇಷಿಯ ಗುಂಡಿಗೆ ಗಾಂಧಿ ಈ ನೆಲಕ್ಕೆ ಚೆಲ್ಲಿದ ರಕ್ತ; ಮಂಟೊನ ಮೂಲಕ ನಮ್ಮ ಹೃದಯಗಳಲ್ಲಿ ಸ್ರವಿಸುವ ರಕ್ತ-ಯಾವುದಕ್ಕೂ ಬೆಲೆಯೇ ಇಲ್ಲವೇ? ಅನ್ನುವುದಾದರೆ ಮಂಟೊ ಯಾತಕ್ಕಾಗಿ ಬರೆದ? ಯಾರಿಗೋಸ್ಕರ ಬರೆದ?....

ಮತ್ತೆ ಸ್ವಾತಂತ್ರ್ಯೋತ್ಸವ.

ಹುಟ್ಟುತ್ತಲೇ ಪ್ರತಿಯೊಬ್ಬ ಭಾರತೀಯನೂ ಜಾತಿ ಉಪಜಾತಿಗಳ ಉಕ್ಕಿನ ಕೋಟೆಯೊಳಗೆ ಬಂದು ಬೀಳುವ-ಅಂದರೆ ಆಯ್ಕೆಯಿಲ್ಲದ ಸ್ವಾತಂತ್ರ್ಯಹೀನನಾಗೇ ಹುಟ್ಟುವ-ಈ ದೇಶದಲ್ಲಿ ಯಾವ ಸ್ವಾತಂತ್ರ್ಯದ ಸೊಲ್ಲು ತೆಗೆಯೋಣ? ರಕ್ತತರ್ಪಣವಿಲ್ಲದೆ ಮನುಷ್ಯನ ಇತಿಹಾಸದಲ್ಲಿ ಯಾರೂ ಸ್ವಾತಂತ್ರ್ಯ ಗಳಿಸಿಲ್ಲವೇನೋ! ನಮ್ಮಲ್ಲಿ ಬಾಪೂಜಿ ನೀಡಿದ ಅಹಿಂಸಾತ್ಮಕ ಜನಾಂದೋಲನದ ಹೆಮ್ಮೆಯೂ, ವಿಭಜನೆಯ ಘೋರ ಹತ್ಯಾಕಾಂಡದಲ್ಲಿ ಭಸ್ಮವಾಗಿಹೋಯಿತಲ್ಲ! ರಕ್ತ ಕುಡಿದ ಸ್ವಾತಂತ್ರ್ಯ, ಆ ರಕ್ತವನ್ನು ಜೀರ್ಣಿಸಿಕೊಂಡಿದ್ದು ಅಪರೂಪ. ಆದರೆ ರಕ್ತದಾಹದ ಭೂತ-ನಮ್ಮ ದೇಶದಲ್ಲಾಗುತ್ತಿರುವಂತೆ-ಮತ್ತೆ ಮೇಲೆದ್ದರೆ ಈ ಸ್ವಾತಂತ್ರ್ಯವೂ ನಮ್ಮ ಕೈ ತಪ್ಪಿಹೋಗಬಹುದು.

ಮಂಟೊ ಯಾರಿಗೋಸ್ಕರ ಬರೆದ ಎಂಬುದಕ್ಕೆ ಬಹುಶಃ ಉತ್ತರ ಇಲ್ಲಿದೆ.

ಅದು ನನಗಾಗಿ, ನಿಮಗಾಗಿ. ನಮ್ಮ ಸ್ವಾತಂತ್ರ್ಯ ನಮ್ಮದಾಗಿ ಜತನವಾಗಿ ಉಳಿಯಬೇಕಿದ್ದರೆ, ನಾವೂ ಅವನಂತೆ ನಂನಮ್ಮ ಹೃದಯಗಳಲ್ಲಿ, ಜಾತಿ ಭಾಷೆ ಮತ ಧರ್ಮಗಳ ಗಡಿ ದಾಟಿ,

ಯಾರಿಗೂ ಸೇರದ, ಯಾವ ಹೆಸರಿರದ ತಟಸ್ಥ ಭೂಮಿಯ ಪುಟ್ಟ ಪುಟ್ಟ ತುಣುಕುಗಳನ್ನು (no man's land) ನಮ್ಮದಾಗಿಸಿಕೊಳ್ಳಬೇಕು ಎಂದು ಒತ್ತಾಯಿಸುತ್ತಿದ್ದಾನೆ ಮಂಟೊ. ಅವನೆಂದೂ ಬಾಯಿ ಬಿಟ್ಟು ಎಲ್ಲ ಬಲ್ಲವನ ಧಿಮಾಕಿನಲ್ಲಿ, ಉಪದೇಶದ ಗತ್ತಿನಲ್ಲಿ ಬರೆದವನಲ್ಲ. ಹಾಗಾಗಿಯೇ ಮನುಷ್ಯರಲ್ಲಿ ತಾನಿಟ್ಟಿದ್ದ ಅಚಲ ಅನರ್ಘ್ಯ ಶ್ರದ್ಧೆಯ ಮೂಲಕ ಸೂಚಿಸುತ್ತಾನೆ....ಸುಲಭವಲ್ಲ. ಯಾವುದೂ ಸುಲಭವಲ್ಲ. ಆದರೆ-ಬೇರೆ ದಾರಿಯಿದೆಯೇ?...

ಕೊನೆಯಲ್ಲಿ ಎರಡೇ ಸಾಲಿನ ಅವನದೊಂದು ಕಿರುಗತೆ :

ಹೊಟ್ಟೆಯನ್ನು ನೇರವಾಗಿ ಸ್ಪಷ್ಟವಾಗಿ ಸೀಳುತ್ತಾ ಸಾಗಿದ ಆ ಚಾಕು, ಮುನ್ನಡೆದು ಅವನ ಪೈಜಾಮದ ಲಾಡಿಯನ್ನೂ ತುಂಡರಿಸಿ, ಸಿಲ್ಲಲು ಆಧಾರವಿಲ್ಲದ ಪೈಜಾಮಾ ಜಾರಿ ಬಿತ್ತು.

ಚಾಕು ಹಿಡಿದವನು ಒಂದು ಗಳಿಗೆ ದಿಟ್ಟಿಸಿ ನೋಡಿ ಪಶ್ಚಾತ್ತಾಪದಿಂದ ಲೊಚಗುಟ್ಟಿದ : "ಓ....ಮಿಷ್ಟೇಕ್....'

(ಕೃಪೆ : 'ಉಷಾಕಿರಣ')

---

Mottled dawn (ಮಲಿನ ಬೆಳಗು)

ಉರ್ದು ಮೂಲ : ಸಾದತ್ ಹಸನ್ ಮಂಟೊ

ಇಂಗ್ಲೀಷ್‌ಗೆ : ಖಲೀದ್ ಹಸನ್

ಪ್ರ : ಪೆಂಗ್ವಿನ್ ಬುಕ್ಸ್ ಇಂಡಿಯಾ, ೧೯೯೭

# ೧೯೪೭ರ ಒಂದು ಕಥಾನಕ

ಉರ್ದು ಮೂಲ : **ಸಾದತ್ ಹಸನ್ ಮಂಟೊ**

ಅನುವಾದ : **ಎನ್.ಎಸ್. ಶಂಕರ್**

**ಮು**ಮ್ತಾಜ್ ತೀವ್ರ ಭಾವೋದ್ದೀಪ್ತನಾಗಿ ಹೇಳುತ್ತಿದ್ದ : 'ಒಂದು ಲಕ್ಷ ಜನ ಹಿಂದೂಗಳು, ಮತ್ತು ಅಷ್ಟೇ ಜನ ಮುಸ್ಲಿಮರ ನರಮೇಧವಾಗಿದೆ ಅನ್ನುವ ಮಾತು ಬೇಡ. ಇಲ್ಲಿ ಮಹಾ ದುರಂತವೆಂದರೆ, ಒಟ್ಟು ಎರಡು ಲಕ್ಷ ಜನರ ಮಾರಣಹೋಮವಾಯಿತು ಅನ್ನುವುದಲ್ಲ; ಇಂಥ ಅಪಾರ ಜೀವಹಾನಿಯೂ ವ್ಯರ್ಥವಾಯಿತಲ್ಲ!....ಲಕ್ಷ ಜನರನ್ನು ಕೊಂದ ಮುಸ್ಲಿಮರು, ಆ ಮೂಲಕ ಹಿಂದೂ ಧರ್ಮವನ್ನೇ ನಾಮಾವಶೇಷ ಮಾಡಿದೆವು ಅಂದುಕೊಳ್ಳಬಹುದು. ಆದರೆ ಹಿಂದೂ ಧರ್ಮ ಜೀವಂತವಾಗಿದೆ, ಸ್ವಸ್ಥವಾಗಿದೆ ಮತ್ತು ಸದಾ ಜೀವಂತವಾಗಿ, ಸ್ವಸ್ಥವಾಗಿಯೇ ಇರುತ್ತೆ. ಹಾಗೆಯೇ ಒಂದು ಲಕ್ಷ ಮುಸ್ಲಿಮರನ್ನು ತೀರಿಸಿದ ಹಿಂದೂಗಳು ಇಸ್ಲಾಂ ಧರ್ಮ ಸರ್ವನಾಶವಾಯಿತೆಂದು ಸಂಭ್ರಮಾಚರಣೆ ಮಾಡಬಹುದು. ನಿಜಾಂಶವೆಂದರೆ ಇಸ್ಲಾಂಗೆ ಎಳ್ಳಷ್ಟೂ ಹಾನಿಯಾಗಿಲ್ಲ. ಧರ್ಮವನ್ನು ಬಂದೂಕು ಹಿಡಿದು ಅಳಿಸಬಹುದೆಂದು ನಂಬುವವರು ಹುಂಬರಷ್ಟೇ. ಶ್ರದ್ಧೆ, ನಂಬಿಕೆ, ಭಕ್ತಿ-ಯಾವ ಹೆಸರಿನಿಂದಾದರೂ ಕರೆಯಿರಿ-ಅದು ಚೈತನ್ಯಕ್ಕೆ ಸಂಬಂಧಪಟ್ಟಿದ್ದೇ ಹೊರತು ಭೌತಿಕವಲ್ಲ ಅನ್ನುವುದು ಅವರಿಗೇಕೆ ಅರ್ಥವಾಗುತ್ತಿಲ್ಲ? ಬಂದೂಕುಗಳು ಮತ್ತು ಕೃತಿಗಳಿಗೆ ಅದನ್ನು ನಾಶ ಮಾಡುವ ಶಕ್ತಿಯೇ ಇಲ್ಲ.'

ಅವತ್ತು ಮುಮ್ತಾಜ್ ತುಂಬಾ ಭಾವಾವಿಷ್ಟನಾಗಿದ್ದ. ನಾವು ಮೂವರು ಅವನನ್ನು ಬೀಳ್ಕೊಡಲು ಬಂದಿದ್ದೆವು. ಅಂದು ಅವನು-ನಮಗೆ ಸಂಪೂರ್ಣ ಅಪರಿಚಿತ ದೇಶವಾಗಿದ್ದ ಪಾಕಿಸ್ತಾನಕ್ಕೆ ಹೊರಟಿದ್ದ. ನಾವು ಮೂವರೂ ಹಿಂದೂಗಳು. ಈಗ ಪಾಕಿಸ್ತಾನಕ್ಕೆ ಸೇರಿದ್ದ ಪಶ್ಚಿಮ ಪಂಜಾಬಿನಲ್ಲಿ ನಮ್ಮ ಸಂಬಂಧಿಕರಿದ್ದರು. ಅವರಲ್ಲಿ ಕೆಲವರು ಹಿಂದೂ ವಿರೋಧಿ ಗಲಭೆಗಳಲ್ಲಿ ಪ್ರಾಣ ಕಳೆದುಕೊಂಡಿದ್ದರು. ಮುಮ್ತಾಜ್ ನಮ್ಮನ್ನು ತೊರೆದು ಹೋಗಲು ಇದೇ ಕಾರಣವಾಗಿತ್ತೇ?

ಒಂದು ದಿನ ಜುಗಲ್‌ಗೊಂದು ಪತ್ರ ಬಂದಿತ್ತು-ಲಾಹೋರ್‌ನಲ್ಲಿದ್ದ ಅವನ ಮಾವನ ಪತ್ರವಾಗಿತ್ತು. ಆದರೆ ಜುಗಲ್‌ನ ಮನಸ್ಸು ಅದನ್ನು ಒಪ್ಪಿಕೊಳ್ಳಲೇ ತಯಾರಿರಲಿಲ್ಲ. ಅವನು ಮುಮ್ತಾಜ್‌ಗೆ ಹೇಳಿದ್ದ-'ಹಿಂದೂ ಮುಸ್ಲಿಂ ಕೊಲೆಗಳು ಇಲ್ಲಿ ಶುರುವಾದರೆ ನಾನೇನು ಮಾಡುತ್ತೇನೋ ಗೊತ್ತಿಲ್ಲ.'

'ಏನು ಮಾಡುತ್ತೀಯಾ?'-ಮುಮ್ತಾಜ್ ಕೇಳಿದ.

'ಗೊತ್ತಿಲ್ಲ. ನಾನು ನಿನ್ನನ್ನು ಕೊಂದರೂ ಕೊಂದೇನು' ಜುಗಲ್ ಗಂಭೀರವಾಗಿ ಉತ್ತರಿಸಿದ್ದ.

ಮುಮ್ತಾಜ್ ಸುಮ್ಮನಾಗಿಬಿಟ್ಟ. ಮತ್ತು ಮುಂದಿನ ಎಂಟು ದಿನ ಅವನು ಯಾರೊಂದಿಗೂ ಮಾತಾಡಲಿಲ್ಲ. ಒಂಬತ್ತನೇ ದಿನ, ಅವತ್ತೇ ಮಧ್ಯಾಹ್ನ ಕರಾಚಿಯ ಹಡಗು ಏರುತ್ತಿರುವುದಾಗಿ ಹೇಳಿಬಿಟ್ಟ.

ನಾವು ಅವನಿಗೆ ಏನೂ ಹೇಳಲಿಲ್ಲ, ಅದರ ಬಗ್ಗೆ ಮಾತಾಡಲೂ ಇಲ್ಲ. ಜುಗಲ್ ಮನಸ್ಸಿನಲ್ಲಿ ಮಾತ್ರ ತನ್ನ ಮಾತಿನಿಂದಾಗಿಯೇ-ನಾನು ನಿನ್ನನ್ನು ಕೊಲ್ಲಬಹುದು ಅಂದಿದ್ದಕ್ಕೇ-ಅವನು ಹೊರಟಿದ್ದಾನೆ ಎಂಬುದು ಗಾಢವಾಗಿ ಬೇರೂರಿತ್ತು. ಈ ಧಾರ್ಮಿಕ ರೋಷಾವೇಶ ನಿಜಕ್ಕೂ ತನ್ನ ಪರಮಾಪ್ತ ಮಿತ್ರ ಮುಮ್ತಾಜ್‌ನನ್ನು ಕೊಲ್ಲುವ ಹಂತಕ್ಕೆ ತನ್ನನ್ನು ತಂದೀತೇ ಅನ್ನುವ ಬಗ್ಗೆಯೂ ಅವನಿಗೆ ಸ್ಪಷ್ಟತೆಯಿರಲಿಲ್ಲ. ಆ ಮಧ್ಯಾಹ್ನ ಜುಗಲ್ ಮೌನಿಯಾಗಿದ್ದುಬಿಟ್ಟಿದ್ದ. ಮುಮ್ತಾಜ್ ಒಬ್ಬನೇ ಬಿಡುವು ಕೊಡದೆ, ಒಂದೇ ಸಮ ಮಾತಾಡುತ್ತಲೇ ಇದ್ದ-ಅದೂ ಹೊರಡುವ ಗಳಿಗೆ ಹತ್ತಿರ ಬಂದಂತೆ ಇನ್ನೂ ಜಾಸ್ತಿ.

ಮುಮ್ತಾಜ್ ಹಾಸಿಗೆ ಬಿಟ್ಟೇಳುತ್ತಿದ್ದಂತೆಯೇ ಕುಡಿಯಲು ಶುರು ಮಾಡಿದ್ದ. ತನ್ನ ಸಾಮಾನುಗಳನ್ನು ಯಾವುದೋ ವಿಹಾರಕ್ಕೆ ಹೊರಟಂತೆ ಜೋಡಿಸಿಕೊಳ್ಳುತ್ತ ತಮಾಷೆ ಮಾಡುತ್ತ, ತಾನೇ ನಗುತ್ತ....ಯಾರಾದರೂ ಅಪರಿಚಿತರು ಆಗ ಅವನನ್ನು ನೋಡಿದ್ದರೆ, ಬಾಂಬೆ ಬಿಟ್ಟು ಹೋಗುತ್ತಿರುವುದು ಅವನಿಗೊದಗಿದ ಅದೃಷ್ಟವಿರಬೇಕು ಅಂತ ತೀರ್ಮಾನಿಸಿಬಿಡುತ್ತಿದ್ದರು. ಆದರೆ ಅವನ ಉತ್ಸಾಹದ ಉಬ್ಬರಕ್ಕೆ ನಾವ್ಯಾರೂ ಮೋಸ ಹೋಗಲಿಲ್ಲ; ಅವನು ತನ್ನ ಭಾವನೆಗಳನ್ನು ಮುಚ್ಚಿಡಲು, ಅಥವಾ ತನಗೆ ತಾನೇ ಮೋಸ ಮಾಡಿಕೊಳ್ಳಲು ಯತ್ನಿಸುತ್ತಿದ್ದುದು ನಮಗೆ ಗೊತ್ತಿತ್ತು.

ಅವನು ಅಷ್ಟು ಹಠಾತ್ತಾಗಿ ಬಾಂಬೆ ತೊರೆಯಲು ನಿರ್ಧರಿಸಿದ್ದ ಬಗ್ಗೆ ಮಾತಾಡಲು ನಾನು ಒಂದೆರಡು ಸಲ ಪ್ರಯತ್ನಿಸಿದೆನಾದರೂ, ಅವನು ಅದಕ್ಕೆ ಅವಕಾಶವನ್ನೇ ಕೊಡಲಿಲ್ಲ.

ಎರಡೂ ಮೂರು ಪೆಗ್‌ಗಳಾದ ಮೇಲೆ ಜುಗಲ್ ಇನ್ನೂ ಆಳದ ಮೌನದಲ್ಲಿ ಮುಳುಗಿಹೋದ. ನಮ್ಮ ಪಾಡಿಗೆ ನಮ್ಮನ್ನು ಬಿಟ್ಟು ಪಕ್ಕದ ಕೋಣೆಗೆ ಹೊರಟುಹೋದ. ಬ್ರಿಜ್‌ಮೋಹನ್ ಮತ್ತು ನಾನು ಮುಮ್ತಾಜ್‌ನೊಂದಿಗೆ ಉಳಿದೆವು. ಮಾಡುವುದು ಬೇಕಾದಷ್ಟಿತ್ತು. ಮುಮ್ತಾಜ್ ತನ್ನ ಡಾಕ್ಟರ ಬಿಲ್ ಕೊಡಬೇಕಿತ್ತು. ಅವನ ಬಟ್ಟೆಗಳಿನ್ನೂ ದೋಬಿ ಹತ್ತಿರವೇ ಇದ್ದವು, ಇತ್ಯಾದಿ. ಈ ಕೆಲಸಗಳೆಲ್ಲವನ್ನೂ ಅವನು ಅಸಾಧಾರಣ ಸ್ಥಿಮಿತದಿಂದ ಪೂರೈಸಿದ. ಅಷ್ಟಾದರೂ, ಸಿಗರೇಟ್ ಕೊಳ್ಳಲೆಂದು ಮೂಲೆಯ ನಮ್ಮ ಮಾಮೂಲಿ ಅಂಗಡಿಗೆ ಹೋದಾಗ ಅವನು ಬ್ರಿಜ್ ಮೋಹನನ ಹೆಗಲ ಮೇಲೆ ಕೈ ಹಾಕಿ ಹೇಳಿದ-'ಬ್ರಿಜ್ ನೆನಪಿದೆಯಾ?....ಹತ್ತು ವರ್ಷದ ಹಿಂದೆ ನಾವೆಲ್ಲ

ಹೊಟ್ಟೆಗಿಲ್ಲದೆ ಹಸಿದಿದ್ದಾಗ ಈ ಅಂಗಡಿಯ ಗೋವಿಂದ ನಮಗೆ ಸಾಲ ಕೊಟ್ಟಿದ್ದ...' ಅವನ ಕಣ್ಣುಗಳು ತೇವಗೊಂಡಿದ್ದವು.

ಮತ್ತೆ ನಾವು ಮನೆಗೆ ತಿರುಗಿ ಬರುವವರೆಗೆ ಅವನು ಏನೂ ಮಾತಾಡಲಿಲ್ಲ. ಆಮೇಲೆ ಮತ್ತದೇ ಕೊನೆಯಿಲ್ಲದ ಸ್ವಗತ-ಜಗತ್ತಿನಲ್ಲಿರುವ ಎಲ್ಲ ವಿಷಯಗಳ ಬಗ್ಗೆ. ಅಂಥ ಸುಸಂಬದ್ಧ ಮಾತುಗಳೇನೂ ಅಲ್ಲ, ಆದರೆ ಮಾತಿನಲ್ಲಿ ಎಂಥ ತೀಕ್ಷ್ಣ ಪ್ರಾಮಾಣಿಕತೆಯಿತ್ತೆಂದರೆ-ಎಲ್ಲೋ ಅಲ್ಲೊಮ್ಮೆ ಇಲ್ಲೊಮ್ಮೆ ಸಂದಿಯಲ್ಲಿ ಒಂದೊಂದು ಪದ ತೂರಿಸುವುದರ ಹೊರತು ನಾವಿಬ್ಬರೂ ಇನ್ನೇನೂ ಹೇಳದೆ, ಅವನಿಗೇ ಮಾತಾಡಲು ಬಿಟ್ಟೆವು. ಹೊರಡುವ ಸಮಯ ಹತ್ತಿರ ಬಂದಾಗ ಜುಗಲ್ ಬಂದ. ಆದರೆ ಬಂದರಿಗೆ ಟ್ಯಾಕ್ಸಿ ಹಿಡಿದು ಕೂರುತ್ತಿದ್ದಂತೆಯೇ ಎಲ್ಲರೂ ಮೌನವಾಗಿಬಿಟ್ಟರು.

ಮುಮ್ತಾಜ್ ಕಿಟಕಿಯಾಚೆ ನೋಡುತ್ತ ಮೌನವಾಗಿ ಬಾಂಬೆಗೆ-ಅದರ ಅಗಲವಾದ ರಸ್ತೆಗಳಿಗೆ, ಭವ್ಯ ಕಟ್ಟಡಗಳಿಗೆ ವಿದಾಯ ಹೇಳುತ್ತಿದ್ದಂತಿತ್ತು. ಬಂದರಿನ ತುಂಬಾ ಗಿಜಿಗಿಜಿ ಜನ-ನಿರಾಶ್ರಿತರು, ಹೆಚ್ಚಾಗಿ ಬಡವರು-ಪಾಕಿಸ್ತಾನಕ್ಕೆ ಹೋಗಲೆತ್ನಿಸುತ್ತಿರುವವರು. ಆದರೆ ನನ್ನ ಮಟ್ಟಿಗೆ ಇಂದು ಒಬ್ಬನೇ ಒಬ್ಬ ಹೊರಟಿದ್ದ-ತಾನಲ್ಲಿ ಎಷ್ಟೇ ಕಾಲ ವಾಸವಿದ್ದರೂ ಕಡೆಗೂ ಆಗಂತುಕನಾಗಿಯೇ ಉಳಿಯಲಿರುವ ಆ ದೇಶಕ್ಕೆ.

ಲಗೇಜು ಪರಿಶೀಲನೆಯ ನಂತರ ಮುಮ್ತಾಜ್ ನಮ್ಮನ್ನು ಡೆಕ್ಕಿಯ ಮೇಲೆ ಆಹ್ವಾನಿಸಿದ. ಜುಗಲ್‌ನ ಕೈಯನ್ನು ತನ್ನ ಕೈಗೆ ತೆಗೆದುಕೊಂಡು ನುಡಿದ-'ಅಲ್ಲಿ ಸಮುದ್ರ ಮತ್ತು ಆಕಾಶ ಸೇರುವುದು ಕಾಣುತ್ತಿದೆಯೇ? ಅದು ಬರೀ ಭ್ರಮೆ. ಯಾಕೆಂದರೆ ಅವೆರಡೂ ಒಂದನ್ನೊಂದು ಸಂಧಿಸುವುದೇ ಇಲ್ಲ. ಆದರೆ ಆ ಇಲ್ಲದ ಮಿಲನ-ಎಷ್ಟು ಸುಂದರವಾಗಿದೆಯಲ್ಲ?'

ಜುಗಲ್ ಸುಮ್ಮನೇ ಇದ್ದ. ಬಹುಶಃ ಯೋಚಿಸುತ್ತಿದ್ದ-'ಅಷ್ಟಕ್ಕೂ ನಾನು ನಿಜವಾಗಲೂ ನಿನ್ನನ್ನು ಕೊಲ್ಲಬಹುದು.'

ತಾನು ಬೆಳಗ್ಗೆಯಿಂದ ಕುಡಿಯುತ್ತಿದ್ದ ಕೊನ್ಯಾಕ್ ತರಲು ಮುಮ್ತಾಜ್ ಬಾರ್‌ನವನಿಗೆ ಹೇಳಿದ. ಅಲ್ಲಿ ನಾವು ನಾಲ್ವರೂ ನಂನಮ್ಮ ಗ್ಲಾಸು ಕೈಯಲ್ಲಿ ಹಿಡಿದು ನಿಂತೆವು. ನಿರಾಶ್ರಿತರೆಲ್ಲ ಮೇಲಕ್ಕೆ ಹತ್ತಿ ಬರುತ್ತಿದ್ದರು. ಆಗ ಜುಗಲ್ ಇದ್ದಕ್ಕಿದ್ದಂತೆ ತನ್ನ ಗ್ಲಾಸ್ ಎತ್ತಿ ಕುಡಿದು ಮುಗಿಸಿ ಮುಮ್ತಾಜ್‌ನನ್ನು ಬೇಡಿದ-'ನನ್ನನ್ನು ಕ್ಷಮಿಸು. ಬಹುಶಃ ನಾನು ಆವತ್ತು ನಿನ್ನನ್ನು ತುಂಬಾ ನೋಯಿಸಿದೆ.'

ದೀರ್ಘ ಮೌನದ ನಂತರ ಮುಮ್ತಾಜ್ ಕೇಳಿದ-'ಆವತ್ತು ನೀನು ನನ್ನನ್ನು ಕೊಂದರೂ ಕೊಲ್ಲಬಹುದು ಅಂದಾಗ ನಿನ್ನ ಮನಸ್ಸಿನಲ್ಲಿ ನಿಜವಾಗಲೂ ಹಾಗಿತ್ತಾ? ನನಗೆ ಗೊತ್ತಾಗಬೇಕು.'

ಜುಗಲ್ ತಲೆಯಾಡಿಸಿದ-'ಹೌದು, ಆದರೆ ನನಗೀಗ ಪಶ್ಚಾತ್ತಾಪವಾಗಿದೆ....'

'ನೀನು ನನ್ನನ್ನು ಕೊಂದಿದ್ದರೆ, ನಿನಗಿನ್ನೂ ಪಶ್ಚಾತ್ತಾಪವಾಗುತ್ತಿತ್ತು' ಮುಮ್ತಾಜ್ ವೇದಾಂತಿಯಂತೆ ಹೇಳಿದ. 'ಯಾಕೆಂದರೆ ಆಗ ನೀನು ಕೊಂದಿದ್ದು ಮುಸ್ಲಿಮನಾದ, ನಿನ್ನ ಗೆಳೆಯನಾದ ಮುಮ್ತಾಜನನ್ನಲ್ಲ, ಒಬ್ಬ ಮನುಷ್ಯನನ್ನು ಅನ್ನುವುದು ನಿನ್ನ ಅರಿವಿಗೆ ಬರುತ್ತಿತ್ತು. ಅಂದರೆ, ಅವನೊಬ್ಬ ಸೂಳೆಮಗನಾಗಿದ್ದರೆ-ನೀನು ಅವನೊಳಗಿನ ಸೂಳೆಮಗನನ್ನು ಕೊಂದಿರುತ್ತಿರಲಿಲ್ಲ. ಅದೇ ರೀತಿ ಅವನು ಮುಸ್ಲಿಮನಾಗಿದ್ದರೆ,

ನೀನು ಆ ವ್ಯಕ್ತಿಯನ್ನು ಸಾಯಿಸಿರುತ್ತಿದ್ದೆ, ಅವನ ಮುಸ್ಲಿಂತನವನ್ನಲ್ಲ. ಆ ಮೃತದೇಹ ಮುಸ್ಲಿಮರ ಕೈಗೆ ಸಿಕ್ಕಿದ್ದರೆ ಸ್ಮಶಾನದಲ್ಲಿ ಇನ್ನೊಂದು ಗೋರಿ ಬರುತ್ತಿತ್ತು. ಆದರೆ ಜಗತ್ತು ಒಬ್ಬ ಮನುಷ್ಯನನ್ನು ಕಳೆದುಕೊಂಡಿರುತ್ತಿತ್ತು.'

ಮುಮ್ತಾಜ್ ಉಸಿರೆಳೆಯಲು ಕ್ಷಣ ಸುಮ್ಮನಿದ್ದು ಮತ್ತೆ ಮುಂದುವರೆಸಿದ-'ನೀನು ನನ್ನನ್ನು ಸಾಯಿಸಿದ ಮೇಲೆ ನನ್ನ ಸಹ ಮುಸ್ಲಿಮರು ನನ್ನನ್ನು ಹುತಾತ್ಮನೆಂದು ಕರೆಯಬಹುದಿತ್ತು. ಹಾಗೇನಾದರೂ ಆಗಿದ್ದರೆ-ದೇವರ ಮೇಲೆ ಆಣೆ ಮಾಡಿ ಹೇಳುತ್ತೇನೆ-ನಾನು ಗೋರಿಯಿಂದೆದ್ದು ಬಂದು ಕೂಗಿಕೊಳ್ಳುತ್ತಿದ್ದೆ-"ನೀವು ಹೊರೆಸುತ್ತಿರುವ ಈ ಡಿಗ್ರಿ ನನಗೆ ಬೇಡ, ಯಾಕೆಂದರೆ ನಾನು ಪರೀಕ್ಷೆಗೆ ಕೂತಿರಲಿಲ್ಲ." ಲಾಹೋರ್‌ನಲ್ಲಿ ಒಬ್ಬ ಮುಸ್ಲಿಂ ನಿನ್ನ ಮಾಮನನ್ನು ಕೊಂದ. ನೀನು ಬಾಂಬೆಯಲ್ಲಿ ಆ ಸುದ್ದಿ ಕೇಳಿ ನನ್ನನ್ನು ಕೊಂದೆ. ಹೇಳು-ಆ ಮೂಲಕ ನೀನು ಯಾವ ಪದಕ ಪಾರಿತೋಷಕಗಳಿಗೆ ಅರ್ಹನಾಗುತ್ತಿದ್ದೆ? ಮತ್ತೆ ಲಾಹೋರಿನ ನಿನ್ನ ಮಾಮ  ಮತ್ತು ಅವನ ಹಂತಕ? ಅವರಿಗೆ ಯಾವ ಗೌರವ ಸಲ್ಲಬೇಕು? ನಾನು ಹೇಳುವುದು-ಸತ್ತವರು ನಾಯಿಗಳಂತೆ ಸತ್ತರು, ಕೊಂದವರು ವೃಥಾ ಕೊಂದರು.'

'ನೀನು ಹೇಳಿದ್ದು ಸರಿ'-ನಾನೆಂದೆ.

'ಇಲ್ಲ, ಹಾಗಲ್ಲ' ಉದ್ವಿಗ್ನ ದನಿಯಲ್ಲಿ ನುಡಿದ ಮುಮ್ತಾಜ್-'ನಾನು ಸರಿಯಿರಬಹುದು, ಆದರೆ ಹೇಳಬೇಕೆಂದಿದ್ದುದನ್ನು ನಾನು ಸರಿಯಾಗಿ ಹೇಳಲಿಲ್ಲ. ಧರ್ಮ ಅಥವಾ ಶ್ರದ್ಧೆ ಅನ್ನುವಾಗ ನಾನು ನಮ್ಮಲ್ಲಿ ಶೇಕಡಾ ತೊಂಬತ್ತೊಂಬತ್ತು ಜನಕ್ಕೆ ತಗಲುವ ಸೋಂಕಿನ ಬಗ್ಗೆ ಹೇಳುತ್ತಿಲ್ಲ. ನನ್ನ ಪ್ರಕಾರ ಮನುಷ್ಯನಿಗೆ ವಿಶೇಷತೆ ತಂದುಕೊಡುವುದು ಅವನ ಶ್ರದ್ಧೆಯೇ. ಮಂದೆಯಿಂದ ಅವನನ್ನು ಪ್ರತ್ಯೇಕಿಸಿ, ಮನುಷ್ಯತ್ವವನ್ನು ಸಾಬೀತು ಮಾಡುವಂಥದ್ದು.'

ಅವನ ಕಣ್ಣುಗಳನ್ನು ವಿಚಿತ್ರ ಪ್ರಭೆ ತುಂಬಿಕೊಂಡಿತು-'ಈ ಒಬ್ಬ ಮನುಷ್ಯನ ಬಗ್ಗೆ ಹೇಳುತ್ತೇನೆ. ತಡಿ. ಅವನೊಬ್ಬ ಅತಿ ಹೀನಾಯ ವೃತ್ತಿಯ ಕಟ್ಟಾ ಹಿಂದೂ. ಆದರೆ ಅವನ ಆತ್ಮ ಮಾತ್ರ ಉಜ್ವಲವಾದದ್ದು.'

'ಯಾರ ಬಗ್ಗೆ ಮಾತಾಡುತ್ತಿದ್ದೀಯಾ?'-ನಾನು ಕೇಳಿದೆ.

ಮುಮ್ತಾಜ್ ಹೇಳಿದ-'ಒಬ್ಬ ತಲೆಹಿಡುಕ.'

ನಾವು ದಿಗ್ಭ್ರಾಂತರಾದೆವು. 'ಏನು? ತಲೆಹಿಡುಕನಾ?' ಕೇಳಿದೆ. ಅವನು ತಲೆಯಾಡಿಸಿದ. 'ಜಗತ್ತಿನ ಕಣ್ಣಿಗೆ ಅವನೊಬ್ಬ ತಲೆಹಿಡುಕ-ಹೆಂಗಸರ ವ್ಯಾಪಾರಿಯಾದರೂ, ಎಂಥ ಮನುಷ್ಯ ಆತ!' ಮುಮ್ತಾಜ್ ತನ್ನ ಕಥೆ ಆರಂಭಿಸಿದ.

'ನನಗೆ ಅವನ ಪೂರ್ತಿ ಹೆಸರು ನೆನಪಿಲ್ಲ. ಎಂಥದೋ ಸಹಾಯ್. ಮದ್ರಾಸಿನಿಂದ ಬಂದವನು. ಅತಿ ಸೂಕ್ಷ್ಮ ಶಿಸ್ತಿನ ಅಭ್ಯಾಸಗಳ ವ್ಯಕ್ತಿ. ಜಾಳ್‌ನಲ್ಲಿ ಅವನಿದ್ದ ಮನೆ ತುಂಬಾ ಚಿಕ್ಕದಾದರೂ, ಎಲ್ಲ ವಸ್ತುಗಳನ್ನೂ ಇರಬೇಕಾದ ಜಾಗದಲ್ಲೇ. ಅಚ್ಚುಕಟ್ಟಾಗಿ ಜೋಡಿಸಿರಬೇಕು. ಅಲ್ಲಿ ಹಾಸಿಗೆಯಿರಲಿಲ್ಲ. ನೆಲದ ಮೇಲೆ ಹಾಸುವ ದಿವಾನ್ ಮತ್ತು ಒರಗುದಿಂಬುಗಳು. ಎಲ್ಲ ಅತಿ ಶುಭ್ರ. ಮನೆಗೊಬ್ಬ

ಆಳಿದ್ದರೂ ಹೆಚ್ಚಿನ ಕೆಲಸ-ಅದರಲ್ಲೂ ಒರೆಸಿ ಗುಡಿಸುವ ಕೆಲಸಗಳನ್ನು ಸಹಾಯ್ ಸ್ವತಃ ಮಾಡುತ್ತಿದ್ದ. ನೇರವಾದ ಮನುಷ್ಯ. ಎಂದೂ ಮೋಸ ಮಾಡುವವನಲ್ಲ, ಪೂರ್ತಿ ನಿಜವಲ್ಲದ್ದನ್ನು ಎಂದೂ ಹೇಳುತ್ತಿರಲಿಲ್ಲ. ಉದಾಹರಣೆಗೆ, ಹೊತ್ತು ಮೀರಿಹೋಗಿ, ಮದ್ಯ ಮುಗಿದುಹೋಗಿದ್ದರೆ-"ಸಾಹೇಬರೇ, ಈ ಪ್ರದೇಶದಲ್ಲಿ ಈ ಹೊತ್ತಿನಲ್ಲಿ ಸಿಗೋದು ಕಚಡಾ ಮಾಲಷ್ಟೇ. ಸುಮ್ಮನೆ ದುಡ್ಡು ಹಾಳು ಮಾಡಿಕೋಬೇಡಿ" ಅನ್ನುತ್ತಿದ್ದ. ಯಾವುದಾದರೂ ಹುಡುಗಿಯ ಬಗ್ಗೆ ಅವನಿಗೆ ಸ್ವತಃ ಅನುಮಾನಗಳಿದ್ದರೆ ಅದನ್ನೂ ನಿಮಗೆ ಹೇಳಿಬಿಡುತ್ತಿದ್ದ. ಒಂದು ಸಲ, ತಾನಾಗಲೇ ಇಪ್ಪತ್ತು ಸಾವಿರ ರೂಪಾಯಿ ಕೂಡಿಟ್ಟಿರುವುದಾಗಿ ನನಗೆ ಹೇಳಿದ. ಶೇಕಡಾ ಇಪ್ಪತ್ತೈದರಷ್ಟು ಕಮಿಷನ್ನಿನಂತೆ ಅಷ್ಟು ದುಡಿಯಲು ಅವನಿಗೆ ಮೂರು ವರ್ಷ ಹಿಡಿದಿತ್ತು. "ಇನ್ನು ಹತ್ತು ಸಾವಿರ ಕೂಡಿದರೆ ಸಾಕು, ಬನಾರಸ್ಸಿಗೆ ಹೋಗಿ ಬಟ್ಟೆ ವ್ಯಾಪಾರ ಶುರು ಮಾಡುತ್ತೇನೆ." ಅವನಿಗೆ ಇನ್ನೂ ಹೆಚ್ಚು ಸಂಪಾದಿಸಬೇಕು ಅಂತ ಯಾಕನ್ನಿಸಲಿಲ್ಲವೋ, ಅಥವಾ, ಬಟ್ಟೆ ಚಿಲ್ಲರೆ ವ್ಯಾಪಾರದಲ್ಲಿ ಅಂಥ ಆಕರ್ಷಣೆ ಏನಿತ್ತೋ ನನಗೆ ತಿಳಿಯಲಿಲ್ಲ.

'ವಿಚಿತ್ರ ಮನುಷ್ಯ' ಅಂದೆ ನಾನು.

ಮುಮ್ತಾಜ್ ಮುಂದುವರೆಸಿದ : 'ಮೊದಲಿಗೆ, ಅವನು ಹೊರಗೇನು ಕಾಣಿಸುತ್ತಾನೋ ಅವನು ಅದಲ್ಲ ಅಂದುಕೊಂಡೆ. ಬಹಳ ದೊಡ್ಡ ವಂಚಕನೇ ಇರಬೇಕು ಅನಿಸಿತು. ಅಷ್ಟಕ್ಕೂ ತನ್ನ ಗಿರಾಕಿಗಳಿಗೆ ಸರಬರಾಜು ಮಾಡುತ್ತಿದ್ದ ಹುಡುಗಿಯರನ್ನು ಅವನು ತನ್ನ ಸ್ವಂತ ಮಕ್ಕಳಂತೆಯೇ ನೋಡಿಕೊಳ್ಳುತ್ತಾನೆ ಅಂತ ನಂಬಿಕೊಳ್ಳುವುದು ಕಷ್ಟವಾಗಿತ್ತು. ಮತ್ತೆ ಅವನು ಆ ಹುಡುಗಿಯರ ಹೆಸರಿನಲ್ಲಿ ಅಂಚೆ ಕಚೇರಿಯಲ್ಲಿ ಖಾತೆ ತೆರೆದು ಅವರ ಉಳಿತಾಯವನ್ನೆಲ್ಲ ಅಲ್ಲಿಡಲು ಒತ್ತಾಯಿಸುತ್ತಿದ್ದ ಅನ್ನುವುದು ನನಗೆ ವಿಚಿತ್ರವಾಗಿ ಕಾಣಿಸಿತು. ಮತ್ತೂ ಕೆಲವರ ಖರ್ಚುಗಳಿಗೆ, ಇವನೇ ತುಸು ಹಣ ಕೊಡುತ್ತಿದ್ದ. ಇದೆಲ್ಲ ಅವಾಸ್ತವಿಕವಾಗಿ ಕಾಣುತ್ತಿತ್ತು-ಯಾಕೆಂದರೆ ನಿಜ ಜೀವನದಲ್ಲಿ ಹೀಗೆಲ್ಲ ನಡೆಯುವುದಿಲ್ಲ. ಒಂದು ದಿನ ಅವನನ್ನು ನೋಡಲು ಹೋದಾಗ ಅವನೆಂದ-"ಅಮೀನಾ ಸಕೀನಾ ಇಬ್ಬರಿಗೂ ಈವತ್ತು ವಾರ ರಜಾ. ಅವರಿಗೆ ಮಾಂಸ ತಿನ್ನಲು ಇಷ್ಟ. ಆದರೆ ಅವರಿಬ್ಬರನ್ನು ಬಿಟ್ಟು ಈ ಮನೆಯಲ್ಲಿ ಉಳಿದೆಲ್ಲರೂ ಸಸ್ಯಾಹಾರಿಗಳಲ್ಲವೇ? ಅದಕ್ಕೆ ಇಲ್ಲಿ ಬೇಯಿಸುವಂತಿಲ್ಲ." ಇನ್ನೊಂದು ದಿನ, ಅವನೇ ನಿಂತು ತನ್ನ ಮುಸ್ಲಿಂ ಗಿರಾಕಿಯೊಬ್ಬನೊಂದಿಗೆ ಮದುವೆ ಮಾಡಿಕೊಟ್ಟಿದ್ದ ಹೈದರಾಬಾದಿನ ಹಿಂದೂ ಹುಡುಗಿ, ಲಾಹೋರಿನಿಂದ ಬರೆದ ಪತ್ರದ ಬಗ್ಗೆ ಹೇಳಿದ. "ನಾನು ಖ್ಯಾತ ಸಂತ ದಾತಾ ಸಾಹೇಬರ ದರ್ಗಾಗೆ ಹೋಗಿ ಬೇಡಿಕೊಂಡಿದ್ದು ನಿಜವಾಗಿದೆ. ನಾನು ಮತ್ತೆ ಅಲ್ಲಿಗೆ ಹೋಗಿ, ನೀನು ಬೇಗ ಅಷ್ಟೂ ದುಡ್ಡು ಸಂಪಾದಿಸಿ ಬನಾರಸ್ಸಿಗೆ ಹೋಗಿ ನಿನ್ನ ಬಟ್ಟೆ ವ್ಯಾಪಾರ ಶುರು ಮಾಡುವಂತಾಗಲಿ ಎಂದು ಕೋರಿಕೊಳ್ಳುತ್ತೇನೆ." ನಾನೂ ಮುಸ್ಲಿಮನಾದ್ದರಿಂದ ಇವನು ನನಗೆ ಆ ಜನಪ್ರಿಯ ಮುಸ್ಲಿಮನ ಕಥೆ ಹೇಳುತ್ತಿದ್ದಾನೆ ಅಂದುಕೊಂಡು ನಾನು ನಕ್ಕುಬಿಟ್ಟಿದ್ದೆ.

'ಮತ್ತೆ ನೀನು ಅಂದುಕೊಂಡಿದ್ದು ಸುಳ್ಳಾ?' ನಾನು ಮುಮ್ತಾಜನನ್ನು ಕೇಳಿದೆ.

'ಹೌದು. ಮತ್ತು ಅವನು ಏನು ಕಾಣಿಸುತ್ತಿದ್ದನೋ ಅದೇ ಆಗಿದ್ದ. ಅವನಲ್ಲೂ ದೋಷಗಳಿರಲೇಬೇಕು. ಅಷ್ಟಾದರೂ ಆತ ಅದ್ಭುತ ಮನುಷ್ಯನಾಗಿದ್ದ.'

'ಅವನು ಮೋಸಗಾರ ಅಲ್ಲ ಅಂತ ನಿನಗೆ ಗೊತ್ತಾಗಿದ್ದು ಹೇಗೆ?'-ಇದುವರೆಗೂ ಮಾತಾಡದೆ ಸುಮ್ಮನಿದ್ದ ಜುಗಲ್ ಬಾಯಿ ಹಾಕಿದ.

'ಅವನ ಸಾವಿನ ಮೂಲಕ'-ಮುಮ್ತಾಜ್ ಉತ್ತರಿಸಿದ. 'ಹಿಂದೂ ಮುಸ್ಲಿಂ ಹತ್ಯೆಗಳು ಆಗಲೇ ಶುರುವಾಗಿದ್ದವು. ಒಂದು ಮುಂಜಾನೆ ನಾನು ಭಿಂಡಿ ಬಜಾರ್ ಮೂಲಕ ಅವಸರವಸರವಾಗಿ ಹೆಜ್ಜೆ ಹಾಕುತ್ತ ಬರುತ್ತಿದ್ದೆ. ರಾತ್ರಿ ಕರ್ಫ್ಯೂನಿಂದಾಗಿ ಆ ಪ್ರದೇಶವಿನ್ನೂ ನಿರ್ಜನವಾಗಿಯೇ ಇತ್ತು. ಟ್ರಾಮ್‌ಗಳಾವೂ ಇರಲಿಲ್ಲ. ಟ್ಯಾಕ್ಸಿಗಳನ್ನಂತೂ ಕೇಳುವಂತೆಯೇ ಇಲ್ಲ. ಆಗ ಜೆ.ಜೆ. ಆಸ್ಪತ್ರೆ ಮುಂದಿನ ಕಾಲುಹಾದಿಯ ಮೇಲೆ ಒಬ್ಬ ಮನುಷ್ಯ ಬಿದ್ದುಕೊಂಡಿದ್ದು ಕಾಣಿಸಿತು. ಮೊದಲಿಗೆ ಯಾರೋ ಜೋಪಡಿವಾಲಾ ಇನ್ನೂ ನಿದ್ದೆ ಮಾಡುತ್ತಿರಬೇಕು ಅನಿಸಿತು. ಆದರೆ ರಕ್ತ ಕಾಣಿಸಿ ಅಲ್ಲೇ ನಿಂತುಕೊಂಡೆ. ದೇಹದಲ್ಲಿ ತುಸುವೇ ಅಲುಗಾಟ ಕಂಡು ಮುಖ ನೋಡಲು ಬಾಗಿದೆ. ಅದು ಸಹಾಯ್ ಎಂದು ಗೊತ್ತಾಗಿದ್ದೇ ಆಘಾತವಾಯಿತು. ಆ ನಗ್ನ ಕಾಲುಹಾದಿಯ ಮೇಲೇ ಕೂತೆ. ಅವನು ಯಾವಾಗಲೂ ಧರಿಸುತ್ತಿದ್ದ ಶುಭ್ರ ಬಿಳಿ ಅಂಗಿ ನೆತ್ತರಲ್ಲಿ ನೆಂದುಹೋಗಿತ್ತು. ನರಳುತ್ತಿದ್ದ. ಮೆಲ್ಲಗದೆ ಅವನ ಭುಜ ಅಲುಗಿಸಿ ನಾಲ್ಕಾರು ಬಾರಿ ಅವನ ಹೆಸರು ಕರೆದೆ. ಮೊದಮೊದಲು ಏನೂ ಪ್ರತಿಕ್ರಿಯೆ ಬರಲಿಲ್ಲ. ಆಮೇಲೆ ಕಣ್ಣು ತೆರೆದ. ನಿರ್ಭಾವದ ಕಣ್ಣುಗಳು. ಒಮ್ಮೆಲೇ ಅವನ ಇಡೀ ದೇಹ ಕಂಪಿಸಿತು. ನನ್ನನ್ನು ಗುರುತು ಹಿಡಿದನೆಂದು ಗೊತ್ತಾಯಿತು. 'ನೀನು!' ಪಿಸುಗುಟ್ಟಿದ.

'ನಾನು ಪ್ರಶ್ನೆಗಳ ಮಳೆಗರೆದೆ. ಜನ ತಂತಮ್ಮ ಪ್ರದೇಶಗಳಲ್ಲೇ ಇರಬಯಸುವ ಸಮಯದಲ್ಲಿ ಇವನೇಕೆ ಈ ಮುಸ್ಲಿಂ ಪ್ರದೇಶಕ್ಕೆ ಬಂದ? ಇವನಿಗೆ ಇರಿದವರಾರು? ಎಷ್ಟು ಹೊತ್ತಿನಿಂದ ಹೀಗೇ ಬಿದ್ದಿದ್ದಾನೆ? ಅವನು ಹೇಳಿದ್ದಿಷ್ಟೇ-'ನನ್ನ ಸಮಯ ಬಂತು. ಎಲ್ಲ ಭಗವಂತನ ಇಚ್ಛೆ.'

'ಭಗವಂತನ ಇಚ್ಛೆಯೇನೋ ನನಗಂತೂ ಗೊತ್ತಿಲ್ಲ. ಆದರೆ ನನ್ನ ಬಗ್ಗೆಯಂತೂ ಗೊತ್ತಿತ್ತು. ನಾನು ಮುಸ್ಲಿಂ. ಇದು ಮುಸ್ಲಿಂ ಪ್ರದೇಶ. ನಾನು,-ಒಬ್ಬ ಮುಸ್ಲಿಂ, ಇಲ್ಲಿ ನಿಂತು-ಒಬ್ಬ ಮುಸ್ಲಿಂ ಹಂತಕನ ಕೈಗೆ ಸಿಕ್ಕಿದ ಹಿಂದೂವೊಬ್ಬನ ಸಾವನ್ನು ನೋಡುತ್ತ ನಿಲ್ಲಬೇಕೆಂಬುದನ್ನು ನನಗೆ ಸಹಿಸಲಾಗಲಿಲ್ಲ. ಸಹಾಯ್ ಸಾಯುವುದನ್ನು ನೋಡುತ್ತ ನಿಂತ ನಾನೂ-ಅವನ ಹಂತಕನಂತೆಯೇ-ಒಬ್ಬ ಮುಸ್ಲಿಂ. ನಾನು ಇಲ್ಲೇ ಇದ್ದು, ಪೋಲೀಸರೇನಾದರೂ ಬಂದರೆ ನನ್ನನ್ನು ಎಳೆದೊಯ್ಯುವುದು ನಿಶ್ಚಿತ-ಕೊಲೆ ಆಪಾದನೆ ಮೇಲಲ್ಲವಾದರೆ, ವಿಚಾರಣೆಗಾದರೂ ಒಯ್ದೇ ಒಯ್ಯುತ್ತಾರೆ-ಅನ್ನುವ ಆಲೋಚನೆಗಳೂ ಮನಸ್ಸಿನಲ್ಲಿ ಹಾಯುತ್ತಿದ್ದವು. ಅವನನ್ನು ಆಸ್ಪತ್ರೆಗೆ ಕರೆದೊಯ್ದರೆ? ತನ್ನನ್ನು ಕೊಂದ ಮುಸ್ಲಿಮರ ಮೇಲಿನ ಸೇಡಿಗಾಗಿ ಆತ ನನ್ನನ್ನೇ ಕೊಲೆಗಾರನೆಂದು ತೋರಿಸಿಬಿಡುವನೇ? ಹೇಗಿದ್ದರೂ ಸಾಯುತ್ತಿದ್ದಾನೆ. ನನಗೆ ನನ್ನನ್ನು ಉಳಿಸಿಕೊಳ್ಳಲು ಅಲ್ಲಿಂದ ಎದ್ದು ಓಡಿಬಿಡಬೇಕು ಅನಿಸಿತು. ಹಾಗೇ ಮಾಡುತ್ತಿದ್ದೆನೇನೋ. ಆದರೆ ಅಷ್ಟು ಹೊತ್ತಿಗೆ ಅವನು ನನ್ನ ಹೆಸರು ಹಿಡಿದು ಕರೆದ. ಅಸಾಧ್ಯ ಅತಿಮಾನುಷ ಪ್ರಯತ್ನದಿಂದ ತನ್ನ ಅಂಗಿ ಗುಂಡಿ ಕಳಚಿ ಒಳಗೆ ಕೈ ಹಾಕಿದ. ಆದರೆ ಹೊರತೆಗೆಯುವ ತ್ರಾಣವಿರಲಿಲ್ಲ. ಮತ್ತೆ ಕೇಳಿಸಲಾರದಷ್ಟು ಮೆಲುವಾಗಿ ಹೇಳಿದ-"ಇಲ್ಲೊಂದು ಪೊಟ್ಟಣವಿದೆ....ಅದರಲ್ಲಿ ಸುಲ್ತಾನಾಗೆ ಸೇರಿದ ಒಡವೆಗಳು ಮತ್ತು ಹನ್ನೆರಡು ಸಾವಿರ ರೂಪಾಯಿ.... ದಯವಿಟ್ಟು ಅವಳಿಗೆ ತಲುಪಿಸಿಬಿಡುತ್ತೀಯಾ....ಅವಳಿಗೆ ಯಾವುದಾದರೂ ಸುರಕ್ಷಿತ ಜಾಗಕ್ಕೆ ಹೋಗಲು ಹೇಳು....ಆದರೆ....ದಯವಿಟ್ಟು....ಮೊದಲು ನಿನ್ನ ಕ್ಷೇಮ ನೋಡಿಕೋ!"

ಮುಮ್ತಾಜ್ ಮೌನಕ್ಕೆ ಶರಣಾದ. ನನಗ್ಯಾಕೋ ಅವನ ದನಿ ಜೆ.ಜೆ. ಆಸ್ಪತ್ರೆಯ ಎದುರಿನ ಕಾಲುಹಾದಿಯಲ್ಲಿ ಸಹಾಯ್‌ನ ಸಾಯುವ ದನಿಯೊಂದಿಗೆ ಒಂದಾಗಿಹೋದಂತೆ ಭಾಸವಾಯಿತು; ಮತ್ತು ಅವೆರಡೂ ದನಿಗಳು ಕೂಡಿ ದೂರದಲ್ಲಿ ಸಮುದ್ರ ಆಕಾಶಗಳು ಬೆರೆಯುವ ನೀಲ ಬಿಂದುವಿನವರೆಗೆ ಸಾಗಿದಂತೆ....

ಮುಮ್ತಾಜ್ ಹೇಳಿದ-'ನಾನು ದುಡ್ಡು ಒಡವೆಗಳನ್ನು ಸಹಾಯ್‌ನ ಹುಡುಗಿಯರಲ್ಲೊಬ್ಬಳಾಗಿದ್ದ ಸುಲ್ತಾನಾಗೊಯ್ದು ಕೊಟ್ಟೆ. ಅವಳು ಅಳತೊಡಗಿದಳು."

ನಾವು ಹಲಗೆ ಹಾಸನ್ನು ಇಳಿದು ಬಂದೆವು. ಮುಮ್ತಾಜ್ ಕೈ ಬೀಸುತ್ತಿದ್ದ.

'ಅವನು ಕೈ ಬೀಸುತ್ತಿರುವುದು ಸಹಾಯ್‌ಗೆ ಅಂತ ಅನಿಸುತ್ತಿಲ್ಲವೇ ?'-ನಾನು ಜುಗಲ್‌ನನ್ನು ಕೇಳಿದೆ.

ಅವನೆಂದ-'ನಾನೇ ಸಹಾಯ್ ಆಗಿರಬೇಕಿತ್ತು.'

# ಪರಿಣಾಮ

ಉರ್ದು ಮೂಲ : **ಸಾದತ್ ಹಸನ್ ಮಂಟೊ**

ಅನುವಾದ : **ಎನ್.ಎಸ್. ಶಂಕರ್**

**ಕಾ**ಸಿಂ ಬಾಗಿಲ ಮೂಲಕ ನಡೆದು ಒಳಬಂದಾಗ, ತನ್ನ ತೊಡೆ ಹೊಕ್ಕಿದ್ದ ಗುಂಡಿನ ಉರಿನೋವಷ್ಟೇ ಅವನ ಅರಿವಿನಲ್ಲಿದ್ದಿದ್ದು. ಆದರೆ ಅಂಗಳದಲ್ಲಿ ಬಿದ್ದಿದ್ದ ಹೆಂಡತಿಯ ರಕ್ತಸಿಕ್ತ ದೇಹ ಕಂಡೊಡನೆ ಅವನಿಗೆ ತನ್ನ ನೋವು ಮರೆತುಹೋಯಿತು. ತಕ್ಷಣವೇ ಕೊಡಲಿ ಎತ್ತಿಕೊಂಡು ನುಗ್ಗಿ ಅಡ್ಡಬಂದವರನ್ನೆಲ್ಲ ಕೊಚ್ಚಿಹಾಕಿ, ಕಂಡಿದ್ದೆಲ್ಲವನ್ನೂ ಸಿಗಿದು ಹಾಕಿಬಿಡಬೇಕು ಅನಿಸಿತು. ಮತ್ತೆ ಮಗಳ ನೆನಪಾಯಿತು-ಶರಿಫಾನ್.

ಕೂಗಿದ-'ಶರಿಫಾನ್! ಶರಿಫಾನ್!'

ಮನೆಯ ಎರಡೂ ಕೋಣೆಯ ಬಾಗಿಲು ಮುಚ್ಚಿದ್ದವು. ಆ ಬಾಗಿಲು ಹಿಂದೆ ಬಚ್ಚಿಟ್ಟುಕೊಂಡಿದ್ದಾಳೆಯೇ? ಮತ್ತೆ ಚೀರಿದ-'ಶರಿಫಾನ್! ಶರಿಫಾನ್! ನಾನಮ್ಮ ನಿನ್ನ ಅಪ್ಪ'. ಉತ್ತರವಿಲ್ಲ. ಮೊದಲ ಬಾಗಿಲನ್ನು ಎರಡೂ ಕೈಗಳಿಂದ ದೂಡಿ ತೆರೆದ. ಆಗ ಅವನ ಕಣ್ಣಿಗೆ ಬಿದ್ದ ದೃಶ್ಯ ಎಷ್ಟು ಘೋರವಾಗಿತ್ತೆಂದರೆ ನೋಡಿ ಮೂರ್ಛೆ ಬೀಳುವಂತಾಯಿತು.

ನೆಲದ ಮೇಲೆ ಹೆಚ್ಚು ಕಮ್ಮಿ ಬೆತ್ತಲಾಗಿ ಅಂಗಾತ ಬಿದ್ದಿದ್ದ ಹುಡುಗಿಯ ದೇಹ; ಭಾವಣೆಯನ್ನು ಸಿಟ್ಟಿಸುತ್ತಿದ್ದ ಅವಳ ಸಣ್ಣ ಸ್ತನಗಳು. ಚೀರಬೇಕೆನಿಸಿತು. ಆಗಲಿಲ್ಲ. ಮುಖದಿರುಪಿ ದುಃಖದಿಂದ ತೋಯ್ದ ದನಿಯಲ್ಲಿ ಮೃದುವಾಗಿ ಉಚ್ಚರಿಸಿದ-ಶರಿಫಾನ್. ನೆಲದ ಮೇಲಿಂದ ಕೆಲವು ಬಟ್ಟೆಗಳೆತ್ತಿಕೊಂಡು ಅವಳ ಮೇಲೆ ಎಸೆದ. ಆದರೆ ಆ ಬಟ್ಟೆ ಹಲವು ಅಡಿ ದೂರ ಹೋಗಿ ಬಿದ್ದುದನ್ನೂ ಅವನು ಗಮನಿಸಲಿಲ್ಲ.

ಕೊಡಲಿಯೆತ್ತಿಕೊಂಡು ಮನೆಯಿಂದ ಹೊರಗೋಡಿದ ಅವನ ಮನಸ್ಸಿನಲ್ಲಿ ಈಗ ತನ್ನ ತೊಡೆ ಹೊಕ್ಕಿದ್ದ ಗುಂಡಿನ ಪರಿವೆಯಿರಲಿಲ್ಲ. ಹೆಂಡತಿಯ ರಕ್ತಸಿಕ್ತ ದೇಹವೂ ಗಮನದಲ್ಲಿರಲಿಲ್ಲ. ಕೇವಲ ಶರಿಫಾನ್-ಸತ್ತು ನೆಲದ ಮೇಲೆ ಬೆತ್ತಲು ಗುಪ್ಪೆಯಾಗಿ ಬಿದ್ದಿದ್ದ ಶರಿಫಾನ್.

ಕೊಡಲಿ ಹಿಡಿದು ಊರ ಬೀದಿಗಳಲ್ಲಿ ಕುದಿಯುವ ಲಾವಾರಸಂದತೆ ಹರಿದಾಡಿದ. ಮುಖ್ಯ ಚೌಕದಲ್ಲಿ ಇವನ ಕಣ್ಣಿಗೊಬ್ಬ ಸಿಖ್ ಕಂಡ-ಭರ್ಜರಿ ಆಕಾರದ ಆಸಾಮಿ. ಆದರೆ, ಕಾಸಿಂ ಅವನ ಮೇಲೆ ಎಷ್ಟು ಹಠಾತ್ತಾಗಿ ಮತ್ತು ಭಯಂಕರವಾಗಿ ಎರಗಿದನೆಂದರೆ, ಆ ಮನುಷ್ಯ ಬುಡ ಕಡಿದ ಮರದಂತೆ, ಕತ್ತರಿಸಿ ಬಿದ್ದ ತಲೆಯಿಂದ ರಕ್ತ ಚಿಮ್ಮಿಸುತ್ತ ನೆಲಕ್ಕೊರಗಿದ.

ಕಾಸಿಮನಿಗೆ, ಕುದಿಯುವ ಎಣ್ಣೆಯ ಮೇಲೆ ತಣ್ಣೀರು ಚಿಮುಕಿಸಿದಂತೆ ತನ್ನ ದೇಹದಲ್ಲಿ ಪ್ರವಹಿಸುತ್ತಿದ್ದ ತನ್ನದೇ ರಕ್ತದ ರಭಸ ಅರಿವಿಗೆ ಬರುತ್ತಿತ್ತು. ರಸ್ತೆಯ ಆ ತುದಿಯಲ್ಲಿ ಐದಾರು ಜನರ ಗುಂಪು ಕಾಣಿಸಿದಾಗ ಅವರ ಕಡೆ ಬಾಣದಂತೆ ನುಗ್ಗಿದ. ಅವರು 'ಹರಹರ ಮಹಾದೇವ್' ಎಂದು ಕೂಗಿದರು, ಇವನು ತಮ್ಮ ಹಿಂದೂ ಸೋದರನಿರಬೇಕು ಅಂದುಕೊಂಡು. ಪ್ರತಿಯಾಗಿ ಇವನು ತನ್ನ ಕೊಡಲಿಯನ್ನು ಸಿಕ್ಕಿದಂತೆ ಬೀಸುತ್ತ 'ಮಾದರ್ ಚೋದ್' ಎಂದರಚುತ್ತ ಅವರ ಕಡೆ ಧಾವಿಸಿದ.

ಆ ಪೈಕಿ ಮೂವರು, ಕೆಲವೇ ಕ್ಷಣಗಳಲ್ಲಿ ರಕ್ತ ಬಳಿದ ಹೆಣಗಳ ಗುಡ್ಡೆಯಾಗಿ ಬಿದ್ದರು; ಉಳಿದವರು ದಿಕ್ಕಾಪಾಲಾಗಿ ಓಡಿಹೋಗಿದ್ದರು. ಆದರೆ ಕಾಸಿಂ ಎಚ್ಚರವಿಲ್ಲದವನಂತೆ ಕೊಡಲಿ ಬೀಸುತ್ತಲೇ ಇದ್ದ-ತಾನೇ ಕುಸಿದು ಹೆಣವೊಂದರ ಮೇಲೆ ಉರುಳುವವರೆಗೆ. ಆಗಲೂ ತಾನಾಗಿಯೇ ಕೆಳಕ್ಕೆ ಬಿದ್ದಿದ್ದೋ, ಅಥವಾ ಯಾರಾದರೂ ತನ್ನನ್ನು ಸೋಲಿಸಿ ಉರುಳಿಸಿದರೋ ಸ್ಪಷ್ಟವಾಗಿರಲಿಲ್ಲ. ಬಿದ್ದಲ್ಲೇ ಒರಗಿ ಹಲ್ಲೆಯನ್ನು ನಿರೀಕ್ಷಿಸುತ್ತ ಕಾದ. ಆದರೆ ಏನೂ ಆಗಲಿಲ್ಲ. ಕೆಲವು ನಿಮಿಷಗಳ ನಂತರ ನಿಧಾನಕ್ಕೆ ಕಣ್ಣು ತೆರೆದ. ಇಡೀ ರಸ್ತೆಯಲ್ಲಿ ಯಾರೂ ಇರಲಿಲ್ಲ. ಆ ಮೂರು ಹೆಣಗಳು, ಆ ದೇಹಗಳ ನಡುವೆಯೇ ತಾನು.

ತನ್ನನ್ನು ಕೊಂದಿಲ್ಲವಲ್ಲ ಎಂದು ಅವನಿಗೆ ನಿರಾಸೆಯೇ ಆದಂತಾಯಿತು. ಮತ್ತೆ ಶರಿಫಾನ್‌ಳ ಬೆತ್ತಲೆ ಮೈನೆನಪಾಯಿತು-ಕಾದ ಸೀಸದಂತೆ ತನ್ನ ಕಣ್ಣುಗಳನ್ನು ಸುಡುವ ಆ ನೋಟ. ಸ್ವಲ್ಪೇ ಹೊತ್ತಿನಲ್ಲೇ ಅವನು ಮತ್ತೆ ತನ್ನ ಕೊಡಲಿ ಎತ್ತಿಕೊಂಡು ಅವಾಚ್ಯ ಬೈಗುಳಗಳನ್ನು ಕಾರುತ್ತ ಓಡತೊಡಗಿದ್ದ.

ನಗರ ನಿರ್ಜನವಾಗಿತ್ತು. ಸುಮ್ಮನೆ ಯಾವುದೋ ಒಂದು ಚಿಕ್ಕ ಓಣಿ ಹೊಕ್ಕ. ಆದರೆ ಅದು ಮುಸ್ಲಿಮರ ಪ್ರದೇಶವೆಂದು ಅರಿವಾದ ಕೂಡಲೇ ಅಲ್ಲಿಂದ ಹೊರಬಿದ್ದ. ಇದುವರೆಗೆ ತನ್ನ ಶತ್ರುಗಳ ಅಮ್ಮ ಅಕ್ಕ ತಂಗಿಯರ ಕಡೆ ಬೈಗುಳ ಎರಚುತ್ತಿದ್ದವನು ಈಗ ಅವರ ಹೆಣ್ಣು ಮಕ್ಕಳನ್ನು ಗುರಿ ಮಾಡಿಕೊಂಡ.

ಮತ್ತೆ ಸಣ್ಣ ಮನೆಯೊಂದರ ಮುಂದೆ ಬಂದು ನಿಂತ.

ಮನೆಯ ಮರದ ಬಾಗಿಲ ಮೇಲೆ ಹಿಂದಿಯಲ್ಲೇನೋ ಬರೆದಿತ್ತು. ಕಾಸಿಂ ಅದರ ಮೇಲೆ

ಕೊಡಲಿ ಬೀಸಿ ಬೀಸಿ ಕೆಲ ನಿಮಿಷಗಳಲ್ಲೇ ನುಚ್ಚುನೂರು ಮಾಡಿದ. 'ಹೊರಗೆ ಬನ್ರೋ, ಸೂಳೇಮಕ್ಕಳಾ, ಬನ್ರೋ...' ಎಂದು ಕಿರುಚುತ್ತ ಒಳನುಗ್ಗಿದ.

ಒಳಗಿನದೊಂದು ಬಾಗಿಲು ಕಿರ್ರನೆ ಸದ್ದು ಮಾಡಿ ತೆರೆದುಕೊಂಡು ಚಿಕ್ಕ ಹುಡುಗಿಯೊಬ್ಬಳು ಕಂಡಳು. ಕೇಳಿದ-ನೀನು ಯಾರು? ನಾಲಿಗೆಯಿಂದ ತನ್ನ ಒಳತುಟಿಗಳನ್ನು ಸವರಿಕೊಳ್ಳುತ್ತ 'ಹಿಂದೂ' ಅಂದಿತು ಆ ಹುಡುಗಿ. ಹೆಚ್ಚೆಂದರೆ ಹದಿನಾಲ್ಕು ಹದಿನೈದು ವರ್ಷ ಮೀರದ ಪ್ರಾಯ.

ಕಾಸಿಂ ಕೂಡಲೇ ತನ್ನ ಕೊಡಲಿ ಬಿಸಾಕಿ ಅವಳನ್ನು ನೆಲಕ್ಕೊರಗಿಸಿ ಕಾಡುಮೃಗದಂತೆ ಮೇಲೆ ಬಿದ್ದ. ಅವಳ ಬಟ್ಟೆ ಹರಿದೆಸೆದ. ಅರ್ಧ ಗಂಟೆ ಉನ್ಮತ್ತ ಪಶುವಿನಂತೆ ಅವಳನ್ನು ಧ್ವಂಸ ಮಾಡಿದ. ಆದರೆ ಅವಳಿಂದ ಚೂರೂ ಪ್ರತಿರೋಧ ಬರಲಿಲ್ಲ. ಯಾಕೆಂದರೆ ಅವಳಾಗಲೇ ಮೂರ್ಛೆ ಹೋಗಿದ್ದಳು.

ಎಲ್ಲ ಮುಗಿಸಿದ ಮೇಲೆ ತನ್ನ ಎರಡೂ ಕೈಗಳಿಂದ ತಾನು ಅವಳ ಕತ್ತು ಹಿಸುಕಿ ಹಿಡಿದಿದ್ದು, ಮತ್ತು ತನ್ನ ಉಗುರುಗಳು ಅವಳ ಮೆದು ಚರ್ಮವನ್ನು ಭೇದಿಸಿ ಹುದುಗಿದ್ದು ಅವನ ಅರಿವಿಗೆ ಬಂತು. ಬಿಟ್ಟ ಕಣ್ಣು ಮುಚ್ಚಿದ. ನೆಲದ ಮೇಲೆ ಸತ್ತು ಬಿದ್ದಿದ್ದ ಮಗಳ ಚಿತ್ರ ಮೂಡಿಬಂತು. ಭಾವಣೆ ನಿಟ್ಟಿಸುತ್ತಿದ್ದ ಮಗಳ ಸಣ್ಣ ಮೊಲೆಗಳು. ಶೀತಲ ಜೀವರೊಡೆಯಿತು.

ಆಗ, ಕೈಯಲ್ಲಿ ಕತ್ತಿ ಹಿಡಿದವನೊಬ್ಬ ಒಡೆದ ಹೊರಬಾಗಿಲಿನಿಂದ ಒಳನುಗ್ಗಿಬಂದ. ಬಂದವನ ಕಣ್ಣಿಗೆ ಕಾಸಿಂ ಕೆಳಗೆ ಕೂತು, ನೆಲದ ಮೇಲೆ ಬಿದ್ದಿದ್ದ ದೇಹದ ಮೇಲೆ ಚಾದರ ಹೊದಿಸುತ್ತಿದ್ದುದು ಕಾಣಿಸಿತು.

ಗರ್ಜಿಸಿದ-'ಯಾರು ನೀನು?'

ಕಾಸಿಂ ಅವನ ಕಡೆ ಮುಖ ತಿರುಗಿಸಿದ.

'ಕಾಸಿಂ!'-ಆ ಮನುಷ್ಯ ನಂಬಲಾಗದೆ ಕೂಗಿಕೊಂಡ.

ಕಾಸಿಂ ಸುಮ್ಮನೆ ರೆಪ್ಪೆ ಮಿಟುಕಿಸಿದ. ಬರಿದಾದ ಮುಖಭಾವ. ಅವನಿಗೆ ಸರಿಯಾಗಿ ಏನೂ ಕಾಣುತ್ತಲೂ ಇರಲಿಲ್ಲ.

'ನನ್ನ ಮನೆಯಲ್ಲಿ ನೀನೇನು ಮಾಡುತ್ತಿದ್ದೀಯಾ?' ಆ ಮನುಷ್ಯ ಮತ್ತೆ ಅರಚಿದ.

ಕಾಸಿಂ ತನ್ನ ಕಂಪಿಸುವ ಬೆರಳನ್ನು ನೆಲದ ಮೇಲೆ ಚಾದರ ಹೊದ್ದು ಬಿದ್ದಿದ್ದ ಗುಪ್ಪೆಯತ್ತ ತೋರಿ ಪೊಳ್ಳು ದನಿಯಲ್ಲಿ ಉಸುರಿದ-ಶರೀಫಾನ್....

ಬಂದವನು ಚಾದರವನ್ನು ಕಿತ್ತೆಸೆದ. ಒಡನೆಯೇ ಅವನ ಕೈಯಿನ ಕತ್ತಿ ಜಾರಿಬಿತ್ತು. ಮತ್ತೆ ತತ್ತರಿಸಿ ಊಳಿಡುತ್ತ ಮನೆಯಿಂದ ಹೊರಗೋಡಿದ-'ಬಿಮಲಾ, ನನ್ನ ಮಗಳು ಬಿಮಲಾ...'

□

---

ಎನ್.ಎಸ್. ಶಂಕರ್
೨೭, ಮೊದಲ ಮಹಡಿ, ಪಾಪಯ್ಯ ಗಾರ್ಡನ್, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯
ದೂರವಾಣಿ : ೦೮೦ - ೨೩೪೦ ೩೭೯೧

# ಫ್ರಾನ್ಸಿಸ್ ಎಲೆನ್ ಹಾರ್ಪರ್‌ಳ : ಕವಿತೆಗಳು

ಮೂಲ : ನೀಗ್ರೊ
ಅನುವಾದ : ಎಂ.ಆರ್. ಕಮಲ

## ಹೂಳಿ ಬಿಡಿರಿ ನನ್ನ ಸ್ವತಂತ್ರ ನೆಲದಲ್ಲಿ

ನಿಮಗಿಷ್ಟ ಬಂದ ಕಡೆ ನನ್ನ ಗೋರಿಯ ತೋಡಿ
ಎತ್ತರದ ಪರ್ವತವೋ, ತಗ್ಗು ನೆಲವೋ
ಘೋರ ದಾಸ್ಯದ ನಾಡನೊಂದುಳಿದು
ಯಾವ ಮೂಲೆಯಾದರೂ ಸರಿ ಹೂಳಿ ಬಿಡಿ

ಗುಲಾಮನ ಹೆಜ್ಜೆ ದನಿ ಕೇಳಿಯೂ ಕೇಳದಂತೆ
ಮಲಗಬಲ್ಲೆನೆ ನಾನು ಗೋರಿಯಲಿ ತಣ್ಣಗೆ
ನನ್ನ ಗೋರಿಗವನ ನೆರಳು ಸೋಕಿದರೂ ಸಾಕು
ಮಂಕು ಕವಿದು ನಡುಕ ಮೂಡುವುದು ನನಗೆ

ಸರಪಳಿಯ ಕಟ್ಟಿ ಎಳೆದೊಯ್ಯುವುದನು
ಕಂಡರಿನ್ನೆಷ್ಟು ಜೀವ ಕಳವಳಿಸಬಹುದು
ನಡನಡುಗು ಗಾಳಿಯಲಿ ಶಾಪದಂತೆ
ಎದೆ ಬಿರಿವ ತಾಯ ದನಿ ಕೇಳಬಹುದು

ಚಾಬುಕದ ಪ್ರತೀ ಏಟು ರಕ್ತ ಹೀರುವುದನು
ಮುಷ್ಟಿ ಪಾಲಿವಾಳ ಗೂಟದಿಂದ ಜಾರುವುದನು
ಅಪ್ಪನೆದೆಯಿಂದ ಕಂದಮ್ಮಗಳ ಕಿತ್ತೊಯ್ಯುವುದನು
ಅಯ್ಯೋ, ನೋಡಿದರೂ ನೋಡದೆ ಇರಲಾರೆನು

ಬೇಟೆ ನಾಯಿಗಳು ಕಿತ್ತು ತಿನ್ನುವುದನು
ನೋಡಿದರ ಎನ್ನೆದೆಯು ನಡುಗದೇನು
ಹಿಡಿದು ತಂದವರ ಅಳಲ ಕೇಳಬಲ್ಲೆನೆ ನಾನು
ಬಿದ್ದು ಬೇಡಿಕೊಳ್ಳುವುದ ನೋಡಲಾರೆನು

ತಾಯಿ ರಕ್ಷಿಸಲಾರದ ಹೆಣ್ಣು ಮಕ್ಕಳ ಯೌವನದ
ಹರಾಜಿಗಿಡುವುದನು ನೋಡಿದರೆ ಸಾಕು
ನನ್ನೆದೆಯು ಹಾರುವುದು, ಕಣ್ಣು ಕಾಂತಿಗೆಡುವುದು
ಸತ್ತಿರುವ ಕೆನ್ನೆಯು ಕೆಂಪೇರುವುದು ಅವಮಾನದಿಂದ

ಎಲ್ಲಿ ಮನುಜರ ಹಕ್ಕು ಘಾತಿಗೊಳಗಾಗದೋ
ಅಲ್ಲಿ ನಿದ್ರಿಸುವೆ ಗೆಳೆಯರೆ ನಿಶ್ಚಿಂತೆಯಿಂದ
ಎಲ್ಲಿ ಸೋದರನು ಸೋದರನೆ ಆಗುವನೋ
ಅಲ್ಲಿ ನಿದ್ರಿಸುವೆ ಗೆಳೆಯರೆ ನೆಮ್ಮದಿಯಿಂದ

ದಾರಿಹೋಕರ ಎದೆಯ ಸೂರೆಗೊಳುವೊಂದು
ಎತ್ತರೆತ್ತರದ ಸ್ಮಾರಕವು ನನಗೆ ಬೇಡಿ
ನನ್ನ ಚೈತನ್ಯ ಇತಿಯಾಗಿ ಸಾಯಲಿಸುವುದೊಂದು
ದಾಸ್ಯವಿರುವ ನಾಡಿನಲಿ ಹೂಳಬೇಡಿ

## ಹಾಡು ಕಟ್ಟುವೆ ನಾನು ಜನರಿಗಾಗಿ

ಹಾಡು ಕಟ್ಟುವೆ ನಾನು ಜನರಿಗಾಗಿ
ಹಿರಿಯರೇ ಇರಲಿ, ಕಿರಿಯರಿರಲಿ.
ಎಲ್ಲೇ ಹಾಡಿದರೂ ಹೇಗೆ ಹಾಡಿದರೂ
ಮನವ ಕಲಕಲಿ ಅದು ಕದನವಂತೆ

ಕತ್ತಿ ಕುಡುಗೋಲುಗಳ ಕಾಳಗಕ್ಕಲ್ಲ
ಕಚ್ಚಾಟ, ಕೊಲೆಗಾಗಿ ಮೊದಲೇ ಅಲ್ಲ
ಜನರ ಎದೆಯೊಳಗೆ ಪುಳಕ ಹರಿಯುವಂತೆ
ಜೀವ ಸಮೃದ್ಧ ಭಾವ ಮೂಡುವಂತೆ

ಹಾಡು ಕಟ್ಟುವೆ ನಾನು ಜನರಿಗಾಗಿ
ನೋವಲ್ಲಿ ನೊಂದು ಬೆಂದವರಿಗೆಲ್ಲ
ಅರೆಗಳಿಗೆಯಾದರೂ ಇರದಂತೆ ಚಿಂತೆ
ಹಳೆಯದೆಲ್ಲವ ಮರೆತು ಹೋಗುವಂತೆ

ಹಾಡು ಕಟ್ಟುವೆ ನಾನು ಜನರಿಗಾಗಿ
ಬಡವರಿಗೆ, ಕಣ್ಣು ಮಸುಕಾದವರಿಗೆಲ್ಲ
ಮತ್ತೆಂದೂ ಸುತ್ತ ಕತ್ತಲಿರದಂತೆ
ವಿಶ್ರಾಂತ ಮಂದಿರದ ಕಾಂತಿಯಂತೆ

ಸೋತು ಸೊರಗಿದೆ ಇಂದು ಧರೆಯು
ಬೇಕು ಇಲ್ಲೀಗ ಶುದ್ಧ ಶಕ್ತಿ ಗೀತೆ
ಆದ ಗಾಯಗಳು ಮಾಯುವಂತೆ
ವೇದನೆಯ ಅಪಸ್ವರವು ಮೂಡದಂತೆ

ಯುದ್ಧ, ಕೊಲೆಗಳು ನಿಲ್ಲುವಂತೆ
ನೊಂದ ನೋವನು ಶಮನಗೊಳಿಸುವಂತೆ
ಎಲ್ಲ ಮನುಜರ ಹೃದಯ ಮೆದುವಾಗಿ
ಶಾಂತಿ ಮಂತ್ರದ ವಿಶ್ವ ಪಠಿಸುವಂತೆ

□

ಎಂ.ಆರ್. ಕಮಲ
ನಂ. ೪೦೫, ಉಮಾಶಂಕರ, ಮೊದಲ ಎಸ್. ಬ್ಲಾಕ್, ೧೯ನೇ ಜಿ. ಮುಖ್ಯರಸ್ತೆ, ರಾಜಾಜಿನಗರ
ಬೆಂಗಳೂರು - ೫೬೦ ೦೧೦

# ನಾನು ಕಿಟಕಿ ಹತ್ತಿರ ಕುಳಿತಿದ್ದೇನೆ

ತಮಿಳು ಮೂಲ : ಜಯಕಾಂತನ್
ಕನ್ನಡಕ್ಕೆ : ಪ್ರೊ. ಟಿ. ರಾಮಸ್ವಾಮಿ ಆದಿವಾಲ

[ಜಯಕಾಂತನ್ ೧೯೫೭ ರಿಂದ ತಮಿಳಿನಲ್ಲಿ ಬರೆಯುತ್ತಿದ್ದಾರೆ. ಮುದ್ರಣಾಲಯದಲ್ಲಿ ಜವಾ ಹುಡುಗನಾಗಿ, ಪೇಪರ್ ಮಾರುವ ಹುಡಗ ಕಂಪೋಸರ್ ಹೀಗೆ ಹಲವು ಅವತಾರಗಳ ದಾಟಿ ಕತೆ ಬರೆಯಲಿಕ್ಕೆ ತೊಡಗಿದ ಇವರು ಶಾಲೆಯನ್ನೂ ಪೂರ್ಣ ಮುಗಿಸಲಿಲ್ಲ. ಹದಿನೇಳು ಸಣ್ಣ ಕಥಾ ಸಂಕಲನ, ೨೬ ಕಿರು ಕಾದಂಬರಿಗಳು, ೧೭ ಕಾದಂಬರಿಗಳು, ೨೩ ಪ್ರಬಂಧ ಸಂಕಲನಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೆಲವು ಅನುವಾದ ಕೃತಿಗಳೂ ಉಂಟು. ಇವರ ಮೂರು ಕಾಂದಬರಿಗಳು ಚಲನಚಿತ್ರವಾಗಿವೆ. "ಚಿಲ ನೇರಂಗಳಿಲ್ ಚಿಲ ಮನಿದರ್‌ಗಳ್' ಚಿತ್ರಕ್ಕೆ ಸ್ವರ್ಣ ಕಮಲ ಪ್ರಶಸ್ತಿ ದೊರೆತಿದೆ. ಕೆಲವು ಕಾದಂಬರಿಗಳು ದೂರದರ್ಶನದ ಧಾರಾವಾಹಿಯಾಗಿ ಬಂದಿದೆ. ಪ್ರಸ್ತುತ ಕತೆ ಅವರು ೧೯೬೮ರಲ್ಲಿ ಬರೆದದ್ದು]

ಹೌದು; ನಾನು ಕಿಟಕಿ ಹತ್ರಾನೇ ಕೂತುಕೊಂಡಿದೇನೆ....ಅದಕ್ಕೇನಂತೆ? ಕೂತ್ಕೋಬಾರದಾ?.... ನಾನ್ಯಾಗೇನೇ ಕೂತ್ಕೋತೀನಿ. ನೆನ್ನೆ ಮೊನ್ನೆಯಿಂದ್ಲಾ ನಾನಿಂಗೆ ಕೂತ್ಕೊಂಡಿರೋದು...ಅಲ್ವೆ ತಾಯೀ! ಎಷ್ಟೋ ಕಾಲದಿಂದ ಕೂತ್ಕೊಂಡಿದೇನೆ. ಇನ್ಮೇಲೂ ಕೂತ್ಕೊಂಡಿರ್ತೀನಿ. ಏನು ತಪ್ಪು? ಅಲ್ಲ ಯಾರಿಗೇನು ನಷ್ಟ? ಯಾವಾಗ ನೋಡಿದ್ರೂ ಇದ್ನೇ ಒಂದು ಮಾತಾಗಿ ಆಡ್ತಿರ್ತೀರಲ್ಲ....ದೊಡ್ಡದಾಗಿ.... ಕಿಟಕಿ ಹತ್ರ ಕೂತ್ಕೊಂಡಿದಾಳೇ...ಕೂತ್ಕೊಂಡಿದಾಳೆ ಅಂತ. ಕಿಟಕಿ ಹತ್ರ ಕೂತ್ಕೋಬಾರ್ದಾ? ಕಿಟಕಿ ಹತ್ರ ಹೋಗ್ಬಾರ್ದಾ? ಹಂಗಾದ್ರೆ ಮನೆಗ ಕಿಟಕಿ ಅಂತ ಒಂದನ್ನು ಯಾಕಿಡ್ಬೇಕು ಅಂತೀನಿ! ಒಂದೇ? ಈ ಮನೆಗೆ ಎರಡು ಕಿಟಕಿ ಅಯ್ತು; ನೋಡಿ. ಬೀದೀಲಿ ನಿಂತು ನೋಡಿದ್ರೆ ಈ ಮನೆ ಲಕ್ಷಣವಾಗಿ ಕಾಣುತ್ತೋ ಇಲ್ವೋ? ಆ ಲಕ್ಷಣಾನೇ ಈ ಎರಡು ಕಿಟಕಿಯಿಂದ್ಲೇನೇ. ಕಿಟಕಿ ಇಲ್ಲಾಂದ್ರೆ ನೋಡೋಕೆ

ಚೆನ್ನಾಗಿರುತ್ತಾ? ಈ ಮನೆ ತುಂಬಾ ಹಳತೇನೇ. ಹಳತೂಂದ್ರೆ ಹಳತು...ಅಷ್ಟೊಂದು ಹಳತು... ಹಳತಾದ್ರೆ ಏನಂತೆ? ಅಂದವಾಗೇನೇ ಅಯ್ತಲ್ಲ! ತಾತನ ತಾತಂದಿರೆಲ್ಲ ಇಲ್ಲೇನೇ ಹುಟ್ಟಿದರಂತೆ. ಈಗ ಮನೆಯ ಎರಡೂ ಕಡೇನೂ ದೊಡ್ಡ ದೊಡ್ಡದಾಗಿ ಮಾಡಿ ಮನೆಗಳು ಬಂದವೆ. ಇಬ್ರು ದೊಡ್ಡೋರ ಕೈ ಹಿಡಿದುಕೊಂಡು ಒಂದು ಎಳೆ ಮಗು ನಿಂತಿರೋ ತರ ಈ ಮನೆ ಕುಳ್ಳಕೆ ನಡುವೆ ನಿಂತ್ಕೊಂಡಯ್ತೆ...ಸಣ್ಮನೆ, ಹೆಂಚಿನ್ಮನೆ; ಮನೆ ಮುಂದೆ ಎರಡೂ ಕಡೆ ಜಗಲಿ. ನಡುವೆ ಹೊಸ್ಲು; ಎರಡು ಜಗ್ಲೀಗೂನೇರ ಎದುರು ಎರಡು ಕಿಟಕಿ; ಈ ಮನೆ ಎರಡೂ ಕಣ್ಣು ತೆರ್ಕೊಂಡು ಬೀದೀನ ನೋಡೋ ಹಾಗಿರುತ್ತೆ. ಈ ಎರಡು ಕಿಟಕಿನೂ ಈ ಮನೆಗೆ ಎರಡು ಕಣ್ಣಿದ್ದಂಗೆ. ಕಿಟಕಿ ಮನೆಯ ಕಣ್ಣು ತಾನೇ? ಯಾರ್ಹೇಳಿದರು ಹಾಗಂತ? ಯಾರೂ ಹೇಳ್ಳಿಲ್ಲ. ನನಗೆ ಹಾಗೆ ತೋಚ್ತು...ನಾನೇ ಹೇಳ್ದೆ.

ಮನೆಗೆ ಕಿಟಕಿ ಏಕೆ ಇಟ್ರಂತೆ? ಗಾಳಿ ಬರೋದಿಕ್ಕೆ; ಬೀದೀನ ನೋಡೋದಿಕ್ಕೆ; ಮನೇಲಿರೋರು ಉಸಿರಾಡೋದಿಕ್ಕೆ. ಮನೇಲಿರೋರು ಬೀದೀಲಿ ನಡೆಯೋದ್ನೆಲ್ಲ ನೋಡೋದಿಕ್ಕೆ...

ಯಾಕ್ನೋಡ್‌ಬೇಕೂಂತ ಕೇಳ್ತೀರಾ? ಚೆನ್ನಾಗಾಯ್ತು! ಯಾಕ್ನೋಡ್ಬಾರ್ದೂಂತ ನಾನ್ ಕೇಳ್ತೀನಿ. ಅದಕ್ಕೆ ಉತ್ರ ಹೇಳಿ. ಯಾಕೆ ಉಸಿರಾಡ್ಬೇಕು? ಯಾಕೆ ಗಾಳಿ ಬರ್ಬೇಕು ಅಂತ ಸಹ ಕೇಳ್ತೀರಾ? ಇದೆಲ್ಲ ಏನು ಪ್ರಶ್ನೆ ಅಂತ ಕೇಳ್ತೀರಿ? ಕಿಟಕೀನೇ ಇಲ್ದೆ ಕಟ್ಟಿದ್ರೆ ಅದ್ಕೆ ಮನೇ ಅಂತ್ಲಾ ಹೆಸ್ರು? ಅದು ಸಮಾಧಿ ಕಣೆ ತಾಯಿ, ಸಮಾಧಿ!

ಉದ್ದಕ್ಕೂ ಇದೇನು ಮಾತೂಂತ? 'ಕಿಟಕಿ ಹತ್ರ ಕೂತ್ಕೊಂಡಿದಾಳೆ...ಕಿಟಕಿ ಹತ್ರ ಕೂತ್ಕೊಂಡಿದಾಳೆ' ಅಂತ ಕರುಬ್ತೀರಿ...

ನನಗೆ ಕಿಟಕಿ ಹತ್ರ ಮಾತ್ರ ಸ್ವಲ್ಪ ಉಸಿರಾಡೋಕ್ಕಾಗತ್ತೆ. ಈ ಮನೇಲಿ ಬೇರೆಲ್ಲಿ ಹೋದ್ರೂ ಉಸಿರು ಕಟ್ಟುತ್ತೆ. ಉಬ್ಬಸ; ಮೈ ಉರಿಯುತ್ತೆ. ಈ ಮನೆಯಲ್ಲೇ....ಅಷ್ಟೇಕೆ ಈ ಲೋಕ್ದಲ್ಲೇ ಇದಕ್ಕಿಂತ ಸುಖವಾದ ಜಾಗ ಇನ್ನೊಂದಿಲ್ಲ. ಆಹಾ! ಇಲ್ತಾನೇ ಎಷ್ಟೊಂದು ಗಾಳಿ ತಣ್‌ಣ್‌ಣ್‌ಗೆ ಬೀಸುತ್ತೆ. ನಾನು ಕೂತ್ಕೊಂಡಿದೀನಲ್ಲ ಈ ಕಿಟಕಿ ಕಟ್ಟೆ ಹೇಗೆ ಫಳಾ ಫಳಾಂತ ನುಣ್ಣಗಿದೆ! ಕೆಂಪ್ ಬಣ್ಣದ ಸಿಮೆಂಟ್ ಬಳಿದಿದಾರೆ...ಎಷ್ಟು ಬಿಸ್ಲು ಕಾದ್ರೂ ಇದು ಮಾತ್ರ ಮುಟ್ಟಿದ್ರೆ ತಣ್ಣಗಿರುತ್ತೆ. ಕಿಟಕಿ ಎದುರೇ ಕಾಣತ್ತಲ್ಲ ಒಂದು ಅರ್‌ಳೀಮರ... ಯಾವಾಗ್ನೋಡಿದ್ರೂ ಅದು ಸರ ಸರಾಂತ ಏನೋ ಮಾತಾಡುತ್ಲೇ ಇರುತ್ತೆ. ಈ ಕಿಟಕಿ ಕಟ್ಟೆ ಮೇಲೆ ಹತ್ಕೊಂಡು ಸೊಗಸಾಗಿ ಕೂತ್ಕೊಂಡು ಈ ಅರ್ಳೀಮರಾನ ನೋಡ್ತಾನೇ ಇದ್ರೆ, ಹೊತ್ತು ಹೋಗೋದೇ-ಕಾಲ ಜಾರೋದೇ ಗೊತ್ತಾಗೋಲ್ಲ.-ಹಾಗೇನೆ ನಾನು ಕೂತ್ಕೊಂಡಿದ್ದೇನೆ! ಇವತ್ತು ನೆನ್ನೆಯಿಂದ್ಲೂ ಕೂತಿದ್ದೇನೆ? ಇದ್ರಲ್ಲಿ ಕೂತ್ಕೊಂಡ್ಬಿಟ್ರೆ ನನಗೆ ಬಲು ಚಂದ ಅನ್ಸುತ್ತೆ. ಕಿಟಕಿಯ ಎರಡೂ ಕಡಗಿರೋ ಗೋಡೆಗೆ ಒಂದು ಕಡೆಗೆ ಬೆನ್ನು ಒರಗ್ಕೊಂಡು ಇನ್ನೊಂದು ಕಡೆ ಎರಡೂ ಪಾದಗಳ್ನ ಹಚ್ಕೊಂಡು ಒತ್ಕೊಂಡು ಇದ್ರೆ ಗಟ್ಟಿಯಾಗಿ ನನಗೆ ಅಚ್ಚುಕಟ್ಟಾಗಿ ಹೊಂದ್ಕೊಂಡಿರುತ್ತೆ. ಇದ್ನ ನನಗೋಷ್ಕರಾನೇ ಕಟ್ಟಿದ್ದಾರೆ. ಇದು ನನ್ನ ಕಿಟಕಿ. ನಾನು ಈ ಕಿಟಕಿಯ ನಾನು! ನನಗಾಗಿ ಇದ್ನ ಕಟ್ಸಿ, ಇದ್ಕಾಗಿ ನನ್ನ ಕಟ್ಟಿಸಿಟ್ಟು ಬಿಟ್ಟಿದ್ದಾರೆ! ಯಾರೂ ಕಟ್ಸಿಡ್ಲಿಲ್ಲ; ನಾನೇ ಕಟ್ಕೊಂಡೆ! ಹೇಗೆ ಹೇಳಿದ್ರೆ ತಾನೆ ಏನಂತೆ ಈಗ?

ಈ ತರ ಒಂದು ಕಡೆ ಒರಗ್ಕೊಂಡು ಇನ್ನೊಂದು ಕಡೆ ಕಾಲನ್ನು ಒದ್ಕೊಂಡು ಕೂತ್ಕೋ ಬೇಕಂತ ಎಷ್ಟು ಒದ್ದಾಡಿದೀನಿ ಗೊತ್ತಾ? ಆಗೆಲ್ಲ ನನಗೆ ಕಾಲೇ ಎಟುಕ್ತಿರಲಿಲ್ಲ. ಕಾಲು ಎಟುಕಿದ್ರೆ ಬೆನ್ನು ಒರಗೋಕ್ಕೆ ಬರುತ್ತಿರಲಿಲ್ಲ! ಆಗೆಲ್ಲ ಕಿಟಕಿ ಕಟ್ಟೆ ಮೇಲೆ ಹತ್ತಿ ನಿಂತ್ಕೊಂಡ್ರೆ ನನಗೆ ಎತ್ರ ಸರೀಗಿರ್ತಿತ್ತು!

ಹೇಗೆ ನಿಂತ್ಕೋಬೇಕು ಗೊತ್ತಾ? ಎರಡು ಕಂಬಿ ನಡ್ವೆ ಒಂದು ಕಾಲ ಇಟ್ಕೋಬೇಕು. ಬಲಗಾಲ ಇಟ್ಕೊಂಡ್ರೆ ಬಲಗೈಲಿ ಕಂಬೀನ ಎಳೆದು ಹಿಡ್ಕೋಬೇಕು...ಆಮೇಲೆ ಈ ಕಡೆಗೆ ಎಡಗೈನೂ ಎಡಗಾಲ್ನೂ ಉದ್ದಕ್ಕೆ ಬೀಸಿ ಬೀಸಿ ಅರ್ಧ ಚಕ್ರವಾಗಿ ಸುತ್ತಿ ಸುತ್ತಿ ಆಡ್ಬೇಕು...

ರೈಲು ಹೋಗ್ತೈತಂತೆ!...ವೇ...ಗವಾಗಿ ಹೋಗ್ತೈತಂತೆ; ತಂತಿ ಕಂಬಿಗಳೆಲ್ಲ ಓಡ್ತಾವಂತೆ. ಆಮೇಲೆ ಕುಂಬಕೋಣಂ ಬರುತ್ತಂತೆ...ತಂಜಾವೂರ್‍ನಲ್ಲಿ ನಿಲ್ತದಂತೆ; ಮತ್ತೆ ಹೋಗುತ್ತಂತೆ; ತಿರುಗಿ ಇಲ್ಲಿಗೇನೆ ಬಂದ್ಬಿಡುತ್ತಂತೆ.

ನೋಡೆ ತಾಯಿ! ಈ ಕಿಟಕಿ ಕಟ್ಟೆ ಮೇಲೆ ಕೂತ್ಕೊಂಡೇ ನಾನೆಷ್ಟು ಪ್ರವಾಸ ಮಾಡೀದೇನೆ....!

ಕೈಯನ್ನೂ, ಕಾಲನ್ನೂ ಬೀಸಿ ಬೀಸಿ ಮಾಡಿದ ಪ್ರವಾಸ; ಕಣ್ಣನ್ನೂ ಮನಸ್ಸನ್ನೂ ಬೆನ್ನಟ್ಟಿ ಅಟ್ಟಿ ಮಾಡಿದ ಪ್ರವಾಸ; ಅಲುಗದೆ ಕುಲುಕದೆ ಮಾಡಿದ ಪ್ರವಾಸ; ಅತ್ಕೊಂಡು ಮಾಡಿದ ಪ್ರವಾಸ, ನಕ್ಕೊಂಡು ಮಾಡಿದ ಪ್ರವಾಸ, ಆನಂದದ ಪ್ರವಾಸ, ಪ್ರಯಾಣದ ದಣಿವೇ ಇಲ್ಲದೆ ಮಾಡಿದ ಪ್ರವಾಸ....

ಕಿಟಕಿಗೆ ಸರಿಯಾಗಿ ಹೊಂದಿಕೊಂಡು ಕೂತು ನಾನೆಷ್ಟು ಪ್ರವಾಸ ಹೋಗಿದ್ದೇನೆ! ಪ್ರವಾಸ ಹೋದೋರ್‍ನೂ ನೋಡೀದ್ದೇನೆ. ಎಷ್ಟೋ ಜನ ಹೋಗ್ತಾರೆ...ಸುಮ್ನೆ ಹೋಗೋರು, ಹೊತ್ಕೊಂಡು ಹೋಗೋರು, ಒಂಟಿಯಾಗಿ ಹೋಗೋರು, ಗುಂಪಾಗಿ ಹೋಗೋರು, ಜೋಡಿಯಾಗಿ ಹೋಗೋರು....

ಈ ಕಿಟಕಿ ಮೂಲ್ಕ ಮೊದ್ಲು ಯಾರು ನೋಡಿರ್ಬೇಕು? ಮೊದ್ಲಿಗೆ ಏನನ್ನು ನೋಡಿರ್ಬೇಕು? ಯಾರೋ ನೋಡಿರ್ಬೇಕು...ಏನನ್ನೋ ನೋಡಿರ್ಬೇಕು...ನಾನು ಮೊದ್ಲು ಏನು ನೋಡ್ದೆ? ನನಗೆ ಜ್ಞಾಪಕ ಇರೋ ಮೊದ್ಲು ನೆನಪೇ ಈ ಕಿಟಕಿ ಮೂಲ್ಕ ನೋಡಿದ್ದೇ...ನನ್ನನ್ನು ಹೆತ್ತೋಳ ನಾನು ನೋಡಿದ ನೆನಪೇ ಇಲ್ಲ...ಜೀವದೊಂದಿಗೆ ನೋಡ್ದ ನೆನಪೇ ಇಲ್ಲ...ನನಗೆ ಜ್ಞಾಪಕ ಇರೋ ಮೊದ್ಲ ವಿಷ್ಯಾನೇ ಅದೇ.

ಅಮ್ಮನ್ನ ಹೊತ್ಕೊಂಡು ಹೋದ್ರಲ್ಲ ಅದೇ...ಯಾರು ಯಾರೋ ಅತ್ಕೊಂಡು ಅಂಗಳದ್ ತನಕ ಓಡಿ ಬಂದ್ರಲ್ಲ. ಅವ್ರೆಲ್ಲ ಅಳುತಿದ್ದಂಗೇ ಅವಸರ ಅವಸರವಾಗಿ ಅಮ್ಮನ್ನ ಹೊತ್ಕೊಂಡು ನಾಲ್ಕು ಜನ ಓಡಿದ್ರಲ್ಲ...ನಾನೀ ಕಿಟ್ಕಿ ಮೇಲೆ ನಿಂತ್ಕೊಂಡು, ಕಿಟ್ಕಿ ಮೂಲ್ಕ ನೋಡ್ತಿದ್ದೆನಲ್ಲ....!

ಅದಾದ ಮೇಲೆ ಆ ತರ ಎಷ್ಟೋ ನೋಡಿದ್ದೇನೆ. ಸದ್ದಿಲ್ಲದೆ ಎತ್ಕೊಂಡು ದಪದಪಾಂತ ಓಡ್ತಾರೆ...ಕೆಲವರು ಜಂಡೆ ತಮ್ಟೆ, ಶಂಖ ಎಲ್ಲ ಬಡಿದು ಬೀದೀನೇ ಅಲ್ಲೋಲ ಕಲ್ಲೋಲ ಮಾಡ್ಕೊಂಡು ಹೋಗ್ತಾರೆ. ಕೆಲವೊಂದು ಸಲ ಅವ್ರೆಲ್ಲ ಹೋದ್ ಮೇಲೂ ಸೈತ ಊದುಬತ್ತಿ ವಾಸ್ನೆ ಬರ್ತಿತ್ತು...

ಅದೇ ತರ, ಮದ್ವೆ ಮೆರವಣಿಗೆ ಸಹ ನೋಡಿದ್ದೇನೆ. ಅದು ತುಂಬಾ ಚೆನ್ನಾಗಿರುತ್ತೆ. ಅದೇನೋ ಯಾರಿಗೆ ಮದುವೆ ಆದ್ರೂನೂ ನಮಗೆ ಸಂತೋಷವಾಗುತ್ತೆ. ಮೆರವಣಿಗೆ ಕಿಟ್ಕಿ ಹತ್ರ ಬರೋದಿಕ್ಕೆ ಮುಂಚೇನೆ....ಬಾಳ ಹೊತ್ತು ಮುಂಚೇನೆ....ಢಂಢಂ ಅಂತ ಮೇಳದ ಸದ್ದು ದೂರದಿಂದ್ಲೇ ಕೇಳೋಕ್ಕೆ ಸುರುವಾಗುತ್ತೆ. ಅದರಲ್ಲೂ ಮದುವೆ ಮೇಳ ಅಂದರೆ ಅದು ಮಾತ್ರ ವಿಶೇಷವಾಗಿ ಇರುತ್ತೆ. ಅದು ಬಂದು ಹೋಗೋ ತನ್ಕ ನಾನು ಕಿಟ್ಕಿ ಬಿಟ್ಟು ಅಲುಗಾಡೋಲ್ಲ....

ಈ ಕಿಟ್ಕಿ ಮೂಲ್ಕ ಕಾಣ್ಸೋ ಬೀದಿ, ಅದೋ...ಆ ಅರ್ಳಿ ಮರದಡೀಲಿರೋ ಗಣಪ ಕಾಣ್ಸುತ್ತಲ್ಲ ಅಲ್ಲಿ ತೊಡಗಿ ಈ ಕಡೆ ಶಿವಾನಂದಂ ಮನೇತನ್ಕ ಮಾತ್ರಾನೇ ಕಾಣ್ಸೋದು. ಅದೂನೂ ಈ ಕೊನೆಯಿಂದ ಆ ಕೊನೆವರ್ಗೆ ತಲೇನ ಚೆನ್ನಾಗಿ ಬಗ್ಗಿಸಿ ಬಗ್ಗಿಸಿ ನೋಡಿದ್ರೇನೆ ಇಷ್ಟು ಕಾಣ್ಸೋದು. ಮದ್ವೆ ಮೆರವಣಿಗೆ ಬರೋವಾಗ, ಆ ಲೈಟು ಹೊತ್ಕೊಂಡು ಒಬ್ಬ ಮೊದ್ಲೇ ಅರ್ಳಿ ಮರದಡಿಗೆ ಬರ್ತಾನೆ. ಕೆಲವ್ರು ಅಲ್ಲೇ ಲೈಟನ್ನು ಇಳಿಸಿಟ್ಟುಬಿಡ್ತಾರೆ. ಎಷ್ಟೇ ಕರಂಟ್ ಲೈಟ್ ಬರಲಿ, ಮದ್ವೇ ಅಂದ್ರೆ ಈ ಲೈಟ್ ಬೇಕೇ ಬೇಕು. 'ಭೋ' ಅಂತ ಬಾಯ್ಲರ್ ಉರಿಯೋ ತರ....ನಾದಸ್ವರದ ಸದ್ದು ಪಕ್ಕದಲ್ಲೇ ಕೇಳ್ಸುತ್ತೆ. ಅದೇನೋ ಮದ್ವೆ ನಾದಸ್ವರಾನ್ನ ಕೇಳಿದ್ರೆ ಮಾತ್ರ ಹೊಟ್ಟೆ ಒಳ್ಗೆ ಒಂತರ ತರ್ಣ್‌ಣ್‌ಗೆ ಆಗುತ್ತೆ. ಆಮೇಲೆ ಬಾಳ ಪೆಟ್ರೋಮಾಕ್ಸ್ ಲೈಟ್...ಸಾಲಾಗಿ ಬರುತ್ವೆ...ಮೈಯೆಲ್ಲ ಬೆವರಿ ನೆಂದು ನೆಂದು ಆ ಮದ್ದಳದೋನೂ, ನಾದಸ್ವರದವ್ನೂ ಪೈಪೋಟಿಯಿಂದ ನುಡಿಸ್ತಾರೆ. ನನಗೆ ಒತ್ತು ಊದ್ತಾನಲ್ಲ ಅವನ್ನ ಕಂಡ್ರೇ ನಗು ಕಿತ್ಗೊಂಡು ಬರುತ್ತೆ. ಹಲ್ ನೋವಿನ ತರ ಅವನು ಬಾಯಲ್ಲಿ ಬಟ್ಟೆ ಇಟ್ಕೊಂಡು ನಿಂತಿರ್ತಾನೆ. ಅದಾದ ಮೇಲೆ ಮದ್ವೆ ಮೆರವಣಿಗೆಗೋಸ್ಕರಾನೇ ಮಾಡಿದ ತರ ಒಂದು ಕಾರು...ಆ ಕಾರಿಗೂ ಅವತ್ತು ಮದ್ವೆ. ಮಾಲೆಯೆಲ್ಲ ಹಾಕಿರ್ತಾರೆ. ಆ ಕಾರ್ನಲ್ಲಿ ಯಾರಿದ್ರೂ ಇಲ್ಲದಿದ್ರೂ ಚಿಲ್ಟಾ ಪಟಾಲಂ ಮಾತ್ರ ಇದ್ದೇ ಇರುತ್ತೆ. ಒಂದೊಂದ್ಸಲ ವರ ಮಾತ್ರ ಒಂಟಿಯಾಗಿ, ಮಕ್ಕಳ ಸೇನೆ ಇರುತ್ತೆ ಅಂದ್ರೆ ಮದುವಣಗಿತ್ತಿ ಇಲ್ಲೆ ಬರ್ತಾರೆ. ಒಂದೊಂದ್ಸಲ ಹೆಣ್ಣೂ ಗಂಡು ಜೋಡಿಯಾಗಿ ಬರ್ತಾರೆ. ಹೆಣ್ಣು ತಲೆಯನ್ನು ಬಗ್ಗಿಸಿಕೊಂಡು ಇರ್ತಾಳೆ. ಆದ್ರೆ ಮನಸ್ಸಿನಾಗೆ ಬಾಳ ಸಂತೋಷ ಅಂತ ಮುಖ ಹಾಗೆ ಕಾಣ್ಸುತ್ತೆ! ಎಲ್ಲಾ ಹೆಣ್ಣುಗಳೂ ತಲೇನ ತಗ್ಗಿಸಿಕೊಂಡೇ ಇರುತ್ವೆ. ಆದ್ರೆ ನನ್ಜೊತೆ ಓದಿದ್ಲಲ್ಲ ಸುಮತಿ ಅವಳಿಗೆ ಎಷ್ಟು ಧೈರ್ಯ, ಮೆರವಣಿಗೆ ಕಿಟ್ಕಿ ಹತ್ರ ಬಂದಾಗ ನೋಡಿ ನಕ್ಕೊಂಡೇ ಕೈ ಬೀಸಿದ್ಲಲ್ಲ! ನನಗೆ ಬಲು ನಾಚಿಗೆಯಾಗಿ ಬಿಡ್ತು...ಎಲ್ರೂ ತಿರುಗಿ ನನ್ನ ಬೇರೆ ನೋಡಿದ್ರು. ಆಗಷ್ಟೆ ನಾನೂ ನೋಡ್ದೆ. ಎಲ್ಲಾರ್ ಮನೇ ಕಿಟಕಿಯಿಂದ್ಲು ಎಲ್ಲಾರೂನೂ ನೋಡ್ತಾರೆ. ಅದೇನು ನನ್ನ ಮಾತ್ರ ದೊಡ್ಡಾಗಿ ಆಡ್ಕೋತಾರೆ...ಮದುವೆ ಮೆರವಣಿಗೆ ಬಂದ್ರೆ ಅವ್ರೂನೂವೆ ನೋಡ್ತಾರಲ್ವ..ಅವ್ರಿಗೆಲ್ಲ ಮದ್ವೆ ಮೆರವಣಿಗೆ ಮಾತ್ರ ತಮಾಷೆ; ನನಗೆ ಎಲ್ಲಾನೂವೆ ತಮಾಷೆ; ನಾನು ನೋಡೇ ನೋಡ್ತೀನಿ. ಉದ್ದಕ್ಕೂ ಇದೇನು ದೂರು ಅಂತ; ಇದೂ ಒಂದು ಮಾತು ಅಂತ.

ಈ ಮನೆಯಲ್ಲೇ ಎಷ್ಟೋ ಮದುವೆ ನಡೆದಿದೆ. ಎಷ್ಟೋ ಮೆರವಣಿಗೇನೂ ನಡೆದಿದೆ. ನಾನು ಅದೆಲ್ಲಾನೂ ಸಹ ಈ ಕಿಟ್ಕಿ ಮೂಲ್ಕಾನೇ ನೋಡಿದ್ದೇನೆ. ನನಗೆ ಗೊತ್ತಿದ್ದಂತೆ ಈ ಮನೇಲಿ ನಡೆದ ಮೊದ್ಲು ಮದುವೆ ಅಪ್ಪನ ಮದುವೆ. ಆದರೆ ಅದಕ್ಕೆ ಮೆರವಣಿಗೆ ಏಕೋ ಇರಲಿಲ್ಲ. ಚಿಕ್ಕಮ್ಮ ಆಗ ತುಂಬಾ ಸುಂದರವಾಗಿದ್ಳು...ಆಗೆಲ್ಲ ಅವಳ್ನ ಕಂಡ್ರೆ ನನಗೆ ಭಯವಿರಲಿಲ್ಲ. ಮೊದ ಮೊದ್ಲು ಈ ಅಂಗಳದಾಗ ಜಟ್ಕ ಬಂದು ನಿಂತು, ಅದ್ರಿಂದ ಚಿಕ್ಕಮ್ಮ ಇಳಿದ್ಲಲ್ಲ, ಆಗ ಕಿಟ್ಕಿ ಮೇಲೆ

ನಿಂತುಕೊಂಡೇ ನಾನು ನೋಡಿದ್ದೆ. ಚಿಕ್ಕಮ್ಮ ತುಂಬಾ ಚೆನ್ನಾಗಿದ್ಲು...ಆಮೇಲೇನೇ ಹೋಗ್ತಾ ಹೋಗ್ತಾ...ಪಾಪ, ಚಿಕ್ಕಮ್ಮ! ಒಂತರಾ ಆಗಿಬಿಟ್ಳು. ಅವಳು ಆಗಿಂದಾಗ್ಗೆ ಅವ್ಳ ಅಮ್ಮನ ಮನೆಗೆ ಹೋಗಿಬಿಡುತ್ತಿದ್ಲು. ಅವಳೂರು ವೈದೀಶ್ವರನ್ ಕೋಯಿಲ್. ಒಂದೊಂದ್ಸಲ ಅಪ್ಪನೂ ಜೊತೆಗೆ ಹೋಗ್ತಿದ್ರು. ಸಾಮಾನ್ಯವಾಗಿ ಚಿಕ್ಕಮ್ಮ ಮಾತ್ರನೇ ಹೋಗ್ತಿದ್ದಳು; ಒಂಟಿಯಾಗೇ ಬರುತ್ತಿದ್ಲು.... ಒಂಟಿಯಾಗಾ? ಪ್ರಸವಕ್ಕೆ ಹೋಗಿ ಬರುವಾಗ ಹುಟ್ಟಿದ ಮಗುವನ್ನೂ ಎತ್ಕೊಂಡು, ಜೊತೆಗೆ ಅಜ್ಜಿಯನ್ನೂ ಕರಕೊಂಡೂ ಬರುತಿದ್ಲು. ಬಾಬು ಹುಟ್ಟಿದಾಗ್ಲೂ, ನಾನು ಹುಟ್ಟಿದಾಗ್ಲೂ ಅವಜ್ಜಿ ಬಂದಿದ್ಲು...ಆಮೇಲೆ ಬರಲಿಲ್ಲ. ಒಂದ್ಸಲ ಅವಳು ಸತ್ಹೋದ್ಲೂಂತ ಅತ್ತೂ ಕರದೂ ರಾದ್ಧಾಂತ ಮಾಡ್ಕೊಂಡು ಚಿಕ್ಕಪ್ಪ ಮಾತ್ರ ಹೋಗ್ಬಂದ್ರು. ಆಮೇಲೆಲ್ಲ ಚಿಕ್ಕಮ್ಮ ಮಾತ್ರ ಒಂಟಿಯಾಗಿ ಹೋಗಿ ಮಗು ಹೆತ್ಕೊಂಡು ಬಂದ್ಬಿಡ್ತಿದ್ಲು. ಅಪ್ಪ, ನಾನು, ಮಿಕ್ಕ ಮಕ್ಕಳೆಲ್ಲ ಇಲ್ಲೇನೇ ಇರುತಿದ್ವು. ಅಪ್ಪನೇ ಅಡಿಗೆ ಮಾಡುತ್ತಿದ್ದದ್ದು. ನಾನು ಮಕ್ಕಳನ್ನೆಲ್ಲಾ ಕಿಟ್ಕಿ ಹತ್ರ ಕೂರಿಸಿಕೊಂಡು ಆಡ್ತಿರುತ್ತಿದ್ದೆ. ಮಕ್ಕಳಿಗೆಲ್ಲ ನಾನು ಅನ್ನ ತಿನ್ನಿಸುತ್ತಿದ್ದೆ. ಅಪ್ಪ ನನಗೆ ಅನ್ನ ಹಾಕ್ತಿದ್ದರು. ಸ್ವಲ್ಪ ದಿನದ ನಂತರ ನಾನೇ ಅಡಿಗೆ ಮಾಡೋಕ್ಕೆ ಸುರು ಮಾಡ್ದೆ. ನಾನು ಅಡಿಗೆ ಮಾಡಿ ಮಕ್ಕಳಿಗೆ ಹಾಕಿ, ಅಪ್ಪನಿಗೂ ಹಾಕಿ, ಎಲ್ಲರನ್ನು ಕರಕೊಂಡು ಸ್ಕೂಲಿಗೆ ಹೋಗಿಬಿಟ್ಟಿದ್ದೆ. ಚಿಕ್ಕಪ್ಪನಿಗೆ ಏನೂ ಆಗ್ತಿರಲಿಲ್ಲ. ವೈದೀಶ್ವರನ್ ಕೋಯಿಲಿಗೆ ಹೋಗ್ತಿದ್ದಳು, ಒಂದು ಹಜಾರದಾಗೆ ಜೋಗುಳ ಮಲಗಿಬಿಡ್ತಿದ್ಲು. ಸ್ವಲ್ಪ ಎದ್ದು ಜೊತೆಗೆ ಸಣ್ಣ ಪುಟ್ಟ ಕೆಲಸ ಮಾಡ್ಕೊಂಡು ಓಡಾಡ್ತಿದ್ಲು. ಮತ್ತೆ ತಲೆ ಸುತ್ತುತ್ತೆ, ವಾಂತಿ ಬರುತ್ತೇಂತ ಮಲಗ್ಕೊಂಡು ಬಿಡ್ತಿದ್ಲು. ಆಮೇಲೆ...ವೈದೀಶ್ವರನ್ ಕೋಯಿಲ್...ಬಿಟ್ಟಾ...ಹಜಾರದಲ್ಲಿ ಜೋಗುಳ ಕಟ್ಕೊಂಡು ಮಲಗಿಬಿಡ್ತಿದ್ಲು.

ನಾನು ಎಂಟನೇ ಕ್ಲಾಸ್ ಓದ್ತಿದ್ದಾಗ ನನ್ನ ಸ್ಕೂಲ್ ಬಿಟ್ಟು ನಿಲ್ಲಿಸಿದರು. ಚಿಕ್ಕಮ್ಮಾನೇ ಬೇಡಾಂದ್ಲು. ಆಮೇಲೆ ದಿನ ಪೂರಾ ಅಡಿಗೆ ಕೆಲಸಾನೇ. ಹೊಗೆ, ಮಸಿ, ಸೆಕೆ....ಓ! ತಾಯಿ! ಮುಖಾನ ಸ್ವಲ್ಪ ಒರೆಸ್ಕೊಂಡು ಓಡಿ ಬಂದು ಈ ಕಿಟ್ಕಿ ಹತ್ರ ನಿಂತ್ರೆ ಎಷ್ಟು ಸುಖವಾಗಿ ಇರ್ತಿತ್ತು. ಸ್!... ಅಪ್ಪ...

ಹಾಗೆ ನಿಲ್ತಿದ್ದಾಗ ಒಂದ್ಸಲ ನನ್ಜೊತೆ ಓದುತ್ತಿದ್ದಲ್ಲ ಸುಮತಿ, ಅವ್ಳ ಮದುವೆ ದಿಬ್ಬಣ ಬಂತು. ಅವಳಿಗೆ ಎಷ್ಟು ಧೈರ್ಯ! ಕಿಟಕಿ ಹತ್ರ ಬರೋವಾಗ ನನ್ನೋಡಿ ಕೈ ಬೀಸಿದ್ಲಲ್ಲ! ನನಗೆ ನಾಚ್ಗೆ ಆಗೋಯ್ತು. ನಿಜವಾಗ್ಲೂ ನಂಗೆ ನಾಚಿಕೆ ಆಯ್ತು, ಅವಮಾನವಾಗೂ ಇತ್ತು, ನಾನು ಎಂಟನೇ ತರಗತಿಯೊಂದ್ಗೆ ನಿಂತುಬಿಟ್ಟೆ; ಅವ್ಳ ಅದ್ಮೇಲೆ ಮೇಲೆ ಓದಿದ್ಲು, ಹತ್ನೆ ತರಗತಿ ಪಾಸ್ ಮಾಡಿದ್ಲು, ಹಾಡು ಕಲ್ತುಕೊಂಡ್ಳು, ವೀಣೆ ಕಲ್ತಳು, ಮದ್ವೇನೂ ಮಾಡಿಕೊಂಡ್ಳು; ಮೆರವಣಿಗೆ ಬರ್ತಿದಾಳೆ. ಈಗ ನನ್ನೋಡಿ ಕೈಬೀಸ್ತಾಳೆ. ನನಗೆ ನಾಚಿಕೆ ಆಗ್ಲಿಕ್ಕಿಲ್ವ? ಅವಮಾನ ಆಗ್ಲಿಕ್ಕಿಲ್ವ? ಮ್...ನಾನೇನು ಮಾಡ್ಬೇಕ್ ಆಗುತ್ತೆ?

ಪಾತ್ರೆ ಉಜ್ಜೋದು; ದಿನ ಒಂದು ಮೂಟೆ ಬಟ್ಟೆ ಒಗೆಯೋದು. ಒಲೆ ಹತ್ರ ಕೂತು ನಾನೂ ಬೇಯುತ್ತಾ ಏನನ್ನಾದ್ರೂ ಬೇಯಿಸೋದು, ವೈದೀಶ್ವರನ್ ಕೋಯಿಲಿಗೆ ಹೋಗಿ ಬಂದು ಚಿಕ್ಕವ್ವ ತಂದಿದ್ದಾಳಲ್ಲ ಅರ್ಧ ಡಜನ್ ತಮ್ಮಂದಿರು. ಅವನ್ನೆಲ್ಲಾ ಬೆಳಸೋದು ಇವರ ನಡ್ವೆ ಏನಾದ್ರೂ ಸ್ವಲ್ಪ ಅವಕಾಶ ಸಿಕ್ರೆ ಕಿಟ್ಕಿ ಹತ್ರ ಬಂದು ಸ್ವಲ್ಪ ಉಸಿರು ಬಿಡೋದು. ಬೇರೆ ಏನು ಮಾಡ್ಲಿಕ್ ಆಗುತ್ತೆ ನನ್ನಿಂದ?

ಸುಮತಿ ಕೈ ಬೀಸಿದಳಲ್ಲ! ಅವತ್ತು ಚಿಕ್ಕಮ್ಮ ಸೈದ್ವೀಶ್ವರನ್ ಕೋಯಿಲ್‌ಗೆ ಹೋಗಿದ್ರು. ಅಪ್ಪನೂ ನಾನೂ ಮಾತ್ರವೆ ಇದ್ವಿ. ಹುಡುಗರೂ ಎಲ್ಲೋ ಹೋಗಿದ್ರು.

'ಏನಮ್ಮ ಕಣ್ಣೆಲ್ಲ ಕೆಂಪಗೆ ಆಯ್ತೆ' ಅಂತ ಕೇಳಿದ್ರು. ಯಾವಾಗ್ಲೂ ನಾನಳೋವಾಗ ಯಾರಾದ್ರೂ ನೋಡಿ ಬಿಟ್ರೆ 'ಅಮ್ಮನ್ನ ನೆನಸಿಕೊಂಡೆ' ಅಂತ ಸುಳ್ಳು ಹೇಳ್ತಿದ್ದೆ. ಏಕೆಂದರೆ ನನಗೆ ಹೆಸರೇ 'ತಬ್ಲಿ ಹುಡುಗಿ' ತಾನೇ! ಅದರಲ್ಲಿ ನನಗೊಂದು ಉಪ್ಯೋಗ. ಆದ್ರೆ ಅವತ್ತು ನಾನು ಹಾಗೆ ಹೇಳ್ಲಿಲ್ಲ. ನಮ್ಮ ಅಪ್ಪ ತಾನೇ ಅಂತ, ಸ್ವಲ್ಪ ಧೈರ್ಯ ತಂದುಕೊಂಡು ಮನಸು ಬಿಚ್ಚಿ ಕೇಳ್ದೆ: "ಅಪ್ಪ...ಅಪ್ಪ ನನಗೆ ಯಾವಾಗಪ್ಪ ಮದುವೆ ಮಾಡ್ತೀರಿ" ಅಂತ ಕೇಳ್ದೆ. ಅದ್ರಲ್ಲೇನು ತಪ್ಪು?

ನನಗೆ ಇಂದಿಗೂ ಅದು ಒಂದು ತಪ್ಪೂಂತ ಅನ್ನಿಸಲೇ ಇಲ್ಲ. ಆದ್ರೆ ನಾನು ಕೇಳಿದ್ನೊ ಇಲ್ವೊ ಅಪ್ಪನ ಮುಖನೇ ಬದಲಾಗಿ ಹೋಯ್ತು. ಏನೋ ಅಸಹ್ಯವನ್ನು ನೋಡಿದ್ಹಾಂಗೆ ಮುಖವನ್ನು ಸೊಟ್ಟ ಮಾಡಿಕೊಂಡು ನನ್ನ ದುರಗುಟ್ಟಿ ನೋಡಿದರು. ನಾನು ಹೆದ್ರಿ ನಡುಗ್ಬಿಟ್ಟೆ. ಆ ಮೇಲಿಂದ ನಾನು ಅಪ್ಪನ ಮುಖವನ್ನು ನೋಡ್ಲೇ ಇಲ್ಲ. ಸತ್ಹೋದ್ಮೇಲೆ ಸಹ ನೋಡ್ಲಿಲ್ಲ.

ನಾನು ಕೇಳಿದ್ನಲ್ಲ ಅದ್ಕೆ ಉತ್ರ ಕೊಟ್ರೋ ಆ ಮನುಷ್ಯ? ಕೋಪ ಮಾಡಿಕೊಂಬಿಟ್ರೆ ಆಯ್ತಾ? ಕೋಪ ಏನು ಇವರಿಗಷ್ಟೇ ಬರುತ್ತಾ? ನನಗೆ ಬರೋಲ್ವಾ? ಕೇಳಿದ್ದಕ್ಕೆ ಉತ್ರ ಹೇಳೋ ಯೋಗ್ಯತೆ ಇಲ್ಲ. ದೊಡ್ಡದಾಗಿ ಆಡಿಕೊಂಡ್ರು ಎಲ್ರೂ. ನಾನು ಹಾಗೆ ಕೇಳಬಾರ್ದಂತೆ, ನಾನು ಮಾನಗೆಟ್ಟೋಳಂತೆ, ನನಗೆ ಮದುವೆ ಹುಚ್ಚಂತೆ, ಗಂಡಸ್ರ ಹುಚ್ಚಂತೆ. ಏನೇನೋ ಅಸಹ್ಯವಾಗೆಲ್ಲ ಆಡಿಕೊಂಡ್ರು. ಎಲ್ರೂ ಗುಂಪು ಸೇರಿ ಆಡಿಕೊಂಡ್ರು. ಎಲ್ಲದಕ್ಕೂ ಈ ಅಪ್ಪನೇ ಕಾರ್ಣ. ಚಿಕ್ಕಮ್ಮ ಬಂದಕೂಡ್ಲೆ ಅವ್ರತ್ರ ಹೋಗಿ ಇದನ್ನ ಹೇಳಿಬಿಟ್ರು. ನನಗೆ ಬೇಕು. ಚೆನ್ನಾಗಿ ಬೇಕು. 'ನಮ್ಮಪ್ಪ ತಾನೇ' ಅಂತ ಸಲಿಗೆಯಿಂದ ಕೇಳ್ದೆ ನೋಡಿ! ನನಗೆ ಚೆನ್ನಾಗಿ ಬೇಕು. ಈ ಮನುಷ್ಯ ನನಗೆ ಅಪ್ಪನಾ? ಚಿಕ್ಕಮ್ಮನ ಗಂಡ ಅಲ್ವೆ! ಆಮೇಲಿಂದ ಇವರ ಹತ್ರ ನನಗೇನು ಮಾತು? ಇವರ ಮುಖ ಏನು ನೋಡಬೇಕಾಗೈತೆ? ಸತ್ಮೇಲೂ ನಾನು ನೋಡ್ಲಿಲ್ಲ. ಈಗ ನೆನಸ್ಕೊಂಡು ನೋಡಿದ್ರೂ ಅವರ ಮುಖ ನೆನಪಿಗೂ ಬರೋಲ್ವಲ್ಲ!...

ಹಾಗೆ ನನ್ಮನಸನ್ನ ವೈರಾಗ್ಯ ಮಾಡಿಬಿಟ್ರು...ಮ್!... ನನ್ನ ಸ್ವಪ್ನಾನಾ ಕಾಡಿದ್ದಾರೆ...ಅಯ್ಯೋ ತಾಯೀ...ಹೆಣ್ಣಾಗಿ ಹುಟ್ಟಿದ್ದಕ್ಕೆ ನನಗೆ ಒಂದು ಜನ್ಮಕ್ಕೆ ಇದು ಸಾಕಮ್ಮ...ಸಾಕು...

ನಾನು ಕಿಟ್ಕಿ ಹತ್ರ ನಿಂತ್ಕೊಂಡು ಯಾರನ್ನೋ ನೋಡ್ತೇನಂತೆ. ಕೊಳದ ದಂಡೆ ಅರ್ಳಿ ಮರದಡಿ ಕಟ್ಟೆ ಮೇಲೆ ಯಾರೋ ಬಂದು  ಬಂದು ಕೂತುಕೋತಾನಂತೆ. ಅವನ್ನ ನೋಡೋಕ್ಕೇನೆ ನಾನು ಅಲ್ಹೋಗಿ ನಿಂತ್ಕೋತೀನಂತೆ. ಅಲ್ಲಿ ಯಾರೂ ಇಲ್ಲ. ಅರ್ಳಿಮರದಡಿಯಲ್ಲಿ ಒಂದು ಗಣಪ ಅಷ್ಟೆ ಕೂತ್ಕೊಂಡಿರೋದು. ಆ ಗಣಪನ್ನ ನೋಡ್ತಾನೇ ನಾನೂ ಕೂತಿದ್ದೇನೆ, ಗಣಪನಂತೆ. ಅದು ದೈವ ಗಣಪ. ನಾನು ಮನುಷ್ಯ ಗಣಪ. ಅದು ಗಂಡು ಗಣಪ. ನಾನು ಹೆಣ್ಣು ಗಣಪ.

ಆಮೇಲೆ ಒಂದೊಂದ್ಸಲ ನಾಯ್ಗಳು ಅಲ್ಲಿ ತಿರುಗ್ತಿರ್ತಾವೆ. ಜಗಳ ಮಾಡ್ಕೊಂಡಿರುತ್ವೆ. ಅಟ್ಟಿಸ್ಕೊಂಡು ಓಡ್ತವೆ ಸರಸವಾಡ್ತಾ ಆಡ್ತವೆ. ಬೊಗಳುತ್ವೆ. ಅಳುತ್ವೆ. ಮನುಷ್ಯರ ಹಾಗೇನೇ ಮಲಗ್ಕೊಂಡು ನಿದ್ದೆ ಮಾಡುತ್ವೆ. ಮೊದ್ಲು ಒಂದು ನಾಯಿ ಆ ಅರ್ಳಿಮರದ ಕಟ್ಟೆಯ ಆ ಮೂಲೇ ಇದ್ಯಲ್ಲ ಅಲ್ಲಿ ಮರಿ ಹಾಕ್ಬಿಟ್ಟಿತ್ತು.

ಇದ್ನೆಲ್ಲ ನೋಡ್ಕೊಂಡು ನಾನು ಕೂತಿದ್ದೇನೆ. ನನಗೆ ಇದೆಲ್ಲ ಹಿಡಿಸುತ್ತೆ. ನೋಡ್ತೇನೆ. ಬೇರೋರ್ಗೆ ಏನಂತೆ?

ನಾನು ಕಿಟ್ಕಿ ಪತ್ರ ಕೂತಿರೋವಾಗ ನನಗೆ ಗೊತ್ತಿಲ್ಲಂಗೆ ಬೆಕ್ಕಿನ್ಹಂಗೆ ಹೆಜ್ಜೆ ಹಾಕೊಂಡು ಬಂದು ನನ್ನ ಬೆನ್ನ ಹಿಂದೆ ನಿಂತು ಎಟುಕಿ ನೋಡ್ತಿದ್ದಳು ಚಿಕ್ಕಮ್ಮ. ಬೀದಿಯಲ್ಲಿ ಯಾರಾದ್ರೂ ಹೋದ್ರೆ ಅವನಿಗಾಗೀನೆ ನಾನು ಅಲ್ಲಿ ನಿಂತಿದ್ದೇನೆ ಅಂತ ತಿಳ್ಕೋತಿದ್ಲು. ಅರ್ಳಿ ಮರದಡೀಲಿ ಯಾವಾನಾದ್ರೂ ಸೋಮಾರಿ ಕೂತ್ಕೊಂಡು ಬೀಡಿ ಸೇದ್ತಿರ್ತಾನೆ. ಅವನನ್ನೆ ನೋಡಿಯೇ ಪರವಶವಾಗ್ತೀನಿ ಅಂತ ತಿಳ್ಕೋತಾಳೆ. ಯಾರೋ ಇದ್ರೆ ಅವನ್ನ ನೋಡ್ತಿನಂತೆ! ಯಾರೂ ಇಲ್ದಿದ್ರೆ ಯಾರ್ಗಾಗ್ಗೋ ಕಾಯ್ತಿದ್ದೇನಂತೆ! ಹೀಗೆಲ್ಲಿ ಆಡ್ಕೋತಾಳೆ.

ನನಗೇನು ಹೋಯ್ತು? ಯಾರು ಬೇಕಾದ್ರೂ, ಏನು ಬೇಕಾದ್ರೂ ತಿಳಿಕ್ಕೊಂಡು ಹೋಗ್ಲಿ, ಅವ್ರವ್ರ ಬುದ್ಧಿ; ಅವ್ರವ್ರ ನೆನಪು; ಅವ್ರವ್ರ ಗುಣ....

ಯಾರೋ ನನ್ನ ನೋಡ್ತಾರಂತೆ. ನೋಡ್ಲಿ! ನೋಡಿದ್ರೆ ಏನಂತೆ? ಕಿಟ್ಕಿ ಸೈತ ನೋಡೋಕ್ತಾನೇ ಇರೋದು, ಕಣ್ಣೂನೂ ನೋಡೋಕೇನೆ ಇರೋದು. ಕಿಟ್ಕಿ ಅನ್ನೋದು ಒಳಗಿರೋವ್ರು ಹೊರಗೆ ನೋಡೋದಿಕ್ಕೇ. ಹೊರಗಿರೋವ್ರು ಒಳಗೆ ನೋಡಿದ್ರೆ ನಾನೇನ್ ಮಾಡ್ಲಿ? ಯೋಚ್ನೆ ಸರಿಯಾಗಿದ್ರೆ ನೋಡೋದ್ರಲ್ಲಿ ಏನೂ ತಪ್ಪೇ ಇಲ್ಲ.

ಹೋಗ್ತಾ ಹೋಗ್ತಾ ನನಗೆ ಮನಸಿನಲ್ಲಿ ಅನಿಸ್ತು. ಯಾರನ್ನಾದ್ರೂ ನಾನು ಹುಡುಕೊಂಡಿದ್ದೇನಾ? ಯಾರದು? ಹುಡುಕಿದ್ರೆ ತಪ್ಪಾ? ನಾನು ಹುಡುಕ್ಲೇ ಇಲ್ವಲ್ಲ....ಸುಮ್ನೆ ಒಂದು ಮಾತ್ಗೆ ಕೇಳ್ತೀನಿ... ಹುಡುಕಿದ್ರೆ ತಪ್ಪಾ? ನಾನು ಯಾರನ್ನ ಹುಡುಕ್ತಿದ್ದೇನೆ? ನಾನು ಯಾರನ್ನ ಹುಡುಕ್ತೀನೋ ಅವನೇ ಬಂದ್ಬಿಟ್ರೆ, ಕಿಟ್ಕಿ ಮೂಲ್ಕಾನೆ ನಾನು ಅವನ್ಜೊತೆ ಓಡೋಕ್ಕಾಗುತ್ತೆ? ಇವ್ರೆಲ್ಲ ಹೇಳ್ತಾರಲ್ಲ ಅಂತ ನಾನೂ ಒಂದಿನ ಹುಡುಗಾಟಕ್ಕೆ ಹುಡುಕಿ ನೋಡ್ದೆ. ನನಗೆ ಒಬ್ರೂ ಕಣ್ಣಿಗೆ ಕಾಣಿಸಲೇ ಇಲ್ಲ. ಪಾಪ! ಎಲ್ರೂ ಅವರ ಪಾಡ್ಗೆ ಹೋಗ್ತಾರೆ, ಬರ್ತಾರೆ, ನಿಲ್ತಾರೆ, ಮಾತಾಡ್ತಾರೆ; ನನ್ನನ್ನು ಯಾರೂ ನೋಡ್ಲಿಲ್ಲ. ಇವರಷ್ಟೇ ಬೀದೀಲಿ ಹೋಗೋರು ಬರೋರ್ ಜೊತೆಯಲ್ಲಿ ನನ್ನ ಗಂಟು ಹಾಕಿ ಮಾತಾಡ್ತಾರೆ. ಎಷ್ಟು ಅಸಹ್ಯವಾಗಿ ಯೋಚಿಸ್ತಾರೆ! ಈ ಚಿಕ್ಕಮ್ಮ ಒಂದಿನ ನನ್ನ ಏನೋ ಅಸಹ್ಯವಾಗಿ ಕೇಳಿದ್ದು...ನನಗೂ ಕೋಪ ಬಂದ್ಬಿಡ್ತು.

"ನಿನ್ನ ಬುದ್ಧಿ ಹಾಗೇನೇ...ವರ್ಷಕ್ಕೊಂದು ಸರ್ತಿ ಓಡ್ತೀಯಲ್ಲ ನೈದ್ವೀಶ್ವರನ್ ಕೋಯಿಲಿಗೆ" ಅಂತ ಸರಿಯಾಗೇ ಕೇಳ್ದೆ...ಮತ್ತೇನಂತ? ಇವ್ಳು ಮಾತ್ರ ನನ್ನ ಕೇಳ್ಬಹುದಾ?

ನಾನು ನಿಜಾನ್ನೇ ಹೇಳ್ತಿನಲ್ಲ! ನನಗೆ ಮಿಕ್ಕ ಜಾಗ್ದಾಗೆಲ್ಲ ಉಸಿರು ಸಿಕ್ಕೊಳ್ಳುತ್ತೆ. ಇಲ್ಲಿ ಬಂದು ನಿಂತ್ರೇನೇ ಸ್ವಲ್ಪ ಉಸಿರು ಬಿಡ್ಲಿಕ್ಕ ಆಗುತ್ತೆ. ನಾನಂತೂ ಹೊರಗೆ ಹೋಗೋಕ್ಕೆ ಸಾಧ್ಯವಿಲ್ಲ. ಹೊರಗಡೆ ಹೋಗೋರನ್ನು ಸಹ ನೋಡ್‌ಬಾರ್ದಾ?

ಅಯ್ಯೋ ಅದನ್ನು ನೆನಸಿಕೊಳ್ಳೋಕ್ ಹೆದ್ರಿಕೆ ಆಗುತ್ತೆ ಒಂದಿನ, ನನ್ ಕುತ್ತಿಗೇನಾ ಹಿಡಿದು ಅಮುಕಿದ ತರ, ಒಂದು ಮಡಕೇಲಿ ಹಾಕಿ ನನ್ನ ಅದುಮಿಟ್ಟ ಹಾಗೆ, ನನ್ನ ಮಲಗ್ಸಿ ನನ್ಮೇಲೆ ಒಂದು ಬಂಡೆ ಕಲ್ಲನ್ನು ಇಟ್ಟು ಅದುಮಿದ ಹಾಗೆ....ಈ ಕಿಟಕೀನ ಮುಚ್ಚಿಬಿಟ್ರು...ನನಗೆ ಕಣ್ಣೇ

ಹೋಗ್ಬಿಡ್ತು. ಅದಕ್ಕಿಂತ ನನ್ನ ಅವರು ಕೊಂದಿರಬಹುದಿತ್ತು. ಕಿರುಚಿ, ಒದ್ದಾಡಿ, ಬಡುಕೊಂಡು ಅತ್ತಿದ್ದೇನೆ. ನೋಡಿ...ಇನ್ನು ಸ್ವಲ್ಪ ಹೊತ್ತು ಕಿಟ್ಕೀನ ತೆರೀದೇ ಇದ್ದಿದ್ರೆ ನಾನು ಎದೆ ಒಡೆದು ಸತ್ತೋಗಿರುತ್ತಿದ್ದೆ. ಅಬ್ಬ ತೆರೆದು ಬಿಟ್ರು. ಅವತ್ತು ಈ ಕಿಟಕಿ ಕಟ್ಟೆ ಹತ್ತಿ ಕೂತೋಳೇ ನಾನೇಕೆ ಇಳೀತೇನೆ ನಾನಿಳಿದು ಆ ಕಡೆ ಹೋದ್ರೆ ಈ ಕಡೆ ಮುಚ್ಚಿ ಬಿಡ್ತಾರಲ್ಲ!...

ಕಿಟಕೀನ ತೆರೆದು ಬಿಚ್ಚಿಟ್ರೆ...ಆಯ್ತಾ? ಜಗುಳಿ ತುಂಬಾ ಈ ಚಿಲ್ಟಾ ಪಿಲ್ಟಾಗಳು! ನನಗೇನೂ ತಿಳೀಲಿಲ್ಲ. ನನ್ನನ್ನು ಏಕೆ ಎಲ್ರೂ ಹೀಗೆ ತಮಾಷೆ ನೋಡ್ತಾರೆ? ನಾನೂ ಸಪ್ಲಿ ಸಪ್ಲಿ ನೋಡಿ ಒಂದಿನ ನನ್ನಿಂದ ಸಾಧ್ಯವಾಗದೆ ಎಲ್ರನ್ನು ಓಡಿಸಿದೆ. ಹೊಡಿಲಿಲ್ಲ; ಬೈಲಿಲ್ಲ...ನನ್ನ ಯಾಕ್ರೋ ಹೀಗೆ ಗೋಳ್ ಹೊಯ್ಕೊಳ್ತೀರಾಂತ ಅತ್ತೆ. ಅದನ್ ನೋಡಿ ಅವ್ರೆಲ್ಲಾ ಓ ಅಂತ ನಗ್ತಾರೆ...

ಅಪ್ಪ ಬಂದ್ರ ನಾನವ್ರ ಮುಖ ನೋಡ್ಲಿಲ್ಲ. ನನಗೆ ಮದುವೇನೆ ಬೇಡ. ಈ ಕಿಟಕಿ ಹತ್ರಾನೆ ಕೂತ್ಕೊಂಡಿರ್ತೇನೆ ಅಷ್ಟೆ ಸಾಕು ಅಂತ ಹೇಳ್ದೆ. 'ಕಿಟಕೀನ್ನ ಮಾತ್ರ ಮುಚ್ಚಬೇಡಾಂತ ಹೇಳಿ' ಅಂತ ಅತ್ತೆ.

ನಿನಗೆ ಕಿಟಕಿ ತಾನೆ ಬೇಕು. ಕಿಟಕೀನೇ ಕಟ್ಕೊಂಡು ಅಳು ಅಂತ ಅವ್ರು ಹೇಳ್ದಾಗ ಎಷ್ಟೋ ಸಮಾಧಾನವಾಯ್ತು.

ಆಮೇಲೆ ಒಂದಿನ...ಬಾರೇ ನನ್ಜೊತೆ ನೈದ್ದೀಶ್ವರನ್ ಕೋಯಿಲ್‌ಗೆ ಹೋಗ್ಬರೋಣ ಅಂತ ಅಂಗಳದಾಗೆ ಜಟ್ಕಾ ತಂದು ನಿಲ್ಸಿಕೊಂಡು ಅಪ್ಪನೂ ಚಿಕ್ಕಮ್ಮನೂ ನನ್ನನ್ನು ಪುಸಲಾಯಿಸಿ ಕರೆದರು... ನಾನು ಹೋಗ್ತೀನಾ? ಆಗೋಲ್ಲ ಅಂದ್ಬಿಟ್ಟೆ. ಕಿಟ್ಕಿ ಕಂಬಿಯನ್ನು ಬಿಗಿಯಾಗಿ ಹಿಡಕ್ಕೊಂಡು ಬರೋದಿಲ್ಲಾಂದ್ಬಿಟ್ಟೆ.

'ನನಗೆ ನೈದ್ದೀಶ್ವರನ್ ಕೋಯಿಲೂ ಬೇಡ ಮತ್ತೊಂದೂ ಬೇಡ. ನನಗೆ ನನ್ನ ಕಿಟ್ಕಿ ಮಾತ್ರ ಸಾಕು. ಇಲ್ಲಿದ್ದೇನೆ ನಾನು ಎಲ್ಲವನ್ನೂ ನೋಡಿಕೋತೇನೆ. ನನ್ನ ಸ್ವಲ್ಪ ನೆಮ್ಮದಿಯಿಂದ ಉಸಿರಾಡೋಕ್ಕೆ ಬಿಟ್ಟು ನೀವೆಲ್ಲಾ ಎಲ್ಲಿಗಾನ ಹೋಗ್ರಿ' ಅಂತ ಇದ್ಬಿಟ್ಟೆ.

ನನಗೆ ಈ ಕಿಟಕಿಯೇ ಸಾಕು!

ಆಮೇಲೆ ದಿಡೀರಂತ ಒಂದು ದಿನ ನನ್ನ ಸುತ್ತೂ ಬರೀ ಕಿಟಕಿಗಳು...ದೊಡ್ ದೊಡ್ ಕಿಟಕಿಗಳು. ಗೋಡೇನೇ ಇಲ್ದೆ ಕಿಟಕಿಗಳು...ಅಯ್ಯೋ ಇದು ಗೂಡೂಂದ್ರೆ? ದೇವರೇ! ನನಗೆ ಗೂಡು ಬೇಡವೇ! ನಾನೇನು ಹುಲಿಯಾ? ಸಿಂಹನಾ? ನನ್ನನ್ನು ಯಾಕೆ ಗೂಡಿನಲ್ಲಿ ಹಾಕಿದ್ರಿ? ಹೇಗೆ ಹಾಕಿದ್ರಿ? ಯಾವಾಗ ಹಾಕಿ ಮುಚ್ಚಿದ್ರಿ?...ನಾನೇನ್ ಮಾಡ್ಲೇ ತಾಯಿ?...ಅಯ್ಯೋ ಅಮ್ಮ!...

ಬರೀ ಕಿಟಕಿ ಮಾತ್ರ ಇತ್ತು; ಅರ್ಳೀಮರ ಕಾಣಿಸಲಿಲ್ಲ. ಅದರ ಹಿಂದೆ ಇದ್ದ ಕೊಳ ಕಾಣಿಸ್ತಾ ಇಲ್ಲ. ಶಿವಾನಂದಂ ಮನೆ ಇಲ್ಲ. ಮದುವೇನೂ ಇಲ್ಲ, ಸಾವೂ ಇಲ್ಲ... ಬರೀ ಕಿಟಕಿ ಅದೂ ಸಹ ನಮ್ಮನೆ ಕಿಟ್ಕಿ ತರ ಚಂದವಾಗಿ, ಚಿಕ್ಕದಾಗಿ ಇಲ್ಲ. ಕಿಟಕಿ ಕಟ್ಟೆ ಇಲ್ಲ...ಒಂದ್ಕಡೆ ಒರಗ್ಕೊಂಡು ಇನ್ನೊಂದು ಕಡೆ ಕಾಲನ್ನು ಒದ್ದುಕೊಂಡು...ಉಹೂ...ಅದೇನೂ ಸಾಧ್ಯವಿಲ್ಲ.

ಹಾಗೆ ಒಂದು ಜಾಗವಾ? ಹಾಗೂ ಸಹ ಒಂದು ಜಾಗ ಇರೋಕ್ಕೆ ಸಾಧ್ಯವಾ? ಗೂಡು

ತರ, ಗುಹೆ ತರ, ಜೈಲ್ ತರ, ಒಂದ್ವೇಳೆ ಅದು ಸುಳ್ಳೋ, ಕನಸು ಕಂಡಿರಬೇಕು!... ನನಗೇನೂ ಸರಿಯಾಗಿ ಹೇಳೋಕ್ಕೆ ಬರ್‍ತಾ ಇಲ್ಲ...ಬಿಡಿ. ಈಗಂತೂ ಕಿಟ್ಕಿ ಹತ್ರ, ಮತ್ತೆ ಇಲ್ಲಿಗೇಕೆ ಬಂದ್ಬಿಟ್ಟೆ ಅಲ್ಲ!....

ಒಂದು ಸಮಯ ಈ ಒಳ ಕಿಟಕಿ ಮೂಲ್ಕ ಒಂದು ಆನೆ ಬಂದ್ಬಿಡ್ತು! ಸ್ವಾಮಿ ಮೆರವಣಿಗೆ ಹೋಗೋವಾಗ ನಾನು ಆ ಆನೇನ ನೋಡಿದೇನೆ...ಅದೇ ಆನೆ! ಓ, ತಾಯಿ ಎಷ್ಟು ದೊಡ್ಡ ಆನೆ. ಹೇಗೆ ಮೊದ್ಲು ನೈಸಾಗಿ ಸೊಂಡಿಲನ್ನು ಚಾಚಿ ನನ್ನನ್ನು ಕರೆಯೋ ಹಾಗೆ ಬಂದು ನಿಂತುಕೊಂಡಿತ್ತು. ಅಲ್ಲಾಡಿ ಅಲ್ಲಾಡಿ ಎರಡೂ ಕಂಬಿ ನಡುವೆ ಸೊಂಡಿಲನ್ನು ತೂರಿಸಿ ನನ್ನ ಕೆನ್ನೆ ಮೇಲೆ ತಣ್ಣಗೆ ಮುಟ್ಟಿದಾಗ ಒಂದು ತರ ಚೆನ್ನಾಗೇ ಇತ್ತು; ಭಯವಾಗುತ್ತಾ ಇತ್ತು.

ಕಿಟ್ಕಿ ಕಟ್ಟೆ ಮೇಲೆ ಕೂತಿದ್ದ ನಾನು ಇಳಿದು ಬಂದು ರೂಂ ನಡುವೆ ನಿಂತ್ಕೊಂಡ್ಬಿಟ್ಟೆ. ಆ ಆನೆ ಉದ್ದಕ್ಕೆ ಸೊಂಡಿಲನ್ನು ಪೂರಾ ಒಳಗೆ ಚಾಚಿಕೊಂಡು ನನ್ನ ಹಿಡಿಯೋದಿಕ್ಕೆ ಹುಡುಕ್ತಿದೆ...ಆಮೇಲೆ...

ಅಮ್ಮಮ್ಮಾ! ಈ ಅದ್ಭುತವಾ ನೋಡ್ರಿ...ನೋಡೋ ತನ್ಕ ಅಷ್ಟೆ ಅದ್ಭುತ. ಈ ತುಂಬಾ ಸಾಮಾನ್ಯವಾಗಿದೆ...ಆ ಆನೆಯ ಮೈ ಹಾಗೇನೇ ಸ್ವಲ್ಪ ಸ್ವಲ್ಪವೇ ಚಪ್ಪಟೆಯಾಗಿ ಒಂದು ಕಪ್ಪು ಬಟ್ಟೆ ತರ ಆನೆ ರೂಪದಲ್ಲಿ ಒಂದು ತೆರೆಯಲ್ಲಿ ಕತ್ತರಿಸಿ ಇಳೀಬಿಟ್ರೆ ಹೇಗಿರುತ್ತೆ. ಆ ತರ ಅಲುಗಾಡಿ ಅಲುಗಾಡಿ ಕಿಟ್ಕಿ ಕಂಬಿ ನಡುವೆ ಹೊಕ್ಕು ಪೂರಾ ಒಳಗೇ ಬಂದ್ಬಿಡ್ತಲ್ಲ! ನಡು ರೂಂನಲ್ಲಿ ಸೂರಿಗೆ ಬೆನ್ನು ತಗುಲೋ ಹಾಗ ಮತ್ತೇ ದೊಡ್ಡ ತರಾನೇ ಆನೆಯಾಗಿ ನಿಂತಿದೆ...ಸೊಂಡಿಲಿಂದ ನನ್ನನ್ನು ತಣ್ಣಗೆ ಮುಟ್ತಿದೆ!

ಆಹಾ! ಎಷ್ಟೊಂದು ಸುಖವಾಗ್ತೆತೆ!...ಎಷ್ಟೊಂದು ಆನಂದವಾಗ್ತೆತೆ!...ಭಯವಾಗೇ ಇಲ್ಲ. ಸ್ವಲ್ಪಾನೂ ಭಯವಿಲ್ಲ.

ದಿಢೀರಂತ ಚಿಕ್ಕಮ್ಮ ಬಂದ್ಬಿಟ್ಟಿಂದ್ರೆ ಏನ್ಮಾಡೋದು ಅಂತ ನೆನಸ್ಕೊಂಡ್ರೆ ಭಯ ಬಂದ್ಬಿಡ್ತು.

"ಹೋಗು..ಹೋಗು" ಅಂತ ನಾನು ಆನೇನ ಓಡಿಸ್ತೇನೆ. ಅದು ನನ್ನ ಕುತ್ತಿಗೇನ ತನ್ನ ಸೊಂಡಿಲಿಂದ ಬಳಸಿ ಹಿಡಿಕೊಂಡು ನನ್ನನ್ನೂ 'ಬಾ ಬಾ' ಅಂತ ಎಳೀತಿದೆ.

'ಅಯ್ಯೋ! ಯಾವಾನ್ಜೊತೇನ್ನೋ ಓಡ್ಹೋದ್ಲೂಂತ ಅಪವಾದ ಬರುತ್ತಲ್ಲಾಂತ ನೆನಸ್ಕೊಂಡ್ರೆ ಹೊಟ್ಟೇಲಿ ಧಗ್ ಅನ್ನುತ್ತೆ.

'ಶನಿ! ಏಕೆ ಬಂದೆ?...ನನ್ನನ್ನ ಎಲ್ಲಿಗೆ ಎಳೀತಿಯಾ' ಅಂತ ಆ ಆನೆಯ ನೆತ್ತಿ ಮೇಲೆ ಎರಡೂ ಕೈಲಿಂದ ಗುದ್ದುತ್ತೀನಿ...ಆನೆ ನನ್ನನ್ನು. ಸೊಂಡಿಲಿಂದಲೆ ಬಳಸಿ ಎತ್ಕೊಂಡು ಸ್ವಲ್ಪ ಸ್ವಲ್ಪಾನೇ ಬಂದ ಹಾಗೇನೆ ಹಿಂದುಗಡೆ ಬಟ್ಟೆ ತರ ಅಲೆ ಅಲೆಯಾಗಿ ತೇಲ್ಕೊಂಡು ಕಿಟಕಿ ಕಂಬಿಯೊಳಗೆ ತೂರಿಕೊಂಡು ಹೋಗ್ತಾನೆ ಇದೆ. ನಾನು, ಕಿಟಕಿ ಹತ್ರ ಬಂದ ಕೂಡಲೆ ಚೆನ್ನಾಗಿ ಬೆನ್ನನ್ನು ಒರಗಿಸಿಕೊಂಡು, ಪಾದಗಳನ್ನು ಎದುರು ಗೋಡೆಗೆ ಆನಿಸಿಕೊಂಡು ಅಡ್ಡವಾಗಿ ಅಗುಳಿ ಹಾಕಿದ ಹಾಗೆ ಕೂತ್ಕೊಂಡುಬಿಟ್ಟೆ. ಆನೆ ತೂರಿದ ಹಾಗೆ ನಾನು ತೂರೋಕ್ಕೆ ಆಗಲ್ವಲ್ಲ?...

ಪಾಪ! ಆ ಆನೆ ಹೊರಗೆ ನಿಂತ್ಕೊಂಡು ಪಾಪವಾಗಿ ನೋಡ್ತಿತ್ತು, ಏನ್ಮಾಡೋದು? ನಾನೂನೂ

ಹಾಗೇ ನೋಡ್ತಿದ್ದೇನೆ...ಎಷ್ಟೋ ಜನ ಸಹ ಹಾಗೇ ನೋಡ್ತಾರೆ. ಅದಕ್ಕೇ ನಾನ್ತಾನೇ ಏನ್ಮಾಡೋಕ್ಕಾಗತ್ತೆ. ಅವರ್ತಾನೇ ಏನ್ಮಾಡ್ತಾರೆ? ನೋಡ್ತಾ ಇರೋದು ಅಷ್ಟೇನೆ...

ಹಾಗೇ ನನ್ನ ನೋಡ್ತಾ ನೋಡ್ತಾ ಹಿಂದೆ ಸರಿದೂ ಸರಿದೂ ಹೋಗಿ ಅರಳಿ ಮರದಡಿಯಲ್ಲಿ ಗಣಪನಾಗಿ ಬದಲಾಗಿಬಿಡ್ತು...

ಆಶ್ಚರ್ಯವಾಗುತಲ್ವ! ನನಗೆ ಇದು ತುಂಬಾ ಸಾಧಾರಣವಾಗಿ ಕಾಣ್ತದೆ. ಏಕೆಂದರೆ ಈ ತರ ಆಗಾಗ್ಗೆ ನಡೆಯುತ್ತೆ. ಆನೆ ಮಾತ್ರನೇ ಬರೋದು, ನಾನು ಹೋಗೋದಿಲ್ಲ, ಆಗುತ್ತಾ ಏನು?

ಈಗೆಲ್ಲ ನನಗೆ ಕಿಟಕಿ ಹತ್ರಾನೇ ಊಟ ಬಂದ್ಬಿಡುತ್ತೆ. ನಮ್ಮ ಬಾಬೂನ ಹೆಂಡ್ತಿ ಇದ್ದಾಳಲ್ಲ ಕುಂಜು, ಚಿನ್ನ ಅಂದ್ರೆ ಚಿನ್ನಾನೆ. ನನ್ನ ಹಾಗೆ ನೋಡ್ಕೋತಾಳೆ ಬಿಡಿ! ಚೆನ್ನಾಗಿಟ್ಟಿರಲಿ ದೇವರು.

ನಾಣು ಅವನ ಹೆಂಡತೀನೂ ನೆಯ್ವೇಲೀಲಿದ್ದಾರೆ...ಬಾಬು ಎಲ್ಲಿರ್ತಾನೋ ಅಲ್ಲೇ ನಾನೂ ಇರೋದು. ಅವನೂನು ನನ್ನ ಬಿಟ್ಟಿರೋಲ್ಲ.

ಈ ಚಿಕ್ಕಮ್ಮ ಇಲ್ಲ! ಅವ್ಳು ಸತ್ಹೋಗಿ ಬಾಳ ದಿನಾ ಆಯ್ತು!

ಹೊಸತು ಹೊಸತಾಗಿ ಹುಟ್ತಾರಲ್ಲ ಹಾಗೇನೆ ಜನ ಹಳತು ಪಳತಾ ಹಳತಾಗಿ ಸತ್ತು ಹೋಗ್ತಾರೆ.

ನಾನು ಮಾತ್ರ ಯಾವಾಗ್ಲೂ ಈ ಕಿಟಕಿ ಹತ್ರ ಕೂತಿರ್ತೇನೆ. ಕೂತ್ಕೊಂಡೇ ಇರ್ತೇನೆ. ಈ ಮನೆ ಬಿದ್ದು ಹೋದ್ರೂನೂ ಈ ಕಿಟ್ಕಿ ಮಾತ್ರ ಇರುತ್ತೆ. ನಾನಿದ್ರಲ್ಲಿ ಒರಗ್ಕೊಂಡು ಕಾಲನ್ನು ಒತ್ಕೊಂಡು ನೋಡ್ಕೊಂಡೇ ಇರ್ತೇನೆ. ಪ್ರಪಂಚಾನ ಕಿಟ್ಕಿ ಮೂಲ್ಕ ನೋಡಿದ್ರೆ ಪ್ರವಾಸ ಹೋಗೋ ತರ ಬಾಳ ಚೆನ್ನಾಗಿರುತ್ತೆ.

ಈ ಪ್ರಯಾಣ ಚೆನ್ನಾಗೈತೆ. ಈ ಮನೆ ಒಂದು ರೈಲು ತರ ಓಡ್ತಾನೆ ಅಯ್ತೆ. ರೈಲಿನ ಭೋಗಿ ತರ ಈ ರೂಮಿನ ಕಿಟ್ಕೀಲಿ ಕೂತ್ಕೊಂಡು ನಾನು ಪ್ರಯಾಣ ಹೋಗ್ತಿದ್ದೇನೆ...ಎಲ್ಲಾ ಓಡುತ್ತೆ. ಮನುಷ್ಯರು, ಮರ, ಮನೆ, ಗಣಪತಿ, ಬೀದಿ, ನಾಯಿ, ಸಂಬಂಧದೋರು, ಬೇರೆ ಜನ, ಸತ್ತೋರು, ಹುಟ್ದೋರು ಎಲ್ಲ ಓಡ್ತಾರೆ.

ರೈಲಿನಲ್ಲಿ ಹೋಗೋವಾಗ ನಾವೂ ಓಡ್ತಿರ್ತೇವೆ. ಆದರೆ ತಂತಿ ಕಂಬೀನೂ ಮರವೂ ಓಡೋ ತರ ಕಾಣ್ಸುತ್ತೆ ಅಲ್ವ? ಅದೇ ತರ ಇಲ್ಲಿ ನಾನು ಕೂತಿದ್ರೂನೂ ಕಿಟಕಿ ಹೊರಗೆ ಎಲ್ರೂ ಓಡ್ತಿರೋದ್ರಿಂದ ನಾನೇ ಓಡ್ತೀರೋ ತರ ಅನ್ಸುತ್ತೆ. ಯಾರಾದರೂ ಒಬ್ರು ಓಡಿದ್ರೆ ಆಯ್ತು. ನಾನೇ ಓಡಬೇಕಾ?

ಈಗ ಯಾರೂ ನನ್ನ ನೋಡಿ ನಗೋದಿಲ್ಲ; ನನ್ನ ತಮಾಷೆಯಾಗಿ ನೋಡೋದಿಲ್ಲ. ಆದ್ರೂನೂ ಒಂದೊಂದ್ಸಲ ಅವ್ರು ನನ್ನ ನೋಡಿ ನಗೋತರ ಅನ್ಸುತ್ತೆ. ನನ್ನ ಬಗ್ಗೆ ಅವ್ರು 'ಕಿಟಕಿ ಹತ್ರ ಕೂತಿದ್ದಾಳೆ. ಕಿಟಕಿ ಹತ್ರ ಕೂತಿದ್ದಾಳೆ' ಅಂತ ಹೇಳೋ ತರ ಇದೆ. ಯಾರು ಹೇಳಿದರೆ ನನಗೇನು? ನಮ್ಮ ಕೂಡ ಹಾಗೆಲ್ಲ ಹೇಳೋದಿಲ್ಲ. ಅವ್ಳು ಬಂಗಾರ ಅಂದ್ರೆ ಬಂಗಾರವೇ ಕುಂಜು ಅದೇ ಬಾಬೂನ ಹೆಂಡ್ತಿ... ಮಕ್ಳನ್ನು ತಂದು ನನ್ಹತ್ರ ಬಿಟ್ಟು ಅಡಿಗೆ ಕೆಲಸ ನೋಡ್ತಾಳೆ.

ಈಗೆಲ್ಲ ನಾನು ಏನೂ ಕೆಲ್ಸ ಮಾಡೋದಿಲ್ಲ. ನನ್ನ ಕೆಲ್ಸ ಮಾಡೋಕ್ಕೆ ಕುಂಜು ಬಿಡೋದೇ ಇಲ್ಲ.

ನಾನು ಮಕ್ಕಳನ್ನು ಇಟ್ಕೊಂಡು ಕಿಟಕಿ ಮೂಲ್ಕ ತಮಾಷೆ ತೋರಿಸ್ತಾ ಇರ್ತೇನೆ. ಇಲ್ಲ, ತಮಾಷೆ ನೋಡ್ತಾ ಇದ್ದೇನೆ.

ಕಿಟಕಿಗೆ ಆ ಕಡೆ ಕಾಣ್ಸೋದೆಲ್ಲ ತಮಾಷೆಯಾಗೆ ಅಯ್ತೆ!

"ಅಜ್ಜಿ! ಕಿಟಕಿ ಹತ್ರ ಕೂತ್ಕೊಂಡು ಏನು ನೋಡ್ತಿದ್ದೀಯಾ?"

ಅಯ್ಯೋ ತಾಯಿ! ಇದೇನೇ ತಮಾಷೆ? ಅಜ್ಜಿಯಂತೆ ನಾನು? "ಯಾರೇ ನೀನು?"

'ನಾನು ಗೊತ್ತಿಲ್ವ ಸರೋ ಮಗಳು-ಊರ್ನಿಂದ ನೆನ್ನೆ ಬಂದ್ನಲ್ಲ' ಅಂತ ಏನು ಸ್ಟೈಲಾಗಿ ಮಾತಾಡುತ್ತೆ ನೋಡಿ.

ಸರೋವಿನ ಮಗಳಾ? ಇಷ್ಟು ದೊಡ್ಡೋಳ? ಸರೋ ಅಂದ್ರೆ....ಬಾಬುವಿನ ಮಗಳು... "ಹಂಗಾದ್ರೆ ನೀನು ಕುಂಜುವಿನ ಮೊಮ್ಮಗಳಾ?...."

ಅಲ್ವೆ ಮಾತಾಯಿ! ಕಿಟಕಿ ಈ ಕಡೆ ಇಷ್ಟೆಲ್ಲಾ ತಮಾಷೆ ನಡೆದುಹೋಯ್ತಾ? ನಾನು ಗಮನಿಸಲೇ ಇಲ್ವಲ್ಲ...

ಕುಂಜೂ!...ಆ ಕುಂಜು! ಇಲ್ಲಿ ಬಾರೆ ಸ್ವಲ್ಪ! ಈ ತಮಾಷೆ ಸ್ವಲ್ಪ ಕೇಳು ಬಾ...ನಾನು ಅಜ್ಜಿಯಂತೆ ಅಜ್ಜಿ...ನಿನ್ನ ಮೊಮ್ಮಗಳು ಹೇಳ್ತಾಳೆಯೇ...ಕುಂಜು...ಕುಂಜು....!

□

ಪ್ರೊ. ಬಿ. ರಾಮಸ್ವಾಮಿ ಆದಿವಾಲ
ಮುಖ್ಯಸ್ಥರು, ಕನ್ನಡ ವಿಭಾಗ, ಮದ್ರಾಸ್ ವಿಶ್ವವಿದ್ಯಾಲಯ
ಚೆನ್ನೈ - ೬೦೦ ೦೦೪

# ಯಶೋಧರಾ

ಪಂಜಾಬಿ ಮೂಲ : ಡಾ. ವನಿತಾ
ಕನ್ನಡಕ್ಕೆ : ಸವಿತಾ ನಾಗಭೂಷಣ

ಸಿದ್ಧಾರ್ಥ
ಈ ಸಲ ನಿರ್ವಾಣ ಹೊಂದಲು
ಯಶೋಧರಾ ಹೋಗುವಳು

ಇರು ನೀನಿಲ್ಲೆ, ಹೋಗಲಿ...ಅವಳು
ನಿನ್ನರಮನೆಯ ಜಗಮಗಿಸುವ ನಾಲ್ಕು
ಗೋಡೆಗಳ ಮಧ್ಯೆ ಬಂಧಿತಳಾಗಿ
ಬೇಸತ್ತಿಹಳು. ಎಂಥಾ ಶೋಕ....
ಬಣ್ಣ ಕಳೆದುಕೊಂಡು ಬದುಕು
ಕವಿದಿದೆ ಮಂಕು

ಸುಮ್ಮನೆ ಹೋಗುವಳೆ? ಉಹುಂ
ಹೋಗುವಳು—
ನಿನ್ನನಿಲ್ಲೇ ಬಿಟ್ಟು ಮಡಿಲಲ್ಲಿ ಮಗುವನಿಟ್ಟು

ಚಿಂತಿಸದಿರು
ಬೇಕಾದ್ದನ್ನು ಬೇಕಾದಷ್ಟು ಪಡೆದಿರುವೆ ನೀನಲ್ಲಿ

ಭಾರವಾದ ಹೆಜ್ಜೆ ಗುರುತುಗಳ ನಿರುಕಿಸುತ
ಅದಕಿಂತ ಹೆಚ್ಚಿನದನು ಪಡೆಯಬಹುದು ನೀನಿಲ್ಲಿ!

ಭವದ ಹಂಗನು ತೊರೆದು ಬೋಧಿವೃಕ್ಷದ ಕೆಳಗೆ
ಅದೇನು ಪಡೆದೆಯೊ ಯಾರಿಗೆ ಗೊತ್ತು?

ಈಗ ಮಡಿಲಲ್ಲಿ ಮಗು ಮತ್ತದರ ನಗು-ಆಟಪಾಟ
ನೀಡಬಹುದು ನಿನಗೆ ಹೊಚ್ಚ ಹೊಸ ಒಳನೋಟ

ಹೋಗುವಳು ಯಶೋಧರಾ
ಅದೇ ಮರದ ಕೆಳಗೆ ಅದೇ ಬೆಳಕಿನೆಡೆಗೆ...

ನಿನ್ನನಿಲ್ಲೇ ಬಿಟ್ಟು ಮಡಿಲಲ್ಲಿ ಮಗುವನಿಟ್ಟು...

ಸವಿತಾ ನಾಗಭೂಷಣ
೧೨/೩ 'ವಸುಪ್ರದ' ೮ನೇ ಕ್ರಾಸ್, ಎರಡನೇ ಮೇನ್, ಗುಜರಾತಿ ಸಮಾಜದ ಹಿಂಭಾಗ, ಯಾದವಗಿರಿ
ಮೈಸೂರು - ೩೦, ದೂರವಾಣಿ : (೦೮೨೧) ೨೪೧೨೫೭೪

# 'ಕಪ್ಪುತನ'ವೇಕೆ ಮುಖ್ಯ?

ಮೂಲ : 'ಡಾರ್ಕನೆಸ್ ಮ್ಯಾಥರ್ಸ್'-ಟೋನಿ ಮಾರಿಸ್ಸನ್
ಅನುವಾದ : ಬಿ.ಎನ್. ಉಷಾ

ಈ ಲೇಖನದಲ್ಲಿ ಅಮೇರಿಕಾದ ಸಾಹಿತ್ಯದ ಅಧ್ಯಯನವನ್ನು ವಿಸ್ತರಿಸಲು ವಾದವೊಂದನ್ನು ಮಂಡಿಸಲಿದ್ದೇನೆ. ಈ ಮೂಲಕ ಅಮೇರಿಕಾದ ಸಾಹಿತ್ಯಕ್ಕೆ ಹೆಚ್ಚಿನ ಹರವು ಸಿಗಬಹುದೆಂಬುದು ನನ್ನ ಆಶಯ. ನಾನೊಂದು ವಿಮರ್ಶಾತ್ಮಕವಾದ ನಕ್ಷೆಯನ್ನು ರಚಿಸಿ, ಆ ನಕ್ಷೆಯ ಮೂಲಕ ಹೊಸ ಆವಿಷ್ಕಾರ, ಒಂದು ಹೊಸ ವೈಚಾರಿಕ ಸಾಹಸಕ್ಕೆ ಸಾಧ್ಯತೆಗಳನ್ನು ಬರಮಾಡಿಕೊಳ್ಳಲು ಇಚ್ಛಿಸುತ್ತೇನೆ. ಅಂದು ನಡೆದ 'ಹೊಸ ಜಗತ್ತಿನ' (New Wolrd) ಹುಡುಕಾಟದ ತರಹವೆ ಇದೂ ಕೂಡ. ಆದರೆ ಇಲ್ಲಿ ಯಾರನ್ನೂ ಗೆದ್ದು, ಆಳುವ ಉದ್ದೇಶವಿಲ್ಲ. ಇದೊಂದು ಆಕರ್ಷಕ, ಅರ್ಥಪೂರ್ಣ, ಪ್ರಚೋದಕ ಯೋಜನೆ. ಇಲ್ಲಿ ಹೊಸ ಕನಸುಗಳಿವೆ, ಕೋಟೆಯ ಎತ್ತರದ ಗೋಡೆಯತ್ತ ಎತ್ತಿದ ಕೈಗಳಿವೆ.

ನಾನಿಲ್ಲಿ ಕೇವಲ ಸಾಹಿತ್ಯ ವಿಮರ್ಶಕಳಾಗಿ ಈ ವಿಚಾರಗಳನ್ನು ಮಂಡಿಸುತ್ತಿಲ್ಲ. ಅಥವಾ ವಿಮರ್ಶೆಯ ಪರಿಕರಗಳನ್ನು ನಾನಿಲ್ಲಿ ತರಲು ಇಚ್ಛಿಸುವುದಿಲ್ಲ. ಲೇಖಕಿಯಾಗುವ ಮುನ್ನ ಓದುಗಳಾಗಿ ನಾನಿಲ್ಲಿ ನಿಂತಿದ್ದೇನೆ. ಲೇಖಕಿಯಾಗಿ ಪುಸ್ತಕಗಳೆಲ್ಲಾ ಬೇರೆಯದೆಯಾದ ರೀತಿಯಲ್ಲಿ ನನಗೆ ಗೋಚರಿಸತೊಡಗಿದವು. ಲೇಖಕಿಯಾಗಿ ನನ್ನ ಕಲ್ಪನಾ ಶಕ್ತಿಯ ಮೇಲೆ ನನಗೆ ಆಳವಾದ ನಂಬಿಕೆಯಿದೆ. ಬೇರೆಯವರು ನನ್ನನ್ನು ಪ್ರತಿನಿಧಿಸುವ ಅಪಾಯಕಾರಿ ವಲಯಗಳಲ್ಲಿ ನನ್ನನ್ನು ನಾನೆ ಪ್ರಜ್ಞಾಪೂರ್ವಕವಾಗಿ ಒಡ್ಡಿಕೊಳ್ಳಲು ಸಿದ್ಧಳಿದ್ದೇನೆ. ಇತರ ಲೇಖಕರಲ್ಲಿ ಇವು ಕಾಣಿಸಿಕೊಳ್ಳುವ ರೀತಿ ಸದಾ ನನನ್ನು ಸೆಳೆಯುತ್ತದೆ : ಹೋಮರ್ ಹೃದಯ ತಿನ್ನುವ ಸೈಕ್ಲೋಪುಗಳನ್ನು ನಮ್ಮ ಮನಸ್ಸು ಕರುಣೆಯಿಂದ

---

೧೯೯೨ರಲ್ಲಿ ಪ್ರಕಟಗೊಂಡ ಟೋನಿ ಮಾರಿಸ್ಸನ್ ಅವರ 'ಪ್ಲೇಯಿಂಗ್ ಇನ್ ದಿ ಡಾರ್ಕ್' ವೈಟ್‌ನೆಸ್ ಅಂಡ್ ಲಿಟ್ರೆಸ್ಸಿ ಇಮ್ಯಾಜಿನೇಷನ್-ಎಂಬ ಪುಸ್ತಕದಿಂದ ಆಯ್ದುಕೊಂಡ ಲೇಖನದ ಭಾಗವೊಂದನ್ನು ಕನ್ನಡಕ್ಕೆ ಅನುವಾದಿಸಲಾಗಿದೆ.

ಹಿಂಡಿ ಹೋಗುವ ರೀತಿಯಲ್ಲಿ ಚಿತ್ರಿಸುತ್ತಾನೆ; ದಾಸ್ತೋವಸ್ಕಿ ಹಾಗೂ ಯುವರಾಜ ಮಿಶ್ಕಿನ್ ನಡುವಿನ ಬಾಂಧವ್ಯವನ್ನು ಬೆಸೆಯುವ ರೀತಿ; ಫ್ಯಾಲ್ಕನರ್ ಬೆನ್ಜಿ, ಜೇಮ್ಸ್‌ನ ಮೈಸಿ, ಫ್ಲಾಬರ್ಟ್‌ನ ಎಮಾ ಹಾಗೂ ಮೆಲ್ವಿಲ್‌ನ ಪಿಪ್, ಮೇರಿ ಶೆಲ್ಲಿಯ ಫ್ರ್ಯಾಂಕನ್‌ಸ್ಟೀನ್ ಪ್ರತಿಯೊಬ್ಬರಿಗೂ ಇಂತಹ ಹಲವಾರು ಉದಾಹರಣೆಗಳು ಹೊಳೆಯಬಹುದು.

ತನ್ನದಲ್ಲದ ಪ್ರಪಂಚಕ್ಕೆ ಕಾಲಿಡಲು ಒಬ್ಬ ಲೇಖಕನಿಗೆ ಹೇಗೆ ಸಾಧ್ಯವಾಗುತ್ತದೆ. ಅದರ ಹಿಂದೆ ಯಾವ ಪ್ರೇರೇಪಣೆ ಇರುತ್ತದೆ ಎಂಬುದು ನನಗೆ ಆಸಕ್ತಿ ಕೆರಳಿಸುವ ವಿಚಾರ. ಕಥೆಯೊಂದನ್ನು ಹೇಳಿದಾಗ ಬೇರೊಂದು ಜಗತ್ತಿಗೆ ಆಕ್ರಮಣ ಮಾಡುವಾಗ ಏನು ಅವಳನ್ನು ದುರ್ಬಲಗೊಳಿಸುತ್ತದೆ. ಅವಳ/ನ ಕಲ್ಪನೆಯ ಕೈಗಳಿಗೆ ಸಿಗದವನ್ನು ಹೇಗೆ ಅವನು/ಳು ಪಡೆಯಲು ಯತ್ನಿಸುತ್ತಾಳೆ/ನೆ? ಅಮೇರಿಕದಲ್ಲಿರುವ ಆಫ್ರಿಕದವಳಾಗಿ, ಜನಾಂಗೀಯತೆಯಿಂದ ತುಂಬಿರುವ ಈ ಸಮಾಜದಲ್ಲಿ, ಒಂದು ಹೆಣ್ಣಾಗಿ ನಾನೆಷ್ಟು ಸ್ವತಂತ್ರಳು ಎಂಬುದನ್ನು ನಾನಿಲ್ಲಿ ಚಿಂತಿಸಬೇಕಾಗುತ್ತದೆ. ನನ್ನ ಸಂದರ್ಭದ ಬಗ್ಗೆ ಯೋಚಿಸುವಾಗಲೆಲ್ಲಾ ಐತಿಹಾಸಿಕವಾಗಿ ಜನಾಂಗೀಯತೆಯಿಂದ ಕೂಡಿರುವ ಸಮಾಜದಲ್ಲಿ ಬರೆಯುತ್ತಾ ಬಂದ ಹಲವಾರು ಲೇಖಕರ ಬಗ್ಗೆ, ಅವರ ಕೃತಿಗಳ ಬಗ್ಗೆ ನನ್ನ ಆಲೋಚನೆಗಳು ಹೊರಳುತ್ತವೆ. ನನ್ನ ಪ್ರಕಾರ ಅವರು ಕೃತಿಗಳಲ್ಲಿ 'ಕಲ್ಪಿಸಿ'ಕೊಳ್ಳುವುದು ಎಂದರೆ ಕೇವಲ 'ನೋಡುವುದ'ಲ್ಲ, ಪರಕಾಯ ಪ್ರವೇಶವೂ ಅಲ್ಲ. ಒಂದು ಕೃತಿಗೋಸ್ಕರ ಬೇರೆಯವರಂತೆ 'ಆಗುವುದು'.

ನನ್ನ ಈ ಸಾಹಸ ನಿರಾಶೆಯಿಂದ ಅಲ್ಲ ಉತ್ಸಾಹದಿಂದ ಪ್ರಾರಂಭಿಸುತ್ತಿದ್ದೇನೆ. ಲೇಖಕರು ಅವರ ಸಾಮಾಜಿಕ ಹಿನ್ನೆಲೆಗಳನ್ನು ಹೇಗೆ ಭಾಷೆಯಾಗಿಸುತ್ತಾರೆ, ಬೇರೆಯವರ ಕಥೆಗಳನ್ನು ಅವರು ಹೇಳುವ ರೀತಿ, ಗುಪ್ತವಾಗಿ ಆ ಮೂಲಕ ನಡೆಸುವ ಕಾಳಗ, ಅದರೊಳಗೆ ಹುದುಗಿ ಹೋದ ವಾದ-ವಿವಾದಗಳು ನನಗೆ ಗೊತ್ತಿವೆ. ನನ್ನ ಹುಡುಕಾಟದ ಪ್ರೇರೇಪಣೆಯೂ ಇದೆ. ನಿಜವೆಂದರೆ ಆ ಲೇಖಕರಿಗೂ ಅವರೇನು ಮಾಡುತ್ತಿದ್ದಾರೆಂಬ ಪೂರ್ತಿಯಾದ ಅರಿವು ಇರುತ್ತದೆ.

ಸಾಂಪ್ರದಾಯಿಕವಾಗಿ ಒಪ್ಪಿಕೊಂಡು ಬಂದಂತಹ ಸಾಹಿತ್ಯ ಇತಿಹಾಸಕಾರರಿಂದ, ವಿಮರ್ಶಕರಿಂದ 'ಜ್ಞಾನ'ವೆಂದು ಅಂಗೀಕಾರ ಪಡೆದು ಬಂದಂತಹ ವಿಚಾರಗಳು ಎಷ್ಟು ನ್ಯಾಯಬದ್ಧವಾದುದು, ಅವರ ಬಲಹೀನತೆಗಳ ಬಗ್ಗೆ ಇತ್ತೀಚಿಗೆ ಆಲೋಚಿಸುತ್ತಿದ್ದೇನೆ. ಈ 'ಜ್ಞಾನ'ದ ಪ್ರಕಾರ ಸಾಂಪ್ರದಾಯಿಕವಾಗಿ, ಅಧಿಕೃತವಾಗಿ ಒಪ್ಪಿಕೊಳ್ಳಲಾದ ಅಮೇರಿಕನ್ ಸಾಹಿತ್ಯವು ನಾನೂರು ವರ್ಷಗಳ ಆಫ್ರಿಕಾದ ಜನರ, ಅಮೇರಿಕಾದಲ್ಲಿರುವ ಆಫ್ರಿಕಾ ಜನರ ಇರುವಿಕೆಯಿಂದ ಯಾವುದೇ ರೀತಿಯ ಪ್ರಭಾವಕ್ಕೆ ಒಳಗಾಗದೆ, ರೂಪಿತವಾಗದೆ ಸ್ವತಂತ್ರವಾಗಿ ಬೆಳೆದುಬಂದಿದೆ ಎಂದು ಹೇಳುತ್ತವೆ. ಈ ದೇಶದ ರಾಜಕೀಯ, ಸಂವಿಧಾನ, ಇಡೀ ಸಾಂಸ್ಕೃತಿಕ ಇತಿಹಾಸವನ್ನು ರೂಪಿಸಿದ ಈ ಜನರು ಈ ದೇಶದ ಸಾಹಿತ್ಯದ ಉಗಮ, ಬೆಳವಣಿಗೆಯಲ್ಲಿ ಯಾವುದೇ ಪಾತ್ರವಿಲ್ಲ ಹಾಗೂ ಪ್ರಾಮುಖ್ಯತೆ ಇಲ್ಲವೆಂದು ಇದು ತಿಳಿಸುತ್ತದೆ.

ಇಂತಹ 'ಜ್ಞಾನ' ನಮ್ಮ ರಾಷ್ಟ್ರದ ಸಾಹಿತ್ಯವು ಕಪ್ಪು ಜನರ ಬದುಕನ್ನು ಗಣನೆಗೆ ತೆಗೆದುಕೊಳ್ಳದೆ, ಒಂದು ನಿರ್ದಿಷ್ಟವಾದ 'ಅಮೇರಿಕತನ'ದಿಂದ ಹುಟ್ಟುಬಂದಿದೆ ಎಂದು ತಿಳಿಸುತ್ತದೆ.

ಸಾಹಿತ್ಯ ಪಂಡಿತರೆನಿಸಿಕೊಂಡವರ ನಡುವೆಯೆ ಒಂದು ರೀತಿಯಾದ ಒಳಒಪ್ಪಿಗೆ ಇರುವ ಹಾಗೆ ಗೋಚರವಾಗುತ್ತದೆ. ಅಮೇರಿಕಾದ ಸಾಹಿತ್ಯ ಬಿಳಿ ಗಂಡಸರ ಪಾಂಡಿತ್ಯ, ಅಭಿಪ್ರಾಯ,

ಅಧಿಕಾರದ ಆಸ್ತಿಯಾದುದರಿಂದ ಇದಕ್ಕೂ ಅಮೇರಿಕಾದಲ್ಲಿರುವ ಲಕ್ಷಾಂತರ ಕಪ್ಪು ಜನರ ಬದುಕಿಗೂ ಯಾವುದೇ ಸಂಬಂಧವಿಲ್ಲ. ಹಾಗೂ ಅದು ಕಪ್ಪು ಜನರಿಂದ ದೂರವಿದೆ ಎಂಬುದು ಸ್ಪಷ್ಟವಾಗುತ್ತದೆ. ಇಂತಹ ಒಳಒಪ್ಪಿಗೆಯಿಂದ ದೂರವಿಟ್ಟಿರುವ ಈ ಜನಾಂಗದವರು, ಪ್ರಖ್ಯಾತವೆನಿಸಿಕೊಂಡ ಪ್ರತಿಯೊಬ್ಬ ಅಮೇರಿಕಾದ ಬರಹಗಾರನಿಗಿಂತ ಮುಂಚೆಯೆ ಈ ನೆಲದಲ್ಲಿ ಬಂದು ಬಾಳಿದವರು. ನನ್ನ ಪ್ರಕಾರ ಇದು ಈ ದೇಶದ ಸಾಹಿತ್ಯಕ್ಕೆ ಪ್ರಬಲವಾದ ಪ್ರಭಾವ ಬೀರಿದೆ. ನಮ್ಮ ರಾಷ್ಟ್ರದ ಸಾಹಿತ್ಯದ ನನ್ನ ಚಿಂತನೆ, ಗ್ರಹಿಕೆಗೆ ಕಪ್ಪು ಜನರ ಬದುಕು ಕೇಂದ್ರಬಿಂದು. ಅವರನ್ನು ಸಾಹಿತ್ಯ ಲೋಕದ ಅಂಚಿನಲ್ಲಿರುವಂತೆ ಖಂಡಿತವಾಗಿ ಬಿಡಬಾರದು!

ಇವೆಲ್ಲಾ ನನ್ನಲ್ಲಿ ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕಿವೆ. ನಮ್ಮ ದೇಶದ ಸಾಹಿತ್ಯದ ಮುಖ್ಯ ಲಕ್ಷಣಗಳೆನಿಸಿಕೊಂಡ : ವ್ಯಕ್ತಿ ವಿಶಿಷ್ಟತೆ (Individualism), ಪೌರುಷ್ಯ, ಐತಿಹಾಸಿಕ ಪ್ರತ್ಯೇಕತೆ ಹಾಗೂ ಸಾಮಾಜಿಕ ಪ್ರಜ್ಞೆ, ಅತಿಯಾದ ನೈತಿಕ ದ್ವಂದ್ವಗಳು, ಮುಗ್ಧತೆ, ಸಾವು-ನರಕದ ರೂಪಕಗಳು : ಈ ಎಲ್ಲಾ ನಿರಂತರವಾದ ಕಪ್ಪು ಜನರ ಇರುವಿಕೆಗೆ ಬಂದಂತಹ ಪ್ರತಿಕ್ರಿಯೆಗಳೆ? ಅಮೇರಿಕಾ ಸಾಹಿತ್ಯ ತನ್ನನ್ನು ತಾನೆ ಒಂದು ಪ್ರತ್ಯೇಕ ಅಸ್ತಿತ್ವ ಉಳ್ಳ ಸಾಹಿತ್ಯವೆಂದು ಘೋಷಿಸಿಕೊಳ್ಳುವ ಹಿಂದೆ ಸದಾ ಪ್ರಚೋದನೆಯನ್ನು ನೀಡುವ ಈ ಕಪ್ಪು ಜನಾಂಗದವರಿದ್ದಾರೆಯೆ ಎಂದು ನನಗೆ ಬಹಳಷ್ಟು ಅನಿಸಿದೆ.

ದೇಶದ ರಚನೆಯನ್ನು ಮಾಡುವಾಗ ಆಂತರಿಕವಾಗಿದ್ದ ಜನಾಂಗೀಯತೆಯನ್ನು ಮೋಸದಿಂದ ಕಾಪಾಡಿಕೊಳ್ಳಲು ತನ್ನದೆ ಆದ ಭಾಷೆ, ನಿರ್ಬಂಧನೆಗಳನ್ನು ಜಾರಿಗೆ ತಂದ ಈ ದೇಶ ತನ್ನ ಮನದಾಳದಲ್ಲಿ ಒಂದು ರೀತಿಯ ನೈತಿಕ ಅಸ್ಥಿರತೆಯನ್ನು ಹೊಂದಿದೆ. ೨೦ನೇ ಶತಮಾನದಲ್ಲೂ ಇದರ ಮುಂದುವರಿಕೆಯಾಗಿ ತನ್ನ ಸಾಹಿತ್ಯದಲ್ಲಿ ನಿಯಮ-ನಿರ್ಬಂಧನಗಳನ್ನು ಉಳಿಸಿಕೊಂಡು ಬಂದಿವೆ. ಗುಪ್ತವಾಗಿ ಆಗಿ ಅದರ ಪ್ರಮುಖವಾದ ಕೆಲವು ವಿಚಾರಗಳನ್ನು ಸೇರಿಸಿಕೊಳ್ಳದಿರುವ ಮೂಲಕ, ದಿಗ್ಭ್ರಮೆ ಮೂಡಿಸುವಂತಹ ವಿರೋಧಭಾಸಗಳು, ಸೂಕ್ಷ್ಮ ತಿಕ್ಕಾಟಗಳ, ಕಪ್ಪು ಜನರ ದೇಹ ಹಾಗೂ ಚಿಹ್ನೆಗಳ ಮೂಲಕ ಅವರದೇ ಆದ 'ಅಮೇರಿಕತನ'ದ ಪ್ರಜ್ಞೆಯಲ್ಲಿ ಒಂದು ನಿಜವಾದ ಒಮ್ಮೊಮ್ಮೆ ಸೃಷ್ಟಿಸಿದ 'ಆಫ್ರಿಕತನ'ದ ಉಗಮವಾಯಿತು ಎಂದು ಸ್ಪಷ್ಟವಾಗುತ್ತದೆ. ಹೀಗೆ ಸಾಹಿತ್ಯದಲ್ಲಿ ಜೋಪಾನವಾಗಿ ಸೃಷ್ಟಿಸಿದ ಆಫ್ರಿಕಾ ಜನರ ಬದುಕಿನ ಬಳಕೆ, ಆ ಬಳಕೆಯ ಮೂಲಗಳ ಕುರಿತಾದ ನನ್ನ ಕುತೂಹಲ 'ಅಮೇರಿಕಾದ ಆಫ್ರಿಕತನ' (American Africianism)ದ 'ಆಫ್ರಿಕನ್ ಅಮೇರಿಕನಿಸಂ' ಬಗ್ಗೆ ಒಂದು ಅಧ್ಯಯನವಾಗಿ ಮಟ್ಟುಕೊಂಡಿದೆ. 'ಅಮೇರಿಕದ ಆಫ್ರಿಕತನ'ವೆಂಬ ಈ ಅಧ್ಯಯನ ಬಿಳಿಯರಲ್ಲದ, ಆಫ್ರಿಕ ಜನರಂತಹ ಬದುಕನ್ನು ಅವರ ಇರುವಿಕೆಯನ್ನು ಯಾವ ರೀತಿ ಅಮೇರಿಕಾ ಸಾಹಿತ್ಯ ಕಟ್ಟಿಕೊಡುವ ರೀತಿಗಳ ಶೋಧನೆಯಲ್ಲಿದೆ, ಈ ರೀತಿಯ ಕಾಲ್ಪನಿಕ ಬಳಕೆಗಳು ಯಾವ ಉದ್ದೇಶವನ್ನು ಪೂರೈಸುತ್ತದೆ ಎಂಬುದನ್ನು ವಿಶ್ಲೇಷಿಸುತ್ತದೆ. 'ಆಫ್ರಿಕನಿಸಂ'/ 'ಆಫ್ರಿಕತನ' ಎಂದಾಗ ನಾನಿಲ್ಲಿ ಆಫ್ರಿಕಾದಲ್ಲಿರುವ ವಿಶಾಲ ಜ್ಞಾನದ ಬಗ್ಗೆ ತತ್ವಜ್ಞಾನಿ ವಾಲೆನ್‌ಟೈನ್ ಮುಡಿಂಬೆ ಹೇಳಿರುವ ರೀತಿಯಲ್ಲಿ ಹೇಳುತ್ತಿಲ್ಲ ಅಥವಾ ಈ ದೇಶದಲ್ಲಿ ನೆಲಸಲು ಬಂದ ಆಫ್ರಿಕಾ ಜನರು, ಅವರ ಪೀಳಿಗೆಗಳು ಹೊಂದಿರುವ ವೈವಿಧ್ಯತೆ, ಸಂಕೀರ್ಣತೆಯನ್ನು ನಾನಿಲ್ಲಿ ಸೂಚಿಸುತ್ತಿಲ್ಲ. ಇಲ್ಲಿ ಆಫ್ರಿಕಾದ ಜನರ ಕಪ್ಪುತನದ ಬಗ್ಗೆ ಯೂರೋಪ್ ಕೇಂದ್ರಿತವಾದ ಅಭಿಪ್ರಾಯಗಳು, ಕಪ್ಪು ಕಲ್ಪನೆಗಳನ್ನು ಹುಟ್ಟುಹಾಕುವ ಅರ್ಥಗಳನ್ನು, ಸೂಚನೆಗಳನ್ನು ನಾನಿಲ್ಲಿ ಚರ್ಚಿಸಲು ಇಚ್ಛಿಸುತ್ತೇನೆ.

‘ಕಪ್ಪತನ’ವನ್ನು ಸಾಂಕೇತಿಕವಾಗಿ ಸಾಹಿತ್ಯದಲ್ಲಿ ಮಿತಿಗಳಿಲ್ಲದೆ ಬಳಸಿರುವುದನ್ನು ನಾವು ಕಾಣಬಹುದು. ಆಫ್ರಿಕನ್ ಅಮೇರಿಕನಿಸಂ ತನಗನುಕೂಲವಾಗುವ ರೀತಿಯಲ್ಲಿ, ಒಮ್ಮೊಮ್ಮೆ ಸರಳೀಕರಿಸಿ, ಒಮ್ಮೊಮ್ಮೆ ಭೀಕರವಾಗಿ ಕಲಾವಿದನೊಬ್ಬ ಬಣ್ಣಗಳನ್ನು ಬೆರೆಸಿ ಚಿತ್ರಗಳನ್ನು ಬಿಡಿಸುವಂತೆ ಆಫ್ರಿಕಾದ ಜನರ ಕುರಿತಾದ ವಿಚಾರಗಳನ್ನು ಹೇಳಲು, ಹೇಳದಿರಲು, ಬರೆಯಲು, ಬರೆಯದಿರಲು, ತಪ್ಪಿಸಿಕೊಳ್ಳಲು, ಸಂವಾದಕ್ಕೆ ಇಳಿಯಲು, ಐತಿಹಾಸಿಕಗೊಳಿಸಲು, ಗೊಳಿಸದಿರಲು ನಿರ್ಧರಿಸುತ್ತದೆ. ಇಂತಹ ಬಳಕೆಗಳನ್ನು ಒಟ್ಟಾರೆಯಾಗಿ ನಾಗರಿಕತೆ, ಬಯಕೆ, ಭಯಗಳ ಕುರಿತಾಗಿ ಪುನರಾಲೋಚನೆ ಮಾಡಲು ಹಾದಿಯನ್ನು ಹಾಕಿಕೊಟ್ಟಿದೆ. ಸ್ವತಂತ್ರ್ಯವೆಂಬುದು ತಂದುಕೊಡುವ ಸುಖ, ಸಮಸ್ಯೆಗಳನ್ನು ಪರಿಶೀಲಿಸಲು ಒಂದು ಅಸ್ತ್ರವಾಗಿ ಇದು ಫಲಿಸಿದೆ.

ಈ ರೀತಿಯಲ್ಲಿ ‘ಆಫ್ರಿಕನಿಸಂ’ನ್ನು ಸೃಷ್ಟಿ ಮಾಡುವಲ್ಲಿ ಅಮೇರಿಕವೊಂದೆ ಮೇಲ್ಗೈಯಿ ಸಾಧಿಸಿಲ್ಲ. ದಕ್ಷಿಣ ಅಮೇರಿಕ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಸ್ಪೈನ್‌ಗಳ ಸಂಸ್ಕೃತಿಗಳು ಈ ‘ಸೃಷ್ಟಿಸಿರುವ ಆಫ್ರಿಕಾವ’ ತಯಾರಿಗೆ ಅಪಾರ ಕೊಡುಗೆ ನೀಡಿ, ಸಕ್ರಿಯವಾಗಿ ಭಾಗವಹಿಸಿವೆ. ಇವೆಲ್ಲಾ ದೇಶಗಳೂ, ಈ ಅಧಿಕಾರವೆಂಬುದರ ಆಚೆಯೂ ಜ್ಞಾನವೆಂಬುದು ಇರಲು ಸಾಧ್ಯ ಎಂದು ತಿಳಿಯಲು ಸೋತಿವೆ. ಯುರೋಪಿನವರು, ಯುರೋಪಿಕರಣಗೊಂಡಿರುವವರು ಹಂಚಿಕೊಂಡಿರುವ ಈ ಪ್ರತ್ಯೇಕವಾದ ಒಂದು ರೀತಿಯಲ್ಲಿ ಕಪ್ಪು ಜನರಿಗೆ ಒಂದು ನಿರ್ದಿಷ್ಟ ಪಾತ್ರ ಹಾಗೂ ಮೌಲ್ಯವನ್ನು ಕೊಟ್ಟಿದೆ. ಹೀಗಾಗಿ ಜನಪ್ರಿಯವಾಗಿ, ಪಾಂಡಿತ್ಯ ವಲಯಗಳಲ್ಲಿ, ‘ಜನಾಂಗೀಯತೆ’ ಎಂಬುದು ತೀರಾ ನೈಜವಾದ, ಆದರೆ ಕಿರಿಕಿರಿ ತರುವಂತಹ ವಿಚಾರವೆನಿಸಿಕೊಳ್ಳುತ್ತದೆ. ಇಂದು ಈ ದೇಶಗಳ ಸಾಹಿತ್ಯವನ್ನು ಮರು ಓದಿಗೆ, ವಿಮರ್ಶೆಗೆ ಒಳಪಡಿಸಲಾಗುತ್ತಿದೆ. ಆದರೆ ಅಮೇರಿಕ ಸ್ವಲ್ಪ ಭಿನ್ನ. ಕಪ್ಪು ಜನರನ್ನುಳ್ಳ ಅತಿ ಹಳೆಯ ಪ್ರಜಾಪ್ರಭುತ್ವ ಅಮೇರಿಕವಾದರೂ, ಬಿಳಿಯರಿಗಿಂತ ಮೊದಲೇ ಕಪ್ಪು ಜನರು ಬಂದು ನೆಲೆಸಿದಂತಹ ದೇಶವಾದರೂ ಅಮೇರಿಕ ಭಿನ್ನವಾಗಿದೆ. ಆಫ್ರಿಕಾ ಹಾಗೂ ಅಮೇರಿಕದಲ್ಲಿರುವ ಆಫ್ರಿಕಾ ಜನರ ಬಗ್ಗೆ ಯಾವುದೇ ಅರಿವು, ಅವರನ್ನು ತಿಳಿದುಕೊಳ್ಳುವ ಕುತೂಹಲ, ಮುಕ್ತ ಮನಸ್ಸು ಇರದೆ ಇರುವುದು ಅಮೇರಿಕದಲ್ಲಿ ಕಾಣುತ್ತೇವೆ. ತಾತ್ವಿಕ ಹಾಗೂ ದಮನಕಾರಿ ಸಾಮ್ರಾಜ್ಯಶಾಹಿ ಧೋರಣೆಗಳ ಫಲವಾಗಿ ಅಮೇರಿಕದಲ್ಲಿ ತನ್ನದೆ ಆದ ಆಫ್ರಿಕನ್ ಅಮೇರಿಕನಿಸಂ ಇರುವುದನ್ನು ನಾವು ಕಾಣಬಹುದು. ಇನ್ನೂ ಯುರೋಪಿನ ಸಂಸ್ಕೃತಿಗಳು ಎಲ್ಲೆಡೆ ಹರಡಿ ಹೋಗಿದ್ದವು ಹಾಗೂ ಹೊಸ ದೇಶಗಳ ಅನನ್ಯತೆಗಳನ್ನು ವೈಭವೀಕರಿಸುವಂತಹ ಹಂತವನ್ನು ತಲುಪಿರಲಿಲ್ಲ. ಆದರೆ ಆಗಲೇ ಅಮೇರಿಕದ ಪ್ರಭುತ್ವಕ್ಕೆ ಮುಖ್ಯವೆನಿಸಿದ ಕಾರಣಗಳಾದ ಅಮೇರಿಕನ್ ಆಫ್ರಿಕನಿಸಂನ್ನು ಕಟ್ಟಿಕೊಂಡು ಒಂದು ಹೊಸ ಸಾಂಸ್ಕೃತಿಕ ದಬ್ಬಾಳಿಕೆಯನ್ನು ಕಾರ್ಯಗತಗೊಳಿಸಲಾಗಿತ್ತು.

ಆಫ್ರಿಕನ್-ಅಮೆರಿಕನ್ ಅಧ್ಯಯನಗಳನ್ನು ಇನ್ನಾವುದೊ ಬೇರೆ ಸ್ತರಕ್ಕೆ ತರಲು ಇಲ್ಲಿ ಪ್ರಯತ್ನಿಸಲಾಗುತ್ತಿದೆ ಎಂದು ತಿಳಿಯುವುದು ಬೇಡ. ಏಕೆಂದರೆ, ಒಂದು ಶ್ರೇಣೀಕರದ ಜಾಗದಲ್ಲಿ ಇನ್ನೊಂದನ್ನು ಸ್ಥಾಪಿಸಲು ನನಗೆ ಇಷ್ಟವಿಲ್ಲ. ಪ್ರಬಲವಾದ ಯುರೋಪ್ ಕೇಂದ್ರಿತ ಪಾಂಡಿತ್ಯದ ಜಾಗದಲ್ಲಿ ಅದೇ ರೀತಿಯ ಪ್ರಬಲವಾದ ಆಫ್ರಿಕನ್ ಪಾಂಡಿತ್ಯವನ್ನು ಸ್ಥಾಪಿಸುವ, ಸಮಾನಿಕರಿಸುವ ಆಫ್ರಿಕನ್-ಅಮೇರಿಕನ್ ಪಾಂಡಿತ್ಯವನ್ನು ಪ್ರೋತ್ಸಾಹಿಸುವುದು ನನ್ನ ಉದ್ದೇಶವಲ್ಲ. ಇಲ್ಲಿ ಬೌದ್ಧಿಕ

ಪ್ರಾಬಲ್ಯತೆ ಹೇಗೆ ಸೃಷ್ಟಿಯಾಗುತ್ತದೆ, ಆಕ್ರಮಣವೆಂಬುದು ಜ್ಞಾನವೆಂಬುದನ್ನು ಹೇಗೆ 'ಆಯ್ಕೆ'ಯಿಂದಾಗಿ ಮಾರ್ಪಡಿಸುತ್ತದೆ, ವಿಮರ್ಶೆಯ ಪ್ರಮಾಣಗಳನ್ನು ಯಾವ ಶಕ್ತಿಗಳು ಸ್ಥಾಪಿಸುತ್ತವೆ ಎಂಬುದು ಆಸಕ್ತಿ ಕೆರಳಿಸುವಂತಹ ವಿಚಾರಗಳಾಗಿವೆ.

ವಿಮರ್ಶೆಯಲ್ಲಿ ಹುದುಗಿಕೊಂಡ ವಿಚಾರಗಳು ಹೇಗೆ ಸೋಗು ಹಾಕಿಕೊಂಡು, ಆ ಮೂಲಕ ಸಾಹಿತ್ಯದ ಅಧ್ಯಯನವನ್ನೆ ಬಡವಾಗಿಸುತ್ತವೆ ಎಂಬುದನ್ನು ನಾನಿಲ್ಲಿ ಚರ್ಚಿಸಲು ಇಚ್ಛಿಸುತ್ತೇನೆ. ವಿಮರ್ಶೆಯೆಂಬುದು ಸಾಹಿತ್ಯದೊಳಗೆ ಅಡಕವಾಗಿರುವ ಹಾಗೂ ಹೊರನೋಟಕ್ಕೆ ಸಿಗುವಂತಹ ತತ್ವಗಳನ್ನು ಮರೆಮಾಚುವುದಲ್ಲದೆ ಸಾಹಿತ್ಯದೊಳಗಿನ ಕಲ್ಪನೆ, ವಿಚಾರಗಳನ್ನು ದೂರ_ಸುವಂತೆ ಮಾಡಬಹುದು. ಒಂದು ಕೃತಿಯ ಸೃಷ್ಟಿಯ ಹಿಂದಿರುವ ಬರಹಗಾರನ ಪರಿಶ್ರಮವನ್ನು ವಿಮರ್ಶೆ ನಿರಾಕರಿಸಬಲ್ಲದು. ಆಫ್ರಿಕನಿಸಂ ಎಂಬುದು ಹೇಗೆ ತಪ್ಪಿಸಿಗೊಳ್ಳಲಾಗದಂತಹ ವಿಚಾರವೆಂಬುದನ್ನು ಅಥವಾ ಸಾಹಿತ್ಯ ವಿಮರ್ಶೆಯ ಅವಿಭಾಜ್ಯ ಅಂಗವೆಂಬುದನ್ನು ತಿಳಿಯಬೇಕಾಗಿದೆ. ಅದರ ಇರುವಿಕೆಯನ್ನು ಅಳಿಸಿಹಾಕಲು ನಡೆಸುವ ಪ್ರಯತ್ನಗಳ ಗಂಭೀರ ಪರಿಶೀಲನೆಯಾಗಬೇಕಾಗಿದೆ.

'ಆಫ್ರಿಕನಿಸಂ' ಯಾವುದರ ಸಂಕೇತವಾಗಿದೆ, ಸಾಹಿತ್ಯ ಕಲ್ಪನೆಯಲ್ಲಿ ಅದರ ಪಾತ್ರವೇನೆಂಬುದನ್ನು ತಿಳಿಯುವುದು ಅತಿ ಮುಖ್ಯವಾಗಿದೆ. ಕಾರಣ, ಸಾಹಿತ್ಯದಲ್ಲಿ 'ಕಪ್ಪುತನ'ದ ಈ ಅಧ್ಯಯನ 'ಬಿಳಿತನ'ವನ್ನು, ಅದರ ಹಿಂದಿನ ಕಾರಣಗಳನ್ನು ತೆರೆದಿಡುತ್ತದೆ. 'ಬಿಳಿತನ'ವೆಂಬುದರ ಉಗಮ, ಬೆಳವಣಿಗೆ 'ಅಮೇರಿಕನ್' ಅನನ್ಯತೆಯಲ್ಲಿ ವಹಿಸುವ ಪಾತ್ರದ ಶೋಧನೆ ಅಮೇರಿಕದ ಸಾಹಿತ್ಯದ ಆಳ ಅಧ್ಯಯನಕ್ಕೆ ಸಹಾಯಕಾರಿಯಾಗುತ್ತದೆ. ಇಂತಹ ಅಧ್ಯಯನಗಳು ಈವರೆಗೂ ಸಾಧ್ಯವಾಗಿಲ್ಲ. ಕಾರಣ, ಇದನ್ನು ಕುರಿತಾಗಿ ಸಾಹಿತ್ಯ ವಿಮರ್ಶೆಯಲ್ಲೆ ಕಾಣುವ ಉದಾಸೀನ ಧೋರಣೆ.

ಜನಾಂಗೀಯತೆಯ ವಿಚಾರಗಳನ್ನು ಕುರಿತಾದ ವಿಮರ್ಶಾತ್ಮಕ ಬರವಣಿಗೆಗಳ ಅಭಾವವಿದೆ. ಸಾಹಿತ್ಯದಲ್ಲಿ ಐತಿಹಾಸಿಕವಾಗಿ ಜನಾಂಗೀಯತೆಯಿಂದ ಉಪಾಯವಾಗಿ ನುಣುಚಿಕೊಂಡಂತಹ ನೆಪಗಳನ್ನು ಕಾಣುತ್ತೇವೆ ಇಲ್ಲವೆ ಅದರ ಕುರಿತಾದ ಮೌನವನ್ನು ಕಾಣುತ್ತೇವೆ. ಹೀಗೆ ಹುಟ್ಟಿ ಬಂದ ಭಾಷೆಯ, ಜನಾಂಗೀಯತೆಯ ಕುರಿತಂತೆ ಮುಕ್ತವಾದ ಸಂವಾದವನ್ನು ಮುಚ್ಚಿಹಾಕುವ, ವಿಚಾರಗಳನ್ನು ಇನ್ನಾವುದೊ ರೀತಿಯಲ್ಲಿ ಸೂಚಿಸುವ ಮಾರ್ಗ ಹಿಡಿಯುವುದನ್ನು ನೋಡುತ್ತೇವೆ. ಮೇಲಾಗಿ ಜನಾಂಗೀಯತೆಯನ್ನು ಅಲಕ್ಷಿಸುವುದು ಒಂದು ರೀತಿಯ ಉದಾರ ಮನೋಭಾವ ಹಾಗೂ ಧಾರಾಳತನವೆಂದೂ ತಿಳಿಯಲಾಗುತ್ತದೆ. ಅದನ್ನು ಗುರುತಿಸಿದರೆ, ಈಗಾಗಲೆ ಹೊರಗೆಸೆದಿರುವ ಭಿನ್ನತೆಯನ್ನು ಗುರುತಿಸಿದ ಸಣ್ಣತನವಾಗುತ್ತದೆ. ಮೌನದ ಮೂಲಕ, ಕಪ್ಪು ಜನರ ಅಸ್ತಿತ್ವವನ್ನೆ ಇಲ್ಲವಾಗಿಸುವುದನ್ನು ಪ್ರಬಲ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಇವರ ತರ್ಕದಂತೆ ಒಳ್ಳೆಯ ಸಂಸ್ಕಾರಕ್ಕೊಳಗಾದ ಮನಸ್ಸು ಕಪ್ಪುತನದ ಗುರುತಿಸುವಿಕೆಯ ವಿರುದ್ಧ ಮಾತನಾಡುತ್ತದೆ ಹಾಗೂ ಒಂದು ಗಂಭೀರ ಸಂವಾದದ ಸಾಧ್ಯತೆಯನ್ನು ಮುಚ್ಚಿಹಾಕುತ್ತದೆ. ಈ ರೀತಿಯ ಸಾಹಿತ್ಯ ಪರಿಕಲ್ಪನೆಗಳು, ಪಾಂಡಿತ್ಯವು ಅಮೇರಿಕಾದ ಅತ್ಯಂತ ಅದ್ಭುತವಾದ ಬರಹಗಾರರ ಕೃತಿಗಳನ್ನು ಕೊಂದಿವೆ, ಆ ಕೃತಿಗಳಲ್ಲಿರುವ ಅತ್ಯಮೂಲ್ಯ ಒಳನೋಟಗಳನ್ನು ಅಗೋಚರಗೊಳಿಸಿವೆ.

೧೯೩೬ರಲ್ಲಿ ಎಡಗರ್ ಅಲ್ಲಾನ್ ಪೊವಿನ ಕೃತಿಗಳಲ್ಲಿ ನಿಗ್ರೋ ಭಾಷೆಯ ಬಳಕೆಯ ಬಗ್ಗೆ ವಿಶ್ಲೇಷಿಸುವ ಒಬ್ಬ ಅಮೇರಿಕನ್ ವಿಮರ್ಶಕ ಹೀಗೆನ್ನುತ್ತಾನೆ: 'ದಕ್ಷಿಣ ಪ್ರದೇಶದಲ್ಲಿ ಅವನು

ಬೆಳೆದು ಬಂದವನಾದರೂ, ರಿಚ್ಮಂಡ್ ಹಾಗೂ ಬಾಲ್ಟಿಮೋರಿನಲ್ಲಿ ತನ್ನ ಜೀವನದ ಮುಖ್ಯ ಸಮಯವನ್ನು ಕಳೆದನಾದರೂ, ಕರಿಯರ ಬಗ್ಗೆ ಅವನೇನೂ ಹೆಚ್ಚು ಹೇಳುವುದಿಲ್ಲ' ಈ ವಾಕ್ಯದಲ್ಲಿ 'ನಿಗ್ಗರ್' ಪದಕ್ಕೆ ಅಂದು ಉಪಯೋಗಿಸಲಾಗುತ್ತಿದ್ದ ಹೆಚ್ಚು ಗೌರವಾನ್ವಿತ ಪದವಾದ 'ಕರಿಯ' ಪದದ ಬಳಕೆ ಇದೆ. ೩೦ನೇ ದಶಕಕ್ಕೆ ಹಿಂತಿರುಗಿ ಈ ರೀತಿಯ ತಪ್ಪುಗಳನ್ನು ಹುಡುಕುವುದು ಅಷ್ಟೇನು ಸರಿಯಲ್ಲವೆನಿಸಿದರೂ ಇಂತಹದ್ದೆ ಉದಾಹರಣೆ ಇಂದಿನ ಸಾಹಿತ್ಯದಲ್ಲೂ ಸಾಮಾನ್ಯವೆಂದು ನಾನು ಅನುಮಾನವಿಲ್ಲದೆ ಹೇಳಬಲ್ಲೆ.

ಅಮೇರಿಕಾದ ಸಾಹಿತ್ಯ ವಿಮರ್ಶೆಯಲ್ಲಿ ಆಫ್ರಿಕಾದ ಜನರ ಇರುವಿಕೆ, ಅದರ ಪ್ರಭಾವದ ಬಗ್ಗೆ ಇರುವ ಮೌನ ಕುರಿತಾದ ಹಾಗೂ ಶೋಷಿತರ ಮೇಲೆ ಜನಾಂಗೀಯತೆಯ ಪರಿಣಾಮಗಳನ್ನು ಕುರಿತಾದ ಚಿಂತನಾ ವಿಧಾನವಿರುವುದನ್ನು ಕಾಣಬಹುದು. ಅದರಿಂದಾಗುವ ಭೀಕರ ಪರಿಣಾಮದ ಬಗ್ಗೆ ಸಾಕಷ್ಟು ವಿಶ್ಲೇಷಣೆಯಾಗಿದೆ. ನಿರಂತರವಾಗಿ ಜನಾಂಗೀಯತೆಯಿಂದ ಮುಕ್ತರಾಗಲು ಬೇಕಾದ ಕಾನೂನನ್ನು ಜಾರಿಗೆ ತರುವ ಪ್ರಯತ್ನಗಳಾಗಿವೆ. ಜನಾಂಗೀಯತೆಯ ಉಗಮ, ರಚನೆ ಕುರಿತಾದ ಪ್ರಭಾವಶಾಲಿ ವಾದಗಳನ್ನು ಕಾಣಬಹುದು.

ಜನಾಂಗೀಯತೆ ಅನಿವಾರ್ಯ, ಅಮರವೆಂಬ ವಾದಗಳ ವಿರುದ್ಧದ ವಿಶ್ಲೇಷಣೆಯನ್ನು ನಾವು ಕಾಣಬಹುದು. ಈ ವಿಶ್ಲೇಷಣೆಯ ಪ್ರಾಮುಖ್ಯತೆಯನ್ನು ನಾನಿಲ್ಲಿ ಅಲ್ಲಗಳೆಯಲು ಇಚ್ಛಿಸುತ್ತಿಲ್ಲ. ವರ್ಣಬೇಧದ ಬಗ್ಗೆ ಯಾವುದೇ ಪ್ರಗತಿಪರ ಹೆಜ್ಜೆಗಳು ಸಾಧ್ಯವಾಗಿದ್ದರೆ, ಅದು ಈ ವಿಶ್ಲೇಷಣೆಯ ಮೂಲಕವೇ ಆಗಿದೆ ಎಂಬುದರಲ್ಲಿ ಅನುಮಾನವಿಲ್ಲ. ಇದರೊಡನೆ ಅಷ್ಟೇ ಪ್ರಮುಖವಾದ ಇನ್ನೊಂದು ವಿಶ್ಲೇಷಣೆ ಆಗಬೇಕಾಗಿದೆ : ವರ್ಣಭೇದವನ್ನು, ಜನಾಂಗೀಯತೆಯನ್ನು ಜೀವಂತವಾಗಿಡುವ ಅದನ್ನು ಜಾರಿಯಲ್ಲಿರಿಸುವ ಜನರ ಮೇಲೆ ಅದರ ಪರಿಣಾಮದ ವಿಶ್ಲೇಷಣೆ, ಜನಾಂಗೀಯತೆಯ ಶ್ರೇಣೀಕರಣ, ವರ್ಣಗಳ ಪ್ರತ್ಯೇಕತೆ, ಜನಾಂಗೀಯ ಬಲಹೀನತೆಯ ಸಿದ್ಧಾಂತಗಳು ಬಿಳಿಯರಲ್ಲಿ ಮೇಲೆ ಮಾಡಿರುವ ಪರಿಣಾಮವನ್ನು ಪರಿಶೋಧಿಸಬೇಕಾಗಿದೆ. ವರ್ಣಭೇದವನ್ನು ವಿರೋಧಿಸಿದ, ಶೋಧಿಸಿದ, ಅವರ ಪರಿಕಲ್ಪನೆಗಳನ್ನು ಬದಲಾಯಿಸಲು ಯತ್ನಿಸಿದ ಕಪ್ಪು ಜನರಲ್ಲದ ಇನ್ನಿತರರ ಮನಸ್ಸುಗಳನ್ನು ನಾವು ಗಂಭೀರ ಅಧ್ಯಯನಕ್ಕೆ ಒಳಪಡಿಸಬೇಕು. ಗುಲಾಮರ ಮನಸ್ಸು, ಭಾವನಾಶಕ್ತಿ, ಸ್ವಭಾವಗಳ ಅಧ್ಯಯನ ಬಹಳ ಅಮೂಲ್ಯವೇನೋ ಸರಿ. ಆದರೆ ಅಷ್ಟೆ ಅಮೂಲ್ಯವಾದುದು ವರ್ಣಭೇದ, ಜನಾಂಗೀಯತೆಯ ಸಿದ್ಧಾಂತಗಳು ಮಾಲೀಕರ ಮೇಲೆ ನಡೆಸಿದ ಪರಿಣಾಮದ ಗಂಭೀರ ವಿಶ್ಲೇಷಣೆ.

ಈ ವಿಚಾರಗಳನ್ನು ಕುರಿತು ಈಗಾಗಲೇ ಕೆಲವು ಇತಿಹಾಸಕಾರರು, ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಮನಶಾಸ್ತ್ರಜ್ಞರು ಹಾಗೂ ತುಲನಾತ್ಮಕ ಸಾಹಿತ್ಯ ವಿದ್ಯಾರ್ಥಿಗಳು ಅಧ್ಯಯನ ನಡೆಸುತ್ತಿದ್ದಾರೆ. ಹಲವಾರು ರಾಷ್ಟ್ರಗಳಲ್ಲಿ ಈ ರೀತಿಯ ಸಾಹಿತ್ಯ ಅಧ್ಯಯನವು ಪ್ರಾರಂಭವಾಗಿದೆ. ಇದೇ ರೀತಿಯ ಪ್ರಯತ್ನಗಳು ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಜರೂರಾಗಿ ಆಗಬೇಕಾಗಿದೆ. ಕಾರಣ ಜಗತ್ತಿನ ಅತ್ಯಂತ ಚೈತನ್ಯಶಾಲಿ ಆಫ್ರಿಕನ್ ಜನರು ಈ ಭೂಪ್ರದೇಶದಲ್ಲಿ ಬಾಳುತ್ತಾ ಬಂದಿದ್ದಾರೆ. ಆಫ್ರಿಕನ್ ಜನರು ಕುತೂಹಲಕಾರಿಯಾಗಿ ತನ್ನ ಸುತ್ತಲಿನ ಜಗತ್ತಿನೊಡನೆ ಬಾಂಧವ್ಯಗಳನ್ನು ಬೆಸೆದುಕೊಂಡು, ಭಿನ್ನವಾದ ಅಸ್ತಿತ್ವವನ್ನು ಹೊಂದಿಕೊಂಡಿದ್ದಾರೆ. ಜನಾಂಗೀಯತೆಯ ಮಾತು

ಬಂದಾಗಲೆಲ್ಲಾ ಅದರ ಬಗ್ಗೆ ಗಮನವಹಿಸಿ ಬಂದ ಪ್ರತಿಕ್ರಿಯೆ, ಮಾನವೀಯತೆಯ ಹುಸಿ ಉತ್ತರಗಳು, ಇಲ್ಲವೆ 'ರಾಜಕೀಯ' ಹಣೆಪಟ್ಟಿಯ ಕೆಳಗೆ ನಿರಾಕರಣೆ.

ನಾನೊಬ್ಬಳು ಆಫ್ರಿಕನ್ ಅಮೇರಿಕನ್ ಆದ ಕಾರಣ ನನ್ನ ಈ ಅನ್ವೇಷಣೆ ಸ್ವಾರ್ಥದಿಂದ ಕೂಡಿದೆ ಎಂದು ಹೇಳಿಸಿಕೊಳ್ಳಬಹುದು ಎಂದು ನನಗೆ ಗೊತ್ತಿದೆ. ಕೇವಲ ಬರಹಗಾರಳಾಗಿ ಅಲ್ಲದೆ ಬೇರೆ ಲಾಭಗಳನ್ನು ನಾನು ಈ ವಾದಗಳ ಮೂಲಕ ಪಡೆಯಲು ಪ್ರಯತ್ನಿಸುತ್ತಿದ್ದೇನೆಂಬ ಆರೋಪಗಳು ನನ್ನ ಮೇಲೆ ಬರಲೂಬಹುದು. ಈ ಎಲ್ಲಾ ಆರೋಪಗಳ ಸಾಧ್ಯತೆಗಳಲ್ಲಿ ನನ್ನನ್ನು ನಾನೇ ಒಡ್ಡಿಕೊಳ್ಳಲು ಸಿದ್ಧಳಾಗಿದ್ದೇನೆ. ಕಾರಣ, ನನಗೆ ಈ ಅಧ್ಯಯನದ ಹಿಂದಿನ ಉದ್ದೇಶ ತೀರಾ ಮುಖ್ಯವಾದುದು. ಅಮೇರಿಕದಲ್ಲಿರುವ ಕಪ್ಪು ಹಾಗೂ ಬಿಳಿ ಲೇಖಕರು ಜನಾಂಗೀಯತೆಯಿಂದ ಕೂಡಿದ ಭಾಷೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇಂತಹ ಭಾಷೆಯ ಜಾಲದಿಂದ ತಮ್ಮ ಕಲ್ಪನಾ ಶಕ್ತಿ ಕುಂಟಿತವಾಗದಿರಲು ಲೇಖಕರು ನಡೆಸುವ ಪ್ರಯತ್ನಗಳು ಸಂಕೀರ್ಣ, ನಿರ್ದಿಷ್ಟ ಹಾಗೂ ಕುತೂಹಲಕಾರಿ.

ಅಮೇರಿಕದಲ್ಲಿರುವ ಇನ್ನಿತರ ಲಕ್ಷಾಂತರ ಓದುಗರಂತೆ, ಸಾಹಿತ್ಯದ ಪ್ರಬಲ ವಿಮರ್ಶಕರು ಸಹ ಯಾವುದೇ ಆಫ್ರಿಕನ್ ಅಮೇರಿಕನ್ ಕೃತಿಯನ್ನು ಓದಿಲ್ಲವೆಂದು ಗರ್ವದಿಂದ ಹೇಳಿಕೊಳ್ಳುತ್ತಾರೆ. ಇದರಿಂದ ಅವರ ಕೃತಿಗಳು ಹಾಗೂ ಕೃತಿಗಳ ಪ್ರಭಾವಕ್ಕೆ ಯಾವುದೇ ಧಕ್ಕೆಯಾಗಲಿ, ಮಿತಿಗಳಾಗಲಿ ಉಂಟಾಗುವುದಿಲ್ಲವೆಂದು ಅವರಿಗನಿಸುತ್ತದೆ.

ಆಫ್ರಿಕನ್ ಅಮೇರಿಕನ್ ಸಾಹಿತ್ಯದ ಯಾವ ಪರಿಚಯವೂ ಇಲ್ಲದೆ ಸಂಮೃದ್ಧರಾಗಿ ಅವರು ಸಾಗುತ್ತಿದ್ದಾರೆಂದು ಹೇಳಲು ನನ್ನಲ್ಲಿ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಅದ್ಭುತವಾದ ವಿಚಾರವೆಂದರೆ, ಇವರ ಈ. ಸಾಹಿತ್ಯದ ಶೋಧನೆಯು ಸರ್ವವ್ಯಾಪಿಯಾದ, ಸಜೀವವಾಗಿರುವ ಕಪ್ಪು ಜನರ ಪ್ರಾತಿನಿಧ್ಯವನ್ನು ನೋಡದೆಯೆ ಮುಗಿದುಬಿಡುತ್ತದೆ. ಅಮೇರಿಕದ ಸಾಹಿತ್ಯದ ಅಧಿಕಾರದ ಚುಕ್ಕಾಣಿ ಹಿಡಿದ ಜನರು ಆಫ್ರಿಕನ್ ಅಮೇರಿಕನ್ ಸಾಹಿತ್ಯದ ಬಗ್ಗ ತಮಗಿರುವ ಅಜ್ಞಾನವನ್ನು ಗರ್ವದಿಂದ ಹೇಳಿಕೊಳ್ಳತ್ತಾರೆ. ಇದು ಆಶ್ಚರ್ಯಕರವಾದ ಸಂಗತಿಯಲ್ಲದಿದ್ದರೂ ಆಸಕ್ತಿ ಕೆರಳಿಸುವಂತಹದ್ದು. ಕಪ್ಪು ಜನರ ಕೃತಿಗಳ ನಿರಾಕರಣೆಯಿಂದ ಅವರ ಬೌದ್ಧಿಕ ಬದುಕಿಗೆ ತೊಂದರೆ, ಗೊಂದಲವಾಗುವುದಿಲ್ಲ ವೆಂಬುದು ಅವರ ನಂಬಿಕೆ. ಇಂತಹ ಧೋರಣೆ ಅವರು ಸಾಂಪ್ರದಾಯಿಕ ಕೃತಿಗಳನ್ನು ವಿಶ್ಲೇಷಿಸುವಾಗಲೂ ಕಾಣಬಹುದು.

□

---

ಉಷಾ ಬಿ.ಎನ್.
೫೭೭, ೧೧ನೇ ಕ್ರಾಸ್, ೭ನೇ ಬ್ಲಾಕ್, ಜಯನಗರ
ಬೆಂಗಳೂರು - ೮೨, ದೂರವಾಣಿ : ೦೮೦ - ೨೬೭೬ ೨೭೫೭

# ಜೋಪಾನ! ಜೋಪಾನ!

ತೆಲುಗು ಮೂಲ : ಮಂದರಪು ಹೈಮವತಿ
ಅನುವಾದ : ಆರ್ವಿಯಸ್ ಸುಂದರಂ

ಚಿಕ್ಕಂದಿನಲ್ಲಿ
ಸಿಂದ್‌ಬಾದ್ ಸಾಹಸಯಾತ್ರೆಗಳನ್ನು
ಗಲಿವರ್ ಪ್ರಯಾಣದ ಕಥೆಗಳನ್ನು
ಓದಿದಾಗ
ಎಷ್ಟೊಂದು ಕನಸುಗಳು
ನಾನೂ ಒಂದು ಸಾಹಸಗೀತೆಯಾಗಬೇಕೆಂದು!

ಆದರೆ
ದೊಡ್ಡವಳಾದ ಮೇಲೆ ತಿಳಿಯಿತು
ಸಿಂದ್‌ಬಾದ್ ಗಲಿವರ್ ಇತ್ಯಾದಿ
ಬಾಲಕರಿಗೆ ಮಾತ್ರ ಆದರ್ಶವೆಂದು
ಸಿಂಡ್ರೆಲ್ಲ ಸ್ನೋವೈಟ್
ಬಾಲಿಕೆಯರಿಗೆ ಆರಾಧ್ಯ ದೇವತೆಗಳೆಂದು.

ದೇಶ ಸಂಚಾರ
ಅದ್ಭುತ ವಿಶೇಷಗಳ ಆವಿಷ್ಕಾರ
ಸಾಹಸವೀರ
ರಾಜಕುಮಾರ

ವಿಮಾನಯಾನ ಅಂತರಿಕ್ಷ ವಿಹಾರ
ಅಪರೂಪ ಅಪರೂಪ.

ಈ ಪರಮಾಣು ಯುಗದಲ್ಲೂ
ಪಕ್ಕದ ಊರಿಗೆ ಪಯಣ
ಪ್ರಪಂಚ ಯಾತ್ರೆಯಷ್ಟು ಸಂಭ್ರಮ.
ಪ್ರಯಾಣದ ದಿನ
ಅತ್ತೆಯ ಮನೆಗೆ ಕಳಿಸುವಂತೆ
ಪ್ಲಾಟ್‌ಫಾಂ ಮೇಲೆ
ಸಕುಟುಂಬ ಸಪರಿವಾರವಾಗಿ
ಬೀಳ್ಕೊಡುಗೆಯ ದೃಶ್ಯ.

ಹೋದ ತಕ್ಷಣ ಫೋನ್ ಮಾಡು
ಟಿಕೆಟ್ ಜೋಪಾನ
ಸಾಮಾನುಗಳು ಜೋಪಾನ
ದುಡ್ಡು ಜೋಪಾನ
ಯೌವನ ಜೋಪಾನ
ಮೊದಲೇ ಹೆಣ್ಣುಮಗು ನೀನು
ಯಾರನ್ನೂ ನಂಬಬೇಡ
ಯಾರ ಜೊತೆಗೂ ಮಾತು ಬೇಡ

ಎಚ್ಚರಿಕೆಯ ದಂಡಕಗಳನ್ನು ಕೇಳಿ ಕೇಳಿ
ಕಿವಿ ತೂತಾಗುವುದು
ರೈಲು ಹೊರಡುವುದನ್ನೇ
ಕಾಯುವುದು ಹೆಣ್ಣು.

□

ಡಾ. ಆರ್ಸಿಯಸ್ ಸುಂದರಂ
ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬

# ಹದಿನೆಂಟರ ಹೊಸ್ತಿಲಲ್ಲಿ

ಚೀನೀ ಮೂಲ : ಯೂ ಹುವಾ
ಅನುವಾದ : **ಗೋಪಾಲಕೃಷ್ಣ ಪೈ**

ದೀರ್ಘವಾಗಿ ಉಸಿರಾಡುತ್ತಿರುವ ಸಮುದ್ರದಂತೆ ಡಾಮರು ಹಾಕಿದ ರಸ್ತೆ ಒಂದೇ ಸಮನೆ ಮೇಲೆ ಕೆಳಗೆ ಓಡುತ್ತಿತ್ತು. ಈ ರಸ್ತೆಯ ಮೇಲೆ ಗುಡ್ಡಗಳ ನಡುವೆ ಓಡಾಡುವುದೆಂದರೆ ಒಂದು ಬೋಟಿನಲ್ಲಿ ಕೂತು ಹೋದಂತೆ. ನನಗಾಗ ಹದಿನೆಂಟರ ವಯಸ್ಸು. ಗಲ್ಲದ ಮೇಲೆ ಮೂಡುತ್ತಿದ್ದ ಕೆಲವು ಕೂದಲುಗಳು ಗಾಳಿಗೆ ಹಾರಾಡುತ್ತಿದ್ದವು. ಅಲ್ಲಿ ಮೂಡಿದ ಮೊದಲ ಕೂದಲುಗಳಾದ ಕಾರಣ ನನಗೆ ಅವುಗಳ ಮೇಲೆ ವಿಶೇಷವಾದ ಆಸಕ್ತಿ. ಒಂದು ಇಡಿಯ ದಿನ ಈ ರಸ್ತೆಯ ಮೇಲೆ ನಡೆದಿದ್ದೆ. ಬಹಳಷ್ಟು ಗುಡ್ಡಗಳನ್ನು ಮೋಡಗಳನ್ನು ನೋಡಿ ಇವೆಲ್ಲ ನನ್ನ ಆತ್ಮೀಯ ಸ್ನೇಹಿತರಿರಬಹುದೆಂದುಕೊಂಡುದರಿಂದ ಅವುಗಳಿಗೆ ನನ್ನ ಗೆಳೆಯರ ಹೆಸರುಗಳನ್ನೇ ಇಟ್ಟಿದ್ದೆ. ಅಷ್ಟು ನಡೆದರೂ ಅವು ನನ್ನನ್ನು ಆಯಾಸಗೊಳಿಸಿರಲಿಲ್ಲ. ಸುಮ್ಮನೆ ನಡೆಯುತ್ತಿದ್ದೆ. ಬೆಳಗು ಕಳೆದು ಸಂಜೆಯಾಗುತ್ತ ಬಂದಿತ್ತು. ಮಬ್ಬುಗತ್ತಲು ನಿಧಾನವಾಗಿ ತನ್ನ ಎಳೆಯನ್ನು ಬಿಚ್ಚುತ್ತಿತ್ತು. ಆದರೂ ಒಂದೇ ಒಂದು ಹೋಟೆಲನ್ನು ಕಂಡಿರಲಿಲ್ಲ.

ರಸ್ತೆಯಲ್ಲಿ ತುಂಬ ಮಂದಿಯನ್ನು ಭೇಟಿಯಾಗಿದ್ದೆ. ಮುಂದೆ ಏನು ಸಿಗುತ್ತದೆಂಬ ಬಗ್ಗೆ ಒಬ್ಬರಿಗೂ ತಿಳಿದಿರಲಿಲ್ಲ. ಮುಂದೆ ಹೋಟೆಲುಗಳಾದರೂ ಇವೆಯೋ ಎಂದೂ ಗೊತ್ತಿರಲಿಲ್ಲ. 'ನೀವೇ ಯಾಕೆ ಹೋಗಿ ನೋಡಬಾರದು?' ಎಂದವರು ಕೇಳಿದರು. ಚೆನ್ನಾಗಿ ಹೇಳಿದರು ಅಂದ್ಕೊಂಡೆ. ನಾನು ಖಂಡಿತವಾಗಿಯೂ ನೋಡಲೆಂದೇ ಹೊರಟವನು. ಇನ್ನೂ ಯಾವುದೂ ಸಿಕ್ಕದಿದ್ದ ಕಾರಣ ಚಿಂತಿಸುವುದು ಅನಿವಾರ್ಯವಾಗಿತ್ತು.

ಇಡಿಯ ದಿನ ನಡೆದರೂ ರಸ್ತೆಯ ಮೇಲೆ ಒಂದೇ ಒಂದು ಕಾರನ್ನೂ ನೋಡದಿದ್ದುದು

ನನ್ನಲ್ಲಿ ಆಶ್ಚರ್ಯ ಮೂಡಿಸಿತು. ಸಂಜೆಯ ಹೊತ್ತಿಗೆ ನನಗೊಂದು ಕಾರು ಸಿಕ್ಕಿದ್ದರೆ ಚೆನ್ನಾಗಿತ್ತು ಎಂದು ಯೋಚಿಸುತ್ತಿರುವಾಗಲೇ ಒಂದು ಕಾರು ಬಂತು. ಅಂಥ ಯೋಚನೆ ಬಂದದ್ದು ನನಗೆ ಆಗಲೇ. ಆಗ ನಾನು ಉಳಕೊಳ್ಳಲು ಹೋಟೆಲಿನ ಬಗ್ಗೆ ಯೋಚಿಸುತ್ತಿರಲಿಲ್ಲ. ಒಂದು ಕಾರು ಸಿಕ್ಕಿದ್ದರೆ ಚೆನ್ನ ಎನ್ನುವುದು ನನ್ನ ತಲೆ ತುಂಬಿದ್ದ ವಿಷಯ. ರಸ್ತೆಯ ಬದಿ ನಿಂತು ನಾನು ಕೈ ಬೀಸಿದೆ. ಬಹಳ ನಿರ್ಲಕ್ಷ್ಯದಿಂದೆಂಬಂತೆ, ಆದರೆ ಅಷ್ಟೇ ಗಾಂಭೀರ್ಯ ನಟಿಸಿ ಕೈ ಬೀಸಿದೆ. ಆದರೆ ಕಾರಿನ ಚಾಲಕ ನನ್ನನ್ನು ನೋಡಲಿಲ್ಲ. ಕಾರು ಮತ್ತು ಚಾಲಕ ಇಬ್ಬರೂ ನನ್ನನ್ನು ಅಲಕ್ಷಿಸಿದರು. ಬಂದೂಕಿನ ಗುಂಡಿನಂತೆ ಎರಡೂ ನನ್ನ ಕಣ್ಣೆದುರು ರಪ್ಪೆಂದು ಓಡಿದುವು. ತಮಾಷೆಗಾಗಿ ನಾನು ಅದರ ಹಿಂದೆ ಒಂದಷ್ಟು ಓಡಿದೆ. ಆಗ ನಾನು ಹೋಟೆಲಿನ ಬಗ್ಗೆ ಯೋಚಿಸಲಿಲ್ಲ. ಕಾರು ಮರೆಯಾಗುವವರೆಗೂ ಓಡಿದೆ, ಓಡಿದೆ. ಆ ಮೇಲೆ ನನ್ನ ಬಗ್ಗೆಯೇ ನಾನು ನಕ್ಕುಬಿಟ್ಟೆ. ಉಸುರು ಬಿಡುವಾಗ ಅಷ್ಟು ನಕ್ಕದ್ದಕ್ಕೆ ಎದೆ ನೋವು ಶುರುವಾಯಿತು. ಆದುದರಿಂದ ತಟಕ್ಕನೆ ನಗು ನಿಲ್ಲಿಸಿದೆ. ಆ ಮೇಲೆ ತುಸು ದೂರ ಖುಷಿಯಿಂದ ಹಾಗೂ ಒಂದಿಷ್ಟು ವಿಷಾದದಿಂದ ನಡೆದುಕೊಂಡು ಹೋದೆ. ವಿಷಾದವೇಕೆಂದರೆ, ಗಂಭೀರವಾಗಿ ನಾನು ಬೀಸುವ ಕೈಯಿಂದ ಕಲ್ಲನ್ನು ಹಿಡಿದಂತೆ ಅದನ್ನು ಹಿಡಿಯಲಿಲ್ಲವೆನ್ನುವುದಕ್ಕಾಗಿ.

ಈಗ ನನಗೆ ಒಂದು ವಾಹನ ಬೇಕೇ ಬೇಕಾಗಿತ್ತು. ಯಾಕೆಂದರೆ ಮುಸ್ಸಂಜೆಯಾಗತೊಡಗಿತ್ತು. ಯಾವ ಸೂಳೇ ಮಗನ ಹೋಟೆಲೂ ಕಾಣುತ್ತಿರಲಿಲ್ಲ. ಬರೀ ರಸ್ತೆ. ಮಧ್ಯಾಹ್ನದ ಬಳಿಕ ಒಂದೇ ಒಂದು ಕಾರನ್ನು ನಾನು ಕಂಡಿರಲಿಲ್ಲ. ಈಗ ಯಾವುದಾದರೂ ಕಾರು ನಿಲ್ಲಿಸಬೇಕೆಂದು ಅನ್ನಿಸಿದ್ದರೆ ನನಗೆ ಅದನ್ನು ನಿಲ್ಲಿಸುವುದು ಸಾಧ್ಯವಿತ್ತು ಅಂದುಕೊಂಡೆ. ಈ ರಸ್ತೆಯ ನಡುವೆ ನಾನು ಬಿದ್ದುಕೊಂಡಿದ್ದರೆ ಜೋರಾಗಿ ಬರುವ ಯಾವುದೇ ಕಾರು ಬ್ರೇಕ್ ಹಾಕಿ ನನ್ನ ತೀರ ಹತ್ತಿರ ನಿಲ್ಲುವ ಸಾಧ್ಯತೆ ಇತ್ತು. ಆದರೂ ಯಾವುದೇ ವಾಹನದ ಸದ್ದು ನನಗೆ ಕೇಳಲಿಲ್ಲ. ನಾನು ಹೋಗಿ ನೋಡಬೇಕು. ಹಾಗೇ ಹೇಳಿ, ನಾನೇ ಹೋಗಿ ನೋಡಬೇಕು.

ರಸ್ತೆ ಮೇಲಕ್ಕೆದ್ದು ಕೆಳಕ್ಕಿಳಿಯಿತು. ಅದರ ಎತ್ತರದ ತುದಿ ಯಾವಾಗಲೂ ನನ್ನನ್ನಾಕರ್ಷಿಸುತ್ತಿತ್ತು. ಅಲ್ಲಿಯ ತನಕ ಓಡಿ ಹೋಗುವಾಗ ತುದಿಗೆ ಮುಟ್ಟಿ ಆ ಕಡೆ ನೋಡಿದರೆ ಎಲ್ಲಾದರೂ ಒಂದು ಹೋಟೆಲು ಸಿಗಬಹುದು ಎಂಬ ಆಸೆ. ಆದರೆ ಆ ತುದಿ ಮುಟ್ಟಿದಾಗೆಲ್ಲ ಅದಕ್ಕಿಂತ ಎತ್ತರದ ಇನ್ನೊಂದು ತುದಿ ಮತ್ತು ನನ್ನ ಹಾಗೂ ಆ ಇನ್ನೊಂದು ತುದಿಯ ಮಧ್ಯೆ ನನ್ನ ನಿರಾಸೆ ಮಾತ್ರ ಇರುತ್ತಿತ್ತು. ಈಗ ಆ ಇನ್ನೊಂದು ತುದಿಗೆ ನಾನು ಮುಟ್ಟಿದಾಗ ಕಂಡದ್ದು ಅದು. ಅದು ಎಂದರೆ ಹೋಟೆಲಲ್ಲ, ಒಂದು ಟ್ರಕ್ಕು. ರಸ್ತೆಯ ತಗ್ಗಿನಲ್ಲಿ ನನಗೆ ಮುಖ ನೋಡಿ ಆ ಟ್ರಕ್ಕು ನಿಂತಿತ್ತು. ಎದುರು ನಿಂತ ಚಾಲಕನ ಕುಂಡೆಯ ಮೇಲೆ ಮುಳುಗುತ್ತಿದ್ದ ಸೂರ್ಯನ ಬೆಳಕು. ಅವನ ತಲೆ ನನಗೆ ಕಾಣಲಿಲ್ಲ. ಅದು ಟ್ರಕ್ಕಿನ ಮೂತಿಯೊಳಗೆ ಹುಗಿದು ಹೋಗಿತ್ತು. ತುಟಿ ಅಗಲಿಸಿದಂತೆ ಆ ಟ್ರಕ್ಕಿನ ಮೂತಿ ತೆರೆದುಕೊಂಡಿತ್ತು. ಟ್ರಕ್ಕಿನಲ್ಲಿ ಬಿದಿರಿನ ಬಾಸ್ಕೆಟ್‌ಗಳನ್ನು ಹೇರಿದ್ದರು. ಬಾಳೆಯ ಹಣ್ಣಿರಬೇಕು ಎಂದು ನನಗೆ ನಾನೇ ಹೇಳಿಕೊಂಡೆ. ಚಾಲಕನ ಸೀಟಿನ ಹತ್ತಿರ ಸ್ವಲ್ಪವಾದರೂ ಹಣ್ಣುಗಳಿರಬಹುದು. ಒಮ್ಮೆ ಒಳಹೋಗಲು ಅನುಮತಿ ಸಿಕ್ಕಿತೋ, ನಾನೂ ಹಣ್ಣುಗಳನ್ನು ತಿನ್ನಬಹುದೆಂದು ಆಸೆಪಟ್ಟೆ. ಟ್ರಕ್ಕು ನಾನು ಬಂದ ದಾರಿಗೇ ಮುಖ ಮಾಡಿತ್ತು. ಆದರೆ ನನಗೆ ಯಾವ ಕಡೆ ಹೋಗಬೇಕೆಂದು ನಾನೇನು ತಲೆಕೆಡಿಸಿಕೊಳ್ಳಲಿಲ್ಲ. ನನ್ನೆದುರು ಆ ಟ್ರಕ್ಕಂತೂ ಇತ್ತು.

ನಾನು ಓಡಿ ಹೋಗಿ ಬಿಟ್ಟಿಯಿಂದ ಚಾಲಕನನ್ನೇ ಮಾತನಾಡಿಸಿದೆ "ಹಲೋ, ಹ್ಯಾಗಿದ್ದೀ, ಮಿತ್ರ?"

ಅವನು ನನ್ನನ್ನು ಕ್ಯಾರೇ ಮಾಡಲಿಲ್ಲ. ಅವನ ತಲೆ ಟ್ರಕ್ಕಿನ ಮೂತಿಯೊಳಗೆ ಏನನ್ನೋ ಹುಡುಕುತ್ತಲಿತ್ತು.

"ಗೆಳೆಯಾ, ಒಂದು ಸಿಗರೇಟು ಬೇಕಾ?" ಎಂದೆ.

ಆಗ ಅವನು ತಲೆ ಎತ್ತಿ, ನನ್ನತ್ತ ನೋಡಿ, ತನ್ನ ಕೊಳಕಾದ ಕೈಯನ್ನು ನಾನು ಮುಂದೆ ಮಾಡಿದ ಸಿಗರೇಟಿನತ್ತ ಚಾಚಿದ. ನಾನು ಬೇಗ ಬೇಗ ಅದಕ್ಕೆ ಬೆಂಕಿ ಹಚ್ಚಿದೆ. ಅವನು ನಾಲ್ಕು ದಮ್ಮು ಎಳೆದು ಮತ್ತೆ ಟ್ರಕ್ಕಿನ ಮೂತಿಯೊಳಗೆ ತನ್ನ ತಲೆಯನ್ನು ಹುಗಿದ.

ನನಗೆ ಆರಾಮಾಯಿತು. ಆ ವ್ಯಕ್ತಿ ನನ್ನಿಂದ ಸಿಗರೇಟು ಪಡೆದ ಕಾರಣ ನನ್ನನ್ನು ಕೊಂಡೊಯ್ಯಲು ದಾಕ್ಷಿಣ್ಯಕ್ಕೆ ಬಿದ್ದಂತಾಯಿತು. ನಾನು ಟ್ರಕ್ಕಿಗೊಂದು ಸುತ್ತು ಬಂದು ಅದರಲ್ಲಿ ತುಂಬಿದ ಬಾಸ್ಕೆಟುಗಳಲ್ಲಿ ಏನಿರಬಹುದೆಂದು ಪರೀಕ್ಷಿಸಿದೆ. ನನಗೆ ಒಳಗಿದ್ದುದು ಕಾಣುತ್ತಿರಲಿಲ್ಲ. ಹಾಗಾಗಿ ಮೂಗನ್ನು ಬಳಸಿದೆ. ಒಳಗಡೆ ಆ್ಯಪಲ್‌ಗಳ ಪರಿಮಳ. ಆ್ಯಪಲ್‌ಗಳಾದರೂ ತೊಂದರೆಯಿಲ್ಲ ಅಂದ್ಕೊಂಡೆ.

ಅವನ ಟ್ರಕ್ ರಿಪೇರಿಯಾಯಿತು. ಅವನು ಬಾನೆಟ್‌ನ ಬಾಯಿ ಮುಚ್ಚಿ ಕೆಳಗೆ ಹಾರಿದ. ನಾನು ಮುಂದೆ ಓಡಿ "ನನ್ನನ್ನು ಕರಕೊಂಡು ಹೋಗ್ತಿಯೇನಪ್ಪ?" ಎಂದು ಕೇಳಿದೆ. ಮುಖಕ್ಕೆ ರಾಚುವಂತೆ ಅವನು "ಹೋಗಯ್ಯ" ಎಂದ.

ಸಿಟ್ಟಿನಿಂದ ನನ್ನಲ್ಲಿ ಮಾತುಗಳು ಹುಟ್ಟಲಿಲ್ಲ. ಅವನು ನಿಧಾನಕ್ಕೆ ಬಾಗಿಲು ತೆರೆದು ಕೂತು ಇಂಜಿನ್ ಸ್ಟಾರ್ಟ್ ಮಾಡಿದ. ನನಗಿದು ಅವಕಾಶ. ರಿಸ್ಕ್ ತೆಗೆದುಕೊಳ್ಳಲೇಬೇಕಿತ್ತು. ಹಾಗಾಗಿ ಟ್ರಕ್ಕಿನ ಎದುರಿಂದ ಹಾದು ಬಂದು ಬಾಗಿಲು ತೆರೆದು ಒಳಗೆ ಹತ್ತಿ ಕೂತೆ. ಕ್ಯಾಬಿನ್ನಿನ ಒಳಗೆ ಹೊಡೆದಾಟವಾದರೆ ಅದಕ್ಕೆ ನಾನು ಸಿದ್ಧನಿದ್ದೆ. ಒಳಗೆ ಹೋಗುವಾಗಲೇ ನಾನು ಚೀರಿದೆ-"ನಿನ್ನ ಬಾಯಿಯಲ್ಲಿನ್ನೂ ನಾನು ಕೊಟ್ಟ ಸಿಗರೇಟು ಇದೆ" ಲಾರಿ ಅಷ್ಟರಲ್ಲಿ ಮುಂದೆ ಸರಿದಿತ್ತು.

ಅವನು ಸುಮ್ಮನೆ, ಬೇಕೋ ಬೇಡವೋ ಎನ್ನುವಂತೆ ನಗುಬೀರಿದ. "ಎಲ್ಲೋಗ್ತಾ ಇದ್ದೀಯ?"

"ಎಲ್ಲಾದರೂ ಸರಿಯೇ" ಅಂದೆ.

ಕರುಣೆಯಿಂದ ಅವನು "ಆ್ಯಪಲ್ ಬೇಕಾ?" ಎಂದು ಇನ್ನೂ ನನ್ನನ್ನೇ ನೋಡುತ್ತಾ ಕೇಳಿದ.

"ಇದೆಯಾ?"

"ಬೇಕಿದ್ದರೆ ಹಿಂದೆ ಹತ್ತಿ ಹೋಗಿ ತಗೋ"

ಅವನು ಜೋರಾಗಿ ಗಾಡಿ ಬಿಡುತ್ತಿದ್ದುದರಿಂದ ನನ್ನಿಂದ ಎದ್ದು ಮೇಲೆ ಹತ್ತುವುದು ಕಷ್ಟವೆಂದು ತೋರಿತು. "ಇರಲಿ ಬಿಡು" ಎಂದೆ.

ಅವನು ಒತ್ತಾಯಿಸಿದ "ಹೋಗು ಹೋಗು, ತಕ್ಕೊ" ಎಂದು ಮತ್ತೆ ಹೇಳಿದ. ನನ್ನತ್ತ ನೋಡುವುದನ್ನು ನಿಲ್ಲಿಸಲಿಲ್ಲ.

"ಯಾಕೆ ಹಾಗೆ ನನ್ನನ್ನೇ ನೋಡ್ತಾ ಇದ್ದೀಯ? ನನ್ನ ಮುಖದಲ್ಲೇನು ನಿನಗೆ ರಸ್ತೆ ಕಾಣಿಸ್ತಾ ಇದೆಯ?" ಎಂದೆ.

ಆಗಲೇ ಅವನು ಮುಖ ತಿರುಗಿಸಿ ರಸ್ತೆ ನೋಡತೊಡಗಿದ.

ನಾನು ಬಂದ ದಾರಿಯಲ್ಲೇ ಟ್ರಕ್ಕು ಸಾಗತೊಡಗಿತು. ನನ್ನ ಸ್ಥಳದಲ್ಲಿ ನಾನು ಸುಖಾಸೀನನಾಗಿ ಚಾಲಕನ ಜೊತೆ ಅದೂ ಇದೂ ಮಾತನಾಡುತ್ತಾ ಕಿಟಕಿಯ ಮೂಲಕ ಹೊರಗೆ ನೋಡತೊಡಗಿದೆ. ಕೆಲವು ಕ್ಷಣದಲ್ಲಿ ನಾವು ಆಪ್ತರಾದೆವು. ಅವನೊಬ್ಬ ಪೀಠೋಪಕರಣಗಳನ್ನು ಸಾಗಿಸುವ ವ್ಯಕ್ತಿ. ಆ ಟ್ರಕ್ಕು ಅವನದೇ. ಹಾಗೆಯೇ ಆ ಆ್ಯಪಲ್‌ಗಳೂ. ಅವನ ಕಿಸೆಯೊಳಗೆ ತುಂಬ ದುಡ್ಡಿತ್ತು. "ಎಲ್ಲಿಗೆ ಹೋಗೋದು?" ಎಂದು ಕೇಳಿದೆ.

ಅವನು "ನನ್ನ ಜೊತೆ ಬಂದ್ರೆ ನಿನಗೇ ಗೊತ್ತಾಗುತ್ತೆ' ಎಂದ.

ಆತ ಎಷ್ಟು ಆಪ್ತವಾಗಿ ಮಾತನಾಡತೊಡಗಿದನೆಂದರೆ ನನ್ನ ಅಣ್ಣನೋ ತಮ್ಮನೋ ನನ್ನೊಡನೆ ಮಾತನಾಡುತ್ತಿದ್ದ ಹಾಗಿತ್ತು. ನನಗವನು ಇನ್ನೂ ಹತ್ತಿರವಾದ. ಹೊರಗಿನ ದೃಶ್ಯಗಳನ್ನೆಲ್ಲ ನಾನು ಮೊದಲೇ ನೋಡಿ ಪರಿಚಿತನಾಗಿದ್ದೆ. ಆ ಗುಡ್ಡ ಮತ್ತು ಮೋಡಗಳನ್ನು ಮತ್ತೆ ನೋಡಿದಾಗ ಗೆಳೆಯರ ನೆನಪಾಗಿ ಅವುಗಳಿಗವರ ಒಂದೊಂದೇ ಹೆಸರಿಡುತ್ತಾ ಹೋದೆ.

ನಾನೀಗ ಹೋಟೇಲಿನ ಬಗ್ಗೆ ಏನೇನೂ ಯೋಚಿಸುತ್ತಿರಲಿಲ್ಲ. ಈ ಟ್ರಕ್ಕು, ಈ ಚಾಲಕ ಮತ್ತು ನನ್ನ ಸೀಟು-ಇವಷ್ಟರಲ್ಲಿ ನನಗೆ ಆರಾಮ ಸಿಕ್ಕಿತ್ತು. ಟ್ರಕ್ಕು ಎಲ್ಲಿಗೆ ಹೋಗುತ್ತಿದೆಯೆಂಬ ಪರಿವೆ ನನಗಿರಲಿಲ್ಲ. ಎದುರೇನಿದೆ ಎಂಬ ಬಗ್ಗೆ ನನಗೇನು? ಟ್ರಕ್ಕು ಮುಂದೆ ಹೋದರೆ, ನಾವೂ ಹೋಗುತ್ತೇವೆ, ಏನೇನೋ ನೋಡುತ್ತೇನೆ.

ಆದರೆ ನಾವು ಪರಸ್ಪರ ಆತ್ಮೀಯರಾಗುವ ಸಂದರ್ಭದಲ್ಲೇ ಟ್ರಕ್ಕು ಮತ್ತೆ ಹಾಳಾಗಿ ನಿಂತಿತು. ನನ್ನ ಕೈ ಅವನ ಭುಜದ ಮೇಲಿತ್ತು. ಅವನ ಕೈ ನನ್ನ ಭುಜದ ಮೇಲೆ. ಅವನು ಮೊದಲ ಬಾರಿಗೆ ಹೆಣ್ಣೊಬ್ಬಳನ್ನು ಅಪ್ಪಿ ಹಿಡಿದು ವಿಷಯ ಹೇಳುವ ಹೊತ್ತಿನಲ್ಲಿಯೇ ಟ್ರಕ್ಕು ಹಾಳಾಯಿತು. ರಸ್ತೆಯಲ್ಲಿ ಮೇಲಕ್ಕೇರುವಾಗಲೇ ಅದು ಹಾಳಾಯಿತು. ಅದರ ಎಂಜಿನ್‌ನ ಸದ್ದು ಅದೇ ತಾನೇ ಸತ್ತ ಹಂದಿಯಂತೆ ನಿಂತು ಬಿಟ್ಟಿತು. ಅವನು ಕೆಳಗಿಳಿದು, ಅದರ ಎಂಜಿನ್‌ನ ಮೂತಿ ಎತ್ತಿ ತಲೆಯನ್ನು ಒಳಕ್ಕೆ ಹುಗಿದ. ಒಳಗೆ ಕ್ಯಾಬಿನ್ನಿನಲ್ಲಿ ಕೂತಲ್ಲಿಂದೇ ನಾನು ಈಗ ಅವನ ಕುಂಡೆಗಳು ಗಾಳಿಗೆ ತೆರೆದಿರುವುದನ್ನು ಊಹಿಸಿಕೊಂಡೆ. ಆದರೆ ಎತ್ತಿ ನಿಲ್ಲಿಸಿದ ಅದರ ಬಾಯಿ ಅಡ್ಡವಾಗಿದ್ದುದರಿಂದ ನನಗೆ ಕಾಣುತ್ತಿರಲಿಲ್ಲ. ಅವನು ಟ್ರಕ್ಕನ್ನು ಸರಿಮಾಡುವ ಶಬ್ದ ಮಾತ್ರ ನನ್ನ ಕಿವಿಗೆ ಬೀಳುತ್ತಿತ್ತು.

ತುಸು ಹೊತ್ತಿನ ಬಳಿಕ ಅವನು ತಲೆಯನ್ನು ಹೊರತೆಗೆದು ಟ್ರಕ್ಕಿನ ಬಾಯಿಯನ್ನು ಮುಚ್ಚಿದ. ಅವನ ಕೈಗಳು ಇನ್ನೂ ಹೆಚ್ಚು ಕೊಳೆಯಾಗಿದ್ದುವು. ಅವನು ತನ್ನ ಅಂಗಿಗೆ ಅದನ್ನು ಒರೆಸಿಕೊಂಡು ನೆಲದ ಮೇಲೆ ಹಾರಿ ನನ್ನೆಡೆಗೆ ನಡೆದು ಬಂದ.

"ಸರಿಯಾಯ್ತಾ?" ಎಂದು ಕೇಳಿದೆ.

"ಇಲ್ಲ ಸರಿಯಾಗ್ತಾ ಇಲ್ಲ" ಎಂದ.

ನಮ್ಮ ಪ್ರಯಾಣದ ಕೊನೆಯಾಯಿತು ಎಂದುಕೊಂಡೆ. "ಏನು ಮಾಡೋಣ?" ಎಂದು ಕೇಳಿದೆ.

ಫಿಕರಿಲ್ಲದವನಂತೆ "ನೋಡೋಣ, ನಿಲ್ಲು" ಎಂದ.

ನಾನು ಏನು ಮಾಡುವುದೆಂದು ತಿಳಿಯದೇ ಕ್ಯಾಬಿನ್ನೊಳಗೆ ಕೂತೇ ಇದ್ದೆ. ಹೋಟೇಲಿನ ಬಗ್ಗೆ ಯೋಚಿಸಲು ತೊಡಗಿದೆ. ಆಗ ಸೂರ್ಯ ಮುಳುಗಿದ. ಮಂಜಿನ ತೆರೆಗಳು ನಿಧಾನವಾಗಿ ಮೇಲೇಳತೊಡಗಿದುವು. ಹೋಟೇಲಿನ ಬಗ್ಗೆ ಸಹಜವಾಗಿ ನನ್ನ ಯೋಚನೆಗಳು ಮೂಡತೊಡಗಿದ್ದು, ಅದು ಒಂದು ಕ್ಷಣದಲ್ಲಿ ನನ್ನನ್ನು ಪೂರ್ಣವಾಗಿ ಆಕ್ರಮಿಸಿಕೊಂಡಿತು. ನನ್ನ ಮೆದುಳಿನ ಶಕ್ತಿ ಪೂರ್ಣ ಮಾಯವಾಗಿ ಅಲ್ಲಿ ಬರೇ ಹೋಟೆಲು ತುಂಬಿಕೊಂಡಿತು.

ಈಗ ಚಾಲಕ ರಸ್ತೆಯ ಮಧ್ಯೆ ನಿಂತು ಕೈ ಕಾಲುಗಳನ್ನು ವಿಚಿತ್ರವಾಗಿ ಆಡಿಸತೊಡಗಿದ್ದ. ಗಂಭೀರವಾಗಿ ಮೊದಲಿನಿಂದ ಕೊನೆಯ ತನಕವೂ ಮಾಡತೊಡಗಿದ್ದ. ಆ ಮೇಲೆ ಟ್ರಕ್ಕಿನ ಸುತ್ತ ಜೋರಾಗಿ ಓಡುತ್ತಾ ಸುತ್ತು ಬಂದ. ಬಹುಶಃ ಟ್ರಕ್ಕಿನಲ್ಲಿ ತುಂಬ ಹೊತ್ತು ಕುಳಿತಿದ್ದುದರಿಂದ ಅವನಿಗೆ ತನ್ನ ಸ್ನಾಯುಗಳನ್ನು ಸಡಿಲ ಮಾಡುವ ಅಗತ್ಯವಿತ್ತೇನೋ. ಅವನು ಆ ರೀತಿ ಎಲ್ಲ ಮಾಡುವುದನ್ನು ಕ್ಯಾಬಿನ್ನಿನ ಒಳಗೆ ಕೂತು ನೋಡುತ್ತಾ ಇರುವುದು ನನ್ನಿಂದ ಸಾಧ್ಯವಾಗದೇ ನಾನೂ ಬಾಗಿಲು ತೆರೆದು ಹೊರಗೆ ಹಾರಿದೆ. ನಾನೇನೂ ವ್ಯಾಯಾಮ ಮಾಡುವುದಾಗಲೀ, ಓಡುವುದಾಗಲೀ ಮಾಡಲಿಲ್ಲ. ಬರೇ ಹೋಟೇಲಿನ ಬಗ್ಗೆ ಯೋಚಿಸಿದ್ದಲ್ಲದೇ ಬೇರೇನೂ ಮಾಡಲಿಲ್ಲ.

ಆಗ ಐದು ಮಂದಿ ಸೈಕಲ್‌ನಲ್ಲಿ ಬರುವುದು ಕಂಡಿತು. ಸೈಕಲ್ಲಿನ ಕ್ಯಾರಿಯರ್ ಮೇಲೆ ಎರಡು ಗಳ ತೊಟ್ಟು ಒಂದೊಂದಕ್ಕೂ ಒಂದೊಂದು ಬಿದಿರಿನ ಬ್ಯಾಸ್ಕೆಟ್ಟುಗಳನ್ನು ಕಟ್ಟಿದ್ದರು. ಹಳ್ಳಿ ರೈತರು ತಮ್ಮ ವಸ್ತುಗಳನ್ನು ಮಾರಿ ಮನೆಗೆ ಹಿಂದಿರುಗುವವರಿರಬೇಕು ಎಂದುಕೊಂಡೆ. ಹಾಗೆ ಮಂದಿ ಬರುತ್ತಿರುವುದು ನನಗೆ ಖುಷಿ ತಂದಿತು. ನಾನು ಅವರತ್ತ ನಡೆದು ದೊಡ್ಡ ಧ್ವನಿಯಲ್ಲಿ "ಎಲ್ಲಿಗ್ರಪ್ಪಾ?" ಎಂದು ಕೇಳಿದೆ.

ಅವರು ನನ್ನ ಬಳಿಗೆ ಬಂದು ಸೈಕಲ್ಲಿಂದ ಒಬ್ಬ ಕೆಳಗೆ ಹಾರಿ ನಿಂತ. "ಹತ್ತಿರದಲ್ಲೆಲ್ಲಾದರೂ ಹೋಟೆಲುಗಳಿವೆಯೋ?" ಎಂದು ವಿಚಾರಿಸಿದೆ.

ಅವರು ಅದಕ್ಕುತ್ತರಿಸಲಿಲ್ಲ. ಬದಲಾಗಿ "ಟ್ರಕ್‌ನಲ್ಲಿ ಏನೈತೆ?" ಎಂದು ಕೇಳಿದರು.

"ಆ್ಯಪಲ್‌ಗಳು" ಎಂದೆ.

ಅವರು ಸೈಕಲನ್ನು ಟ್ರಕ್‌ನ ಹಿಂಭಾಗದ ಹತ್ತಿರ ಒಯ್ದರು. ಇಬ್ಬರು ಮೇಲೇರಿ ಹತ್ತು ಬುಟ್ಟಿ ಹಣ್ಣುಗಳನ್ನು ಕೆಳಗೆ ಕೊಟ್ಟರು. ಮೂವರು ಕೆಳಗೇ ನಿಂತು ಆ ಬುಟ್ಟಿಗಳನ್ನು ಬಿಟ್ಟಿ ಹಣ್ಣುಗಳನ್ನು ತಮ್ಮ ಬುಟ್ಟಿಗಳಲ್ಲಿ ತುಂಬಿಸಿದರು. ಏನಾಗುತ್ತಿದೆಯೆಂದು ನನಗೆ ತಿಳಿಯದೇ ಆಶ್ಚರ್ಯಪಟ್ಟೆ. ಆ ಮೇಲೆ ಅವರಲ್ಲೊಬ್ಬನ ತೋಳು ಹಿಡಿದು ನಾನು ಕಿರಿಚಿದೆ-" ಈ ನನ್ನ ಮಕ್ಕಳ್ರು ಹಣ್ಣು ಕದೀತವ್ರೆ" ಅಷ್ಟರಲ್ಲಿ ಒಬ್ಬಾತನ ಮುಷ್ಟಿ ನನ್ನ ಮೂಗಿಗೆ ಬಡಿದು ನಾನು ಕೆಳಗೆ ಬಿದ್ದೆ. ನಾನು ಸಾವರಿಸಿ ಎದ್ದಾಗ ನನ್ನ ಮೂಗು ಚಪ್ಪಟೆಯಾಗಿ ಮುಖದಿಂದ ನೇಲುತ್ತಿತ್ತು. ದುಃಖದ ಕಣ್ಣೀರಿನಂತೆ ರಕ್ತ ಒಸರಲಾರಂಭಿಸಿತು.

ನನ್ನನ್ನು ಹೊಡೆದ ವ್ಯಕ್ತಿ ಯಾರು ಎಂದು ನೋಡುವಷ್ಟರಲ್ಲಿ ಆ ಐದು ಮಂದಿಯೂ ಸೈಕಲ್ ಹತ್ತಿ ಪರಾರಿಯಾಗಿದ್ದರು.

ಚಾಲಕ ಸುಮ್ಮನೇ ಅತ್ತಿತ್ತ ನಡೆಯುತ್ತಿದ್ದ. ವ್ಯಾಯಾಮ ಮತ್ತು ಓಟಗಳಿಂದ ಅವನಿಗೆ ಸುಸ್ತಾಗಿರಬೇಕೆಂದು ಅಂದುಕೊಂಡೆ. ಏನಾಗಿದೆಯೆಂದು ಅವನಿಗೆ ತಿಳಿದ ಹಾಗಿರಲಿಲ್ಲ. ನಾನು ಅವನತ್ತ "ನಿನ್ನ ಹಣ್ಣುಗಳನ್ನೆಲ್ಲ ಕದ್ದಿದ್ದಾರೆ" ಎಂದು ಕಿರಿಚಿದೆ. ಆಗ ಮಾತ್ರ ಅವನು ನನ್ನತ್ತ ತಿರುಗಿದ, ಅವನಿಗೆ ಇನ್ನಷ್ಟು ಖುಷಿ ಖುಷಿಯಾದ ಹಾಗೆ ಕಂಡಿತು. ಅವನು ನನ್ನ ಮೂಗಿನತ್ತ ನೋಡುತ್ತಿದ್ದ.

ಆಗ ಇನ್ನೂ ಹೆಚ್ಚಿನ ಮಂದಿ ಸೈಕಲ್ಲಿನಲ್ಲಿ ಕೆಳಗೆ ಬಂದರು. ಪ್ರತಿಯೊಂದು ಸೈಕಲಿನ ಹಿಂದೆಯೂ ಎರಡೆರಡು ಬುಟ್ಟಿಗಳನ್ನು ಕಟ್ಟಲಾಗಿತ್ತು. ಅವುಗಳ ನಡುವೆ ಮಕ್ಕಳೂ ಇದ್ದರು. ಎಲ್ಲ ಒಟ್ಟಿಗೇ ಮುಂದೆ ಬಂದು ಟ್ರಕ್ಕನ್ನು ಸುತ್ತುವರೆದರು. ಕೆಲವರು ಟ್ರಕ್ ಹತ್ತಿ ಹಣ್ಣು ತುಂಬಿದ ಬುಟ್ಟಿಗಳನ್ನು ಒಂದೊಂದಾಗಿ ಕೆಳಗಿಳಿಸಿಕೊಂಡರು. ಕೆಲವು ಬುಟ್ಟಿಗಳು ಹರಿದು ಅವುಗಳಲ್ಲಿ ಇದ್ದ ಹಣ್ಣುಗಳು ನನ್ನ ಮೂಗಿನಿಂದ ಬರುವ ರಕ್ತದಂತೆ ಕೆಳಕ್ಕೆ ಬಿದ್ದುವು. ಜನ ಹುಚ್ಚರಂತೆ ಹಣ್ಣುಗಳನ್ನು ತಮ್ಮ ತಮ್ಮ ಬುಟ್ಟಿಗಳಿಗೆ ತುಂಬಿಸುತ್ತಿದ್ದರು. ಕೆಲವೇ ಸೆಕೆಂಡುಗಳಲ್ಲಿ ಟ್ರಕ್‌ನಲ್ಲಿದ್ದ ಎಲ್ಲ ಹಣ್ಣುಗಳೂ ಈ ಕಡೆ ಸೇರಿಕೊಂಡವು. ಕೆಲವು ಟ್ರ್ಯಾಕ್ಟರ್‌ಗಳು ಘೀಳಿಡುತ್ತಾ ರಸ್ತೆಯುದ್ದಕ್ಕೂ ಬಂದು ಟ್ರಕ್‌ನ ಪಕ್ಕದಲ್ಲಿ ನಿಂತುವು. ಕೆಲವು ಧಾಂಡಿಗರು ಕೆಳಕ್ಕೆ ಹಾರಿ ಎಲ್ಲ ಹಣ್ಣಿನ ಬುಟ್ಟಿಗಳನ್ನು ತಮ್ಮ ತಮ್ಮ ಟ್ರ್ಯಾಕ್ಟರಿಗೆ ಹೇರಲಾರಂಭಿಸಿದರು. ಖಾಲಿಯಾದ ಬುಟ್ಟಿಗಳನ್ನು ಅವರು ದೂರಕ್ಕೆಸೆದರು. ಅಷ್ಟಾಗುವಾಗ ತುಂಬ ಹಣ್ಣುಗಳು ನೆಲಕ್ಕೆ ಬಿದ್ದು ಉರುಳಲಾರಂಭಿಸಿ ಅವುಗಳನ್ನು ಹೆಕ್ಕಲು ಜನರೆಲ್ಲ ಕಪ್ಪೆಗಳಂತೆ ಕೂತು ಹಾರತೊಡಗಿದರು.

ಅಪಾಯ ಲೆಕ್ಕಿಸದೇ ನಾನು ಆಗ ಮುಂದಕ್ಕೆ ಬಂದೆ. ಅವರ ನಡುವೆ ಹಾರಿ ನಾನು "ಕಳ್ಳ ಸೂಳೇಮಕ್ಕಳಾ," ಎಂದು ಕಿರಿಚಿದೆ. ಅವರು ಮುಷ್ಟಿಯಿಂದ ಹೊಡೆದರು, ಕಾಲಿನಿಂದ ಒದ್ದು ದೇಹದ ಪ್ರತಿಯೊಂದು ಭಾಗಕ್ಕೂ ಒಮ್ಮೆಲೇ ಬಡಿದರು. ಬಿದ್ದಲ್ಲಿಂದ ನಾನು ಏಳಲು ಪ್ರಯತ್ನಿಸಿದಾಗ ಕೆಲವು ಮಕ್ಕಳು ನನ್ನ ಮೇಲೆ ಆ್ಯಪಲ್‌ಗಳನ್ನು ಎಸೆದರು. ಅವುಗಳಲ್ಲಿ ಕೆಲವು ನನ್ನ ತಲೆಗೆ ಬಡಿದು ತುಂಡಾಗಿ ಬಿದ್ದುವು. ಪುಣ್ಯಕ್ಕೆ ನನ್ನ ತಲೆ ಹೋಳಾಗಲಿಲ್ಲ. ಆ ಮಕ್ಕಳಿಗೆ ಬಾರಿಸಲು ನಾನು ಎದ್ದಾಗ ಇದ್ದಕ್ಕಿದ್ದಂತೆ ಹಿಂದಿನಿಂದ ಯಾವನೋ ಒಬ್ಬ ಜೋರಾಗಿ ನನ್ನ ವೃಷಣಗಳಿಗೆ ಒದ್ದುಬಿಟ್ಟ. ನನಗೆ ಕೂಗಬೇಕೆನಿಸಿತು. ಆದರೆ ಬಾಯಿ ತೆರೆದಾಗ ಕಿಂಚಿತ್ತಾದರೂ ಸ್ವರ ಹೊರಡಲಿಲ್ಲ. ಪುನಃ ನೆಲಕ್ಕೆ ಬಿದ್ದವನಿಗೆ ಏಳಲೂ ಸಾಧ್ಯವಾಗಲಿಲ್ಲ. ಆ ಗೊಂದಲದಲ್ಲಿಯೇ ಅವರು ಹಣ್ಣುಗಳನ್ನೆಲ್ಲ ಎತ್ತಿಕೊಳ್ಳುತ್ತಿರುವುದು ಕಣ್ಣಿಗೆ ಬಿತ್ತು. ನಾನು ಚಾಲಕನನ್ನು ಹುಡುಕಿದೆ. ಅವನು ದೂರದಲ್ಲಿ ನನ್ನನ್ನೇ ಗಹಗಹಿಸಿ ನಗುತ್ತಾ ನೋಡುತ್ತಾ ನಿಂತಿದ್ದ. ಆಗ ನನ್ನ ಈ ಮೂಗಿನಿಂದ ರಕ್ತ ಸುರಿಯುವ ಮುಖ ಇನ್ನಷ್ಟು ವಿರೂಪವಾಗಿ ಕಾಣಿಸುತ್ತಿರಬೇಕು ಅನ್ನಿಸಿತು.

ಸಿಟ್ಟು ಮಾಡಿಕೊಳ್ಳುವುದಕ್ಕೂ ನನ್ನಲ್ಲಿ ಆಗ ಶಕ್ತಿ ಇರಲಿಲ್ಲ. ನನ್ನೆದುರು ಆಗುತ್ತಿದ್ದ ಅನ್ಯಾಯವನ್ನು ಬಿಟ್ಟ ಕಣ್ಣುಗಳಿಂದ ನೋಡುವುದಷ್ಟೇ ನನ್ನಿಂದ ಸಾಧ್ಯವಾಯಿತು. ಆ ಚಾಲಕನ ಬಗ್ಗೆ ನನಗೆ ಎಲ್ಲಿಲ್ಲದ ರೋಷವುಕ್ಕಿತು.

ಇನ್ನೂ ಹೆಚ್ಚಿನ ಸೈಕಲ್‌ಗಳೂ ಟ್ರಾಕ್ಟರ್‌ಗಳೂ ಬಂದುವು. ಹೊಸದಾಗಿ ಬಂದವರು ಆ ಗೊಂದಲದಲ್ಲಿ ಸೇರಿಕೊಂಡರು. ನೋಡ ನೋಡುತ್ತಿದ್ದಂತೆಯೇ ರಸ್ತೆಗೆ ಬಿದ್ದ ಆ್ಯಪಲ್‌ಗಳ ಸಂಖ್ಯೆ ಕಮ್ಮಿಯಾಗುತ್ತಾ ಬಂತು. ಕೆಲವರು ಇಲ್ಲಿಂದ ಓಡಕ್ಕೆ ಹೋಗುವುದೂ ಇನ್ನೂ ಕೆಲವರು ಬರುತ್ತಲೇ ಇರುವುದೂ ಕಾಣಿಸಿತು. ಈಗ ಬಂದವರು ಟ್ರಕ್ಕಿಗೇ ಕೈ ಹಾಕಿದರು. ಅದರ ಕಿಟಕಿಯ ಬಾಗಿಲನ್ನೂ ಟೈರುಗಳನ್ನೂ ಕಳಚುವುದು ಕಣ್ಣಿಗೆ ಬಿತ್ತು. ಟ್ರಕ್ಕಿನ ಮರದ ಪಟ್ಟಿಗಳನ್ನು ಅವರು ಮುರಿದು ಹಾಕಿದ್ದೂ ಕಾಣಿಸಿತು. ಕಿಟಕಿಯ ಗಾಜಿಲ್ಲದ, ಟೈರುಗಳಿಲ್ಲದ, ಮುರಿದ ಪಟ್ಟಿಗಳ ಟ್ರಕ್ಕು ರಸ್ತೆ ಬದಿಯಲ್ಲಿ ಅನಾಥವಾಗಿ ಬಿದ್ದಂತೆ ಕಾಣುತ್ತಿತ್ತು. ಕೆಲವು ಹದಾಗೆ ಮಕ್ಕಳು ಟ್ರಕ್‌ನಿಂದ ಒಗೆದ ಖಾಲಿ ಬುಟ್ಟಿಗಳನ್ನು ಒಟ್ಟು ಮಾಡುವ ಕೆಲಸಕ್ಕೆ ತೊಡಗಿದ್ದರು. ನೆಲವೆಲ್ಲ ನಿಧಾನಕ್ಕೆ ಸಾಫು ಸಾಫಾಗಿ ಜನರೂ ಚದುರತೊಡಗಿದರು. ನನ್ನಿಂದ ಇವನ್ನೆಲ್ಲ ಮೂಕವಾಗಿ ನೋಡುವುದಷ್ಟೇ ಸಾಧ್ಯವಾಯಿತು. ಸಿಟ್ಟಾಗುವುದು ಬಿಡಿ, ಎದ್ದು ಕೂರುವ ಶಕ್ತಿ ಕೂಡಾ ನನ್ನಲ್ಲಿರಲಿಲ್ಲ. ನೆಲದ ಮೇಲೆ ಬಿದ್ದುಕೊಂಡೇ ಕಣ್ಣು ಬಿಟ್ಟು ನೋಡುತ್ತಾ ಇದ್ದೆ.

ಕೊನೆಗೆ ಒಂದು ಖಾಲಿ ಟ್ರಾಕ್ಟರ್ ಮಾತ್ರ ಟ್ರಕ್ಕಿನ ಬಳಿ ನಿಂತದ್ದು ಬಿಟ್ಟರೆ ಉಳಿದೆಲ್ಲವೂ ಖಾಲಿಯಾಯಿತು. ಕೆಲವು ಮಂದಿ ಟ್ರಕ್ಕಿನಲ್ಲಿ ಏನಾದರೂ ಸಿಗುವುದೋ ಎಂದು ಪರೀಕ್ಷಿಸಿ, ನಿರಾಸೆ ಪಟ್ಟು ಮತ್ತೆ ಒಟ್ಟೊಟ್ಟರಾಗಿ ಟ್ರಾಕ್ಟರ್ ಹತ್ತಿದರು. ಟ್ರಾಕ್ಟರೂ ಹೊರಟುಹೋಯಿತು.

ಡ್ರೈವರ್ ಕೂಡಾ ಟ್ರಾಕ್ಟರ್ ಹತ್ತಿ ಕುಳಿತಿದ್ದ. ಅದರಲ್ಲಿ ಆರಾಮಾಗಿ ಕೂತ ಮೇಲೆ ಮತ್ತೆ ಅವನು ನನ್ನತ್ತ ನೋಡಿ ಗಹಗಹಿಸಿ ನಕ್ಕ. ನನ್ನ ಕೆಂಪನೆಯ ಕೈ ಚೀಲ ಅವನ ಹತ್ತಿರವಿದ್ದುದನ್ನು ನೋಡಿದೆ. ನನ್ನ ಬಟ್ಟೆ ಬರೆ, ಹಣ, ಒಂದಷ್ಟು ತಿಂಡಿ, ಪುಸ್ತಕಗಳೆಲ್ಲ ಇದ್ದ ಆ ಕೈ ಚೀಲವನ್ನು ಅವನೆತ್ತಿಕೊಂಡಿದ್ದ.

ಟ್ರಾಕ್ಟರ್ ಚಲಿಸಿ ಮುಂದಕ್ಕೆ ಹೋಯಿತು. ಎದುರಿನ ಗುಡ್ಡದ ರಸ್ತೆ ಏರಿ ಮರೆಯಾಯಿತು. ಅದರ ಸದ್ದು ಇನ್ನೂ ಕೇಳುತ್ತಿತ್ತು. ಆದರೆ ಮುಂದೆ ಕೆಲವು ಕ್ಷಣಗಳಲ್ಲಿ ಅದೂ ಕೇಳಿಸದಂತಾಯಿತು. ಮೌನ ತುಂಬಿದ ಹಾಗೆಯೇ ಕತ್ತಲೂ ಹೆಚ್ಚಾಯಿತು. ನಾನಿನ್ನೂ ನೆಲದ ಮೇಲೆ ಕೂತೇ ಇದ್ದೆ. ಚಳಿ ಮತ್ತು ಹಸಿವೆಯಿಂದ ಎಲ್ಲವನ್ನೂ ಕಳಕೊಂಡಿದ್ದೆ.

ತುಂಬ ಹೊತ್ತು ಕೂತ ನಂತರ ನಿಧಾನವಾಗಿ ಎದ್ದೆ. ಏಳುವುದು ಕಷ್ಟವೇ ಆಯಿತು. ಒಂದೊಂದು ಅಂಗವನ್ನು ಸರಿಸಿದಾಗಲೂ ಅಸಾಧ್ಯ ನೋವಿನಿಂದ ನರಳಿದೆ. ಆದರೂ ಎದ್ದು ಟ್ರಕ್‌ನ ಬಳಿಗೆ ಹೋದೆ. ಸಂಪೂರ್ಣ ನಾಶವಾದಂತೆ, ಗಾಯವಾದಂತೆ, ಎಲ್ಲ ಭಾಗವೂ ನಜ್ಜುಗುಜ್ಜಾದಂತೆ ಕರುಣಾಪೂರಿತವಾಗಿ ಟ್ರಕ್ಕು ನಿಂತುಕೊಂಡಿತ್ತು. ನಾನೂ ಹಾಗೆಯೇ ಪೂರ್ತಿ ನಾಶವಾಗಿ, ಗಾಯಗೊಂಡು, ನಜ್ಜುಗುಜ್ಜಾಗಿ ನಿಂತಿದ್ದೆ.

ಸುತ್ತ ಸಂಪೂರ್ಣ ಕತ್ತಲು ತುಂಬಿತ್ತು. ಒಂದೂ ಕಾಣುತ್ತಿರಲಿಲ್ಲ. ನನ್ನಂತೆ ನೋವಿನಿಂದ ಮುಲುಗುಟ್ಟುತ್ತಿರುವ ಈ ಟ್ರಕ್ ಒಂದೇ ನನ್ನ ಜೊತೆಗಾರನಾಗಿತ್ತು. ಆ ಟ್ರಕ್ಕನ್ನು ನೋಡಿ ನನಗೆ ಅತೀವ ದುಃಖವೆನಿಸಿತು. ಅದೂ ನನ್ನತ್ತ ನೋಡಿ ದುಃಖಪಡುತ್ತಿದ್ದಂತೆ ಕಂಡಿತು. ಅದರ ಮೈಯನ್ನು ಪವಿತ್ರಗೊಳಿಸುವಂತೆ ಕೈಯಿಂದ ಮುಟ್ಟಿ ಸವರಿದೆ. ಅದರ ಮೈಯೆಲ್ಲ ತಣ್ಣಗಿತ್ತು. ನಿಧಾನಕ್ಕೆ ಗಾಳಿ

ಬಂದು ನೇವರಿಸುತ್ತಾ ಹೋಯಿತು. ಮರಗಳ ಮೇಲಿನ ಎಲೆಗಳು ಅಲ್ಲಾಡಿದುವು. ಸಮುದ್ರದಂತೆ ಶಬ್ದ ಮಾಡಿದುವು. ಆ ಶಬ್ದಗಳು ನನ್ನನ್ನು ಹೆದರಿಸಿದುವು. ನನ್ನ ಮೈಯೂ ಟ್ರಕ್ಕಿನಂತೆ ತಣ್ಣಗಾಗತೊಡಗಿತು.

ನಾನು ಬಾಗಿಲು ತೆಗೆದು ಟ್ರಕ್ಕಿನ ಒಳಗೆ ಹೋದೆ. ಆ ಸೀಟನ್ನು ಅವರು ಹರಿದು ಹಾಕಿರಲಿಲ್ಲವಾದುದರಿಂದ ಕೂರಲು ಸ್ವಲ್ಪ ಆರಾಮವೆನಿಸಿತು. ನಾನು ಅಡ್ಡಾಗಿ ಮಲಗಿದಾಗ ಪೆಟ್ರೋಲಿನ ವಾಸನೆ ಮೂಗನ್ನಡರಿತು. ಆ ವಾಸನೆ ನನ್ನ ಮೈಯಿಂದ ಹೊರಬಿದ್ದ ರಕ್ತದ ವಾಸನೆಯ ಹಾಗೇ ಇತ್ತು. ಹೊರಗಡೆ ಚಳಿ ಗಾಳಿ ಜೋರು ಜೋರಾಗಿ ಬೀಸತೊಡಗಿತು. ಆದರೆ ಒಳಗಡೆ ಸೀಟಿನ ಮೇಲೆ ಮಲಗಿದ್ದುದರಿಂದ ಮೈ ತುಸು ಬೆಚ್ಚಗಾಗತೊಡಗಿತ್ತು. ಈ ಟ್ರಕ್ಕನ್ನು ಅವರು ಭಂಗಮಾಡಿ, ಅದರ ರೂಪವನ್ನು ನಾಶ ಮಾಡಿದ್ದರೂ ನನ್ನ ಹಾಗೆಯೇ ಅದರ ಎದೆಗೂಡು ಬೆಚ್ಚಗಿದೆಯೆಂದೆನಿಸಿತು ನನಗೆ. ನನ್ನ ಎದೆಯೂ ಬೆಚ್ಚಗಿದೆಯೆನ್ನುವುದು ನನಗೆ ಗೊತ್ತಿತ್ತು. ಉದ್ದಕ್ಕೂ ನಾನು ಒಂದು ಹೋಟೆಲನ್ನು ಹುಡುಕುತ್ತಿದ್ದೆ, ಆದರೆ ಅದು ನನ್ನ ಎದೆಯೊಳಗೇ ಇತ್ತು.

ಟ್ರಕ್ಕಿನ ಎದೆಯೊಳಗೆ ಮಲಗಿಕೊಂಡಿದ್ದಾಗ ನಾನು ಬಿಸಿಲು ಜೋರಾಗಿದ್ದ ಮಧ್ಯಾಹ್ನದ ಕುರಿತು ಯೋಚಿಸಿದೆ. ಆಗ ಬಿಸಿಲು ಚೆನ್ನಾಗಿತ್ತು. ಅರ್ಧದಿನ ಪೂರ್ತಿ ಆಟ ಆಡಿ ದಣಿದು ನಾನು ಮನೆ ಸೇರಿದುದನ್ನು ನೆನಪುಮಾಡಿಕೊಂಡೆ. ಕಿಟಕಿಯ ಮೂಲಕ ಒಳಗೆ ಹಿಣಿಕಿದೆ. ಒಳಗೆ ಅಪ್ಪಯ್ಯ ನನ್ನ ಕೈ ಚೀಲವನ್ನು ಸಿದ್ಧ ಮಾಡುತ್ತ ಇದ್ದರು. ಕಿಟಿಕಿಗೆ ಒರಗಿ ನಿಂತು ನಾನು "ಅಪ್ಪಯ್ಯ, ಎಲ್ಲಾದರೂ ಹೊರಟಿದ್ದೀಯಾ?" ಎಂದು ಕೇಳಿದೆ.

ಅಪ್ಪಯ್ಯ ನನ್ನತ್ತ ತಿರುಗಿ ವಾತ್ಸಲ್ಯದಿಂದ "ಇಲ್ಲ, ನೀನು ಹೊರಡಲು ಅಣಿಮಾಡುತ್ತಿದ್ದೇನೆ" ಎಂದರು.

"ನಾನು ಹೋಗಲ?"

"ಹೌದು, ನಿನಗೆ ಹದಿನೆಂಟಾಯಿತು. ಹೊರಗಿನ ಜಗತ್ತನ್ನು ಅನುಭವಿಸುವ ಸಮಯವೀಗ"

ಆಮೇಲೆ ನಾನು ಆ ಕೆಂಪು ಕೈ ಚೀಲವನ್ನು ಬೆನ್ನಿಗೇರಿಸಿದೆ. ಅಪ್ಪಯ್ಯ ಕುದುರೆಯ ಹೆಗಲು ತಟ್ಟುವಂತೆ ನನ್ನ ತಲೆ ತಟ್ಟಿದರು. ನಾನು ಕುದುರೆಯಂತೆ ಹಾರುತ್ತಾ ಖುಷಿಯಿಂದ, ಮನೆಯಿಂದ ಹೊರಬಿದ್ದಿದ್ದೆ.

□

---

ಗೋಪಾಲಕೃಷ್ಣ ಪೈ
೧೧೪ ಎ, ಅಮರಜ್ಯೋತಿ ಅಪಾರ್ಟ್‌ಮೆಂಟ್ಸ್, ಯಡಿಯೂರು ಲೇಕ್ ಎದುರು, ೮೫, ಕನಕಪುರ ರಸ್ತೆ
ಜಯನಗರ ೬ನೇ ಬ್ಲಾಕ್, ಬೆಂಗಳೂರು - ೫೬೦ ೦೮೨
(ಮೊಬೈಲ್ : ೯೮೪೮೦೧ ೪೧೬೧೮)

# ಶೆರ್ಲಕ್

ಮಲಯಾಳಂ ಮೂಲ : ಎಂ.ಟಿ. ವಾಸುದೇವನ್ ನಾಯರ್
ಅನುವಾದ : ಕೆ.ಕೆ. ನಾಯರ್

ಸಾವಕಾಶ ಎದ್ದರೆ ಸಾಕು ಎಂದು ಅಕ್ಕ ಹೇಳಿದ್ದಳು. ಅಕ್ಕ ಐದೂವರೆಗೆ ಏಳುವಳು. ಏಳಕ್ಕೆ ಹೊರಡುವಳು. ಒಂದು ಗಂಟೆ ಹದಿನೈದು ಮಿನಿಟು ಕಾರು ನಡೆಸಬೇಕು ಉದ್ಯೋಗ ಸ್ಥಳಕ್ಕೆ.

ಮುಚ್ಚಿದ್ದ ಬಾಗಿಲನ್ನು ಯಾರೋ ತೆರೆದಾಗ ಎಚ್ಚರಗೊಂಡನು ಬಾಲು. ತೆರೆದದ್ದು ಬೆಕ್ಕು. ಗಂಟೆ ಏಳು. ಕೆಳಗಡೆಗೆ ಬಂದಾಗ, ಅಕ್ಕ ಹೊರಟಿರುವಳು.

"ಎದ್ದೆಯಾ? ನಿನಗೆ ಒಂದು ಚೀಟಿ ಬರೆದಿರಿಸಿದ್ದೇನೆ ಫ್ರಿಜ್‌ನ ಮೇಲೆ."

ರಾತ್ರಿ ಅಕ್ಕ ಎರಡು ವಿಷಯಗಳನ್ನು ಹೇಳಲು ಮರೆತಿದ್ದಳು: ಮುಂಬಾಗಿಲಿನ ಕೀಲಿಕೈಯಿರುವುದು ನಟರಾಜ ವಿಗ್ರಹದ ಕೆಳಗೆ. ಬಾಗಿಲು ತನ್ನಷ್ಟಕ್ಕೆ ಮುಚ್ಚುತ್ತದೆ. ಹೊರಗೆ ಹೋಗುವಾಗ ಕೀಲಿಕೈ ಒಯ್ಯಬೇಕು.

"ಇಲ್ಲ, ನಾನು ಹೊರಗೆ ಹೋಗುವುದಿಲ್ಲ."

"ಗುಡ್! ಓದಬಹುದು. ಟಿವಿಯಲ್ಲಿ ಅನೇಕ ಕಾರ್ಯಕ್ರಮಗಳಿರುತ್ತವೆ. ನನ್ನ ಕೋಣೆಯಲ್ಲಿ ಕುಳಿತುಕೋ, ಟಿವಿ ನೋಡ್ಬೇಕಾದ್ರೆ.."

ಗಮನಿಸಬೇಕಾದ ಎರಡನೆಯ ವಿಷಯ : ಕೆಳಗಿನ ಬಚ್ಚಲುಮನೆಯ ಬಾಗಿಲು ಸದಾ ತೆರೆದಿರಿಸಬೇಕು. ಯಾಕೆಂದರೆ, ಬೆಕ್ಕಿನ ಆಹಾರ ತಟ್ಟೆ ಮತ್ತು ಹೇಲಿನ ಪೆಟ್ಟಿಗೆ ಇರುವುದು ಅದರೊಳಗೆ.

ನಾಲ್ಕೂವರೆಗೆ ಮರಳಿ ಬರುತ್ತೇನೆ, ಎಂದ ಅಕ್ಕ ಹೊರತೆರಳಿ ಬಾಗಿಲು ಮುಚ್ಚಿದಳು. ಬೆಕ್ಕು,

ಹೂಗಿಡಗಳ ಚಟ್ಟಿಗಳನ್ನು ಇರಿಸಲಾದ ಕಿಟಕಿ ಪಟ್ಟಿಯ ಮೇಲಕ್ಕೆ ಜಿಗಿದು ನಿಂತುಕೊಂಡು ಕಿಟಕಿಯ ಗಾಜಿನ ಮೂಲಕ ಹೊರಗೆ ದಿಟ್ಟಿಸತೊಡಗಿತು. ಅಕ್ಕ ಕಾರ್‌ಪಾರ್ಕಿನಿಂದ ಹೊರಕ್ಕೆ ಡ್ರೈವ್ ಮಾಡುತ್ತ ಹೋದಾಗ ಬೆಕ್ಕು ಬಾಲುವನ್ನು ನೋಡಿ, ಕಳಗಿಳಿಯಿತು.

'ಇನ್ನು ಆಡಳಿತ ನನ್ನದು' ಎಂದು ಹೇಳುತ್ತಿರುವಂತೆ ಭಾಸವಾಗುತ್ತಿದೆ ಬೆಕ್ಕಿನ ನೋಟ ಕಂಡರೆ.

ಬಾಲುವಿಗೆ ಶುಕ್ರವಾರ ಸಂಜೆ ಫಿಲ್ಡಲ್ಫಿಯಕ್ಕೆ ಬಂದು ಇಳಿಯಲು ಅನುಕೂಲವಾಗುವ ಹಾಗೆ ಟಿಕೆಟ್ ಗೊತ್ತುಮಾಡಿದ್ದಳು ಅಕ್ಕ. ಶನಿವಾರ ಮತ್ತು ಭಾನುವಾರ ಅಕ್ಕ ಮನೆಯಲ್ಲಿರುವಾಗ ಮನೆಯನ್ನೂ ಮನೆಯ ಯಂತ್ರಗಳನ್ನೂ ಅರಿತುಕೊಳ್ಳಬಹುದಲ್ಲ. ಅಮೆರಿಕನ್ ವೇಳೆಯೊಂದಿಗೆ ಇಂಡಿಯನ್ ಶರೀರವನ್ನು ಹೊಂದಿಸಿಕೊಳ್ಳಲು ಸಮಯಾವಕಾಶವೂ ದೊರೆಯುತ್ತದೆ. ಆಹಾರವಸ್ತುಗಳು ಯಾವ ಯಾವುದರಲ್ಲಿ ಇವೆ. ವಿಟಮಿನ್ ಮಾತ್ರೆಗಳು ಯಾವುದೆಲ್ಲ ಇವೆ-ಎಲ್ಲವನ್ನೂ ನಿಖರವಾಗಿ ತಿಳಿದುಕೊಂಡನು. ಮೈಕ್ರೋವೇವ್‌ನ ಬಟನ್‌ಗಳನ್ನು ಒತ್ತಲೂ ಕಲಿತುಕೊಂಡನು.

ಅಕ್ಕ ಹೇಳಿದ್ದಳು : "ಬೇಕಾದಷ್ಟು ವಿಶ್ರಮಿಸು. ಮಧ್ಯ ಮಧ್ಯದಲ್ಲಿ ಓದುತ್ತಾ ಇರು."

ಅಕ್ಕ ಚಿಕ್ಕಂದಿನಿಂದಲೂ ಕೆಲಸ ಕಾರ್ಯಗಳಲ್ಲಿ ಕಟ್ಟುನಿಟ್ಟಿನವಳು.

ಎರಡು ತಿಂಗಳ ಕಾಲಾವಧಿಯೊಳಗೆ ತಮ್ಮನ ಶರೀರವನ್ನೂ ಮನಸ್ಸನ್ನೂ ದುರಸ್ತಿಪಡಿಸಲು ನಿರ್ಧರಿಸಿರುವಳು ಅಕ್ಕ.

"ಬೇಕೆನಿಸಿದರೆ ನೀನು ಏನಾದರೂ ಬರೀಬಹುದು; ಅಮೆರಿಕನ್ ಇಂಪ್ರೆಶನ್ಸ್. ಆರು ತಿಂಗಳಿಗೊಮ್ಮೆ ಹತ್ತು ಸಾಲು ಕವಿತೆ ಬರೆದ ಮಾತ್ರಕ್ಕೆ ಬದುಕಲು ಸಾಧ್ಯವಾ?"

ಬಾಲು ಯಾವ ಮಾತೂ ಆಡಲಿಲ್ಲ.

"ಇಂಗ್ಲಿಷ್ ಲಿಟರೆಚರ್‌ನಲ್ಲಿ ಎಂ.ಎ., ಜರ್ನಲಿಸಂನಲ್ಲಿ ಡಿಪ್ಲೋಮ. ಹೈಲಿ ಕ್ವಾಲಿಫೈಡ್. ಎಷ್ಟೊಂದು ಸಾಧ್ಯತೆಗಳಿಲ್ಲ!"

ಅಕ್ಕ ತುಸು ಹತಾಶಾಭಾವದಲ್ಲಿ ನಿಟ್ಟುಸಿರು ಬಿಟ್ಟಳು. ಬಂದು ತಲುಪಿದ ತತ್‌ಕ್ಷಣ ಒಂದು ವಾಗ್ವಾದಕ್ಕೆ ತಯಾರಾಗಲಿಲ್ಲ ಬಾಲು. ಮನಸ್ಸಿನಲ್ಲಿ ಹೇಳಿದ: ದೇವರು ಮತ್ತು ನನ್ನ ನಡುವಿನ ವ್ಯವಹಾರದಲ್ಲಿ ಎಲ್ಲೆಲ್ಲೋ ಎಡವಟ್ಟುಗಳಾಗಿವೆ.

ಅಕ್ಕ ಒಂದು ಸ್ಕಾಲರ್‌ಶಿಪ್‌ಗೆ ಪ್ರಯತ್ನಿಸುತ್ತಿದ್ದಾಳೆ. ಎಲ್ಲಿಗೆಲ್ಲ ಅರ್ಜಿ ಗುಜರಾಯಿಸಬೇಕು ಎಂಬುದನ್ನು ಜಯಂತ್ ಹೇಳುವರು.

"ದುಡಿಯುವವರಿಗಷ್ಟೇ ಇಲ್ಲಿ, ಅಮೆರಿಕದಲ್ಲಿ, ಏನಾದರೂ ಆಗಿ ಮೇಲೇರಲು ಸಾಧ್ಯ. ಯಶಸ್ಸಿನ ಮಹಡಿಯಿರುವುದು ಆಗಸಕ್ಕಿಂತಲೂ ಎತ್ತರದಲ್ಲಿ."

ಆಮೇಲೆ ಅಕ್ಕ ಸಂತೈಸಲೆಂಬಂತೆ ಮಲಯಾಳಂನಲ್ಲಿ ಹೇಳಿದಳು :

"ಕೆಲವೆಲ್ಲ ಎಟುಕಿಯಾವು; ಎಟುಕಿಸೋಣ ನಾವು."

ಕೆಲವು ಪವಾಡಗಳೂ ಸಂಭವಿಸಿಯಾವು ಈ ಇಪ್ಪತ್ತೇಳನೆಯ ವಯಸ್ಸಿನಲ್ಲಿ! ಅಕ್ಕನಿಗೆ ಈಗಲೂ ತಮ್ಮನಲ್ಲಿ ಭರವಸೆಯಿದೆ. ನೆತ್ತರು ಕಾರುತ್ತಾ ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದಿದ್ದಾಗ ಅಕ್ಕ ಹಲವಾರು ಬಾರಿ ಕರೆದಿದ್ದಳೆಂದು ಆಮೇಲೆ ಗೊತ್ತಾಗಿದೆ. ನಮ್ಮೆಲ್ಲರ ಪ್ರಾರ್ಥನೆಗಳಿಂದಾಗಿಯೇ ಮರಣವು ದಾರಿ ಬದಲಾಯಿಸಿದೆ ಎಂದು ದೊಡ್ಡಕ್ಕ ನೆನಪಿಸುತ್ತಾ ಇರುತ್ತಾರೆ.

ಚೆಕ್ಕು ಬಚ್ಚಲುಮನೆಯನ್ನು ಹೊಕ್ಕಾಗ ಬಾಲು ಅಡುಗೆಮನೆಗೆ ಬಂದು ಚಹಾ ತಯಾರಿಸಿದ. ತನ್ನ ಬಳಿ ಉಳಿದಿದ್ದ ಒಂದು ಮುರುಕು ಸಿಗರಟ್ ಹಚ್ಚಿದ. ಅಡುಗೆಮನೆಯಲ್ಲಿ ಮ್ಯೂಸಿಕ್ ಸಿಸ್ಟಮ್ ಮತ್ತು ಪಾಕಪುಸ್ತಕವನ್ನು ಇರಿಸಲಾದ ಮೇಜಿನ ಮೇಲಿನ ಹೂಜಟ್ಟಿಯಲ್ಲಿ ಸಿಗರಟ್ ಚುಕ್ಕಿ ಆರಿಸಿದಾಗ ಪ್ರತಿಭಟನೆಯ ಹಾಗೆ ಹೊರಟಿತು ಒಂದು ಗುರುಗುಟ್ಟು. ಹೊರಡಿಸಿದ್ದು ಚೆಕ್ಕು. ಇಲ್ಲಿ ಯಾರೂ ಸಿಗರಟ್ ಸೇದುವುದಿಲ್ಲ.

ಈ ಚೆಕ್ಕಿನ ಕುರಿತೇ ಅಕ್ಕ ಹೆಚ್ಚಿಗೆ ಮಾತನಾಡಿದ್ದು ಮೊದಲ ದಿನ. ಮೊದಲು ದೊಡ್ಡಕ್ಕನ ಕುರಿತೂ ಆಕೆಯ ಮಕ್ಕಳ ಕುರಿತೂ ವಿಚಾರಿಸಿದಳು. ಕುಟ್ಟಿಮಾವನ ಮಗಳ ಮದುವೆಗೆ ನೂರು ಡಾಲರ್ ಕಳುಹಿಸಿ ಕೊಟ್ಟಿರುವುದಾಗಿ ತನ್ಮಧ್ಯೆ ಹೇಳಿದಳು. ಬಳಿಕ ಅಕ್ಕನ ತೊಡೆಯ ಮೇಲೆ ಹತ್ತಿ ಕುಳಿತ ಚೆಕ್ಕಿನ ಕುರಿತು ಬಣ್ಣಿಸತೊಡಗಿದಳು. ಮನೆಯೊಳಗೆ ಒಬ್ಬಂಟಿಯಾದಾಗ ಯಾವುದಾದರೂ ಇನ್ನೊಂದು ಜೀವ ಸುತ್ತಿಸುಯುತ್ತಿರುವುದು  ಕಾಣುವಾಗ ತುಸು ಹಾಯೆನಿಸುತ್ತದೆ. ಜಯಂತ್ ಮರಳಿ ಬರುವಷ್ಟರಲ್ಲಿ ಕೆಲವೊಮ್ಮೆ ತಿಂಗಳುಗಳೇ ಕಳೆದಿರುತ್ತವೆ.

“ತಿಂಗಳು ಎಂದು ಈಗ ಹೇಳ್ತಿದ್ದೇನೆ. ಯಾರಿಗ್ಗೊತ್ತು” ಅಕ್ಕನ ಸ್ವರದಲ್ಲಿ ಅಸಮಾಧಾನವಿತ್ತು.

ಹತ್ತರಲ್ಲಿ ಒಂದಂಶವನ್ನೋ ಹದಿನೈದರಲ್ಲಿ ಒಂದಂಶವನ್ನೋ ಮೊದಲು ಪಾವತಿಸಿ ಮನೆಯನ್ನೋ ಕಾರನ್ನೋ ಖರೀದಿಸುವ ಅದ್ಭುತದ ಕುರಿತಾಗಿತ್ತು ಏರ್ಪೋರ್ಟಿನಿಂದ ಬರುವಾಗ ಹೇಳಿದ್ದು. ಮನೋಹರವಾದ ಈ ಸ್ಥಳದಲ್ಲಿ ಮನೆಗಳು ನಿರ್ಮಿಸಲ್ಪಟ್ಟಾಗ ಅವುಗಳಲ್ಲಿ ಒಂದನ್ನು ಕಷ್ಟದಲ್ಲೆ ಆದರೂ ಖರೀದಿಸಿದೆವು. ಸುತ್ತಲೂ ವಿಶಾಲ ಸ್ಥಳಗಳಿವೆ. ಗೋಲ್ಡ್ ಕೋರ್ಟ್ ಡ್ರೈವ್ ಮಾಡುತ್ತ ಸಾಗುವುದು ಕಷ್ಟವೇ; ಅದರಲ್ಲೂ, ಏಳು ಗಂಟೆಗೂ ಕತ್ತಲೆ ಸರಿಯದ ಚಳಿಗಾಲದಲ್ಲಿ. ಆದರೂ ಈ ಮನೆ ಸಿಕ್ಕಿದ್ದೇ ಅಕ್ಕನ ಅದೃಷ್ಟದಿಂದ ಎಂದು ಅಕ್ಕನ ಪರಿಚಿತರೆಲ್ಲರೂ ಹೇಳುತ್ತಾರೆ.

ಜಯಂತ್ ಪಶ್ಚಿಮ ಕರಾವಳಿಯ ಸಾನ್‌ಹೊಸೆಯ್‌ಗೆ ತೆರಳುವ ಮುನ್ನ ಯಾವ ಅಡಚಣೆಯೂ ಇರಲಿಲ್ಲ. ಎಲ್ಲ ಕಂತುಗಳನ್ನೂ ಪಾವತಿಸಿದ ಬಳಿಕವೂ ಒಂದಿಷ್ಟು ಉಳಿಸಲು ಸಾಧ್ಯವಾಗುತ್ತಿತ್ತು. ಈಗ ಎರಡು ಮನೆಗಳು ಬೇಕಲ್ಲ. ಅಕ್ಕ ಹೇಳಿದಳು, ಒಬ್ಬಂಟಿಯಾಗುವಾಗ, ಶೆರ್ಲಕ್ ಬಳಿ ಮಾತಾಡಲು ಶುರು ಮಾಡಿದ್ದೇನೆ.

“ನನ್ನ ದನಿ ಒಮ್ಮೊಮ್ಮೆಯಾದರೂ ಕೇಳ್ಬೇಕಲ್ಲ!”

ಬಾಲುಗೆ ಕಡುಕೆನಿಸಿತು.

ಶೆರ್ಲಕ್‌ನ ಬಣ್ಣ ವಿಲಕ್ಷಣವಾಗಿತ್ತು-ನಸು ನೀಲಿ. ಅಲ್ಲ, ಬೂದುಮಿಶ್ರಿತ ನಸುನೀಲಿ-ಎನ್ನಬಹುದು. ವಿಷಯಾಂತರಕ್ಕಾಗಿ ವಿಚಾರಿಸಿದ: “ಆಗ, ಏನೆನ್ನುತ್ತದೆ ಸಯಾಮೀಸ್?”

"ಸಯಾಮಿಸ್, ಅಲ್ಲ. ಬೇರೆ ಯಾವುದೋ ಒಂದು ತಳಿ. ಜಯಂತ್‌ಗೆ ವೆಟರಿನರಿ ಡಾಕ್ಟರ್ ಹೇಳಿದ್ದರು. ನನಗೆ ನೆನಪಿಲ್ಲ."

ಕಳೆದ ಚಳಿಗಾಲದಲ್ಲಿ ಕಾರ್ ಪಾರ್ಕ್‌ನ ಹೊರಗೆ ಅದು ಸುತ್ತಿ ಸುಳಿಯುತಿರುವುದು ಕಾಣಿಸಿತ್ತು. ಆಗ ಗಮನಿಸಲಿಲ್ಲ. ಆಮೇಲೆ ಅದು ರಾತ್ರಿ ಮನೆಬಾಗಿಲಿಗೆ ಬಂದು ಪರಚಿ ಸದ್ದೆಬ್ಬಿಸಿತು. ಬಾಗಿಲು ತೆರೆದಾಗ ಚಳಿಯಿಂದ ಪಾರಾದ ಸಂತಸದೊಂದಿಗೆ ಒಳಗೆ ಬಂದು ಸೋಫಾದ ಮೇಲೆ ಮುದುಡಿ ಮಲಗಿತು. ಹಾಲು ಕೊಟ್ಟೆ.

ಯಾವುದೋ ಮನೆಯವರು ಸಾಕಿದ್ದ ಬೆಕ್ಕಿರಬೇಕು. ಮನೆಯೊಳಗೆ ವರ್ತಿಸಬೇಕಾದ ತರಬೇತಿ ಹೊಂದಿದೆ. ಬೆಕ್ಕು ಕಾಣಿಸಿದ್ದ ಸುದ್ದಿಯನ್ನು ಬರೆದು ಕಾಲೋನಿಯ ಅಂಚೆಪೆಟ್ಟಿಗೆಯ ಪಕ್ಕದ ಸೂಚನಾಫಲಕದಲ್ಲಿ ಅಂಟಿಸಿದ್ದೆ. ಯಾರೂ ವಿಚಾರಿಸಿಕೊಂಡು ಬರಲಿಲ್ಲ.

ಶೆರ್ಲಕ್ ಎಂದು ಹೆಸರಿಟದ್ದು ಜಯಂತ್.

"ಶೆರ್ಲೋಕ್?"

"ಚಿಕ್ಕಂದಿನಲ್ಲಿ ಜಯಂತ್ ಬಹಳಷ್ಟು ಪತ್ತೆದಾರಿ ಕಥೆಗಳನ್ನು ಓದುತ್ತಿದ್ದ. ಇವನ ಪೂರ್ಣ ಹೆಸರು ಶೆರ್ಲಕ್ ಹೋಮ್ಸ್ ಎಂದು. ವೆಟರಿನರಿ ಡಾಕ್ಟರ ರಿಜಿಸ್ಟರಿಯಲ್ಲಿ ಶೆರ್ಲಕ್ ಹೋಮ್ಸ್ ಶಿಂಥೆ!"

ಅಕ್ಕ ನಕ್ಕಳು. ಅಕ್ಕನ ಗೊಳ್ಳನೆಯ ಒಂದು ನಗೆ ಕೇಳುತ್ತಿರುವುದು ವರ್ಷಗಳ ಬಳಿಕ ಎಂಬುದನ್ನು ಬಾಲು ಜ್ಞಾಪಕಕ್ಕೆ ತಂದುಕೊಂಡನು.

ಅಮೆರಿಕದ ಸಾಕುಬೆಕ್ಕುಗಳೂ ಅದ್ಭುತಜೀವಿಗಳೇ. ಮನೆಯಲ್ಲಿರುವ ಆಹಾರ ವಸ್ತುಗಳನ್ನು ಮುಚ್ಚಳ ತೆರದಿಟ್ಟರು ಕೂಡ ಅದರತ್ತ ನೋಡುವುದಿಲ್ಲ. ಪೊಟ್ಟಣಗಳಲ್ಲಿದ್ದು ಅಂಗಡಿಯಿಂದ ಖರೀದಿಸಿ ತರುವ ಕ್ಯಾಟ್ ಫುಡ್ ಮಾತ್ರ ತಿನ್ನುತ್ತವೆ. ಕದ್ದು ತಿನ್ನದೆ ಬೆಕ್ಕುಗಳಿರುವ ಏಕಮಾತ್ರ ದೇಶ!

ಬಚ್ಚಲು ಮನೆಯೊಳಗೆ ಬೆಕ್ಕಿನ ಸಲುವಾಗಿ ಮಾಡಲಾದ ಸಜ್ಜೀಕರಣಗಳನ್ನು ಬಾಲು ಗಮನಿಸಿದ. ಒಂದು ಬಟ್ಟಲಿನಲ್ಲಿ ಆಹಾರ, ಇನ್ನೊಂದರಲ್ಲಿ ನೀರು. ದೊಡ್ಡ ಬುಟ್ಟಿಯಲ್ಲಿ ಕುಳಿತು ನಿಖರವಾಗಿ ಹೇಲುತ್ತದೆ. ಸಾಕುಬೆಕ್ಕುಗಳು ಯಾವತ್ತೂ ಮನೆಯನ್ನು ಹೊಲಸು ಮಾಡುವುದಿಲ್ಲ.

"ನೀನು ನಂದಿನಿಯನ್ನು ನೋಡಲಿಲ್ಲವಾ? ಡಾಕ್ಟರ್ ಜಿ.ಕೆ. ನಾಯರರ ಮಗಳು ನಂದಿನಿಯನ್ನು?"

ಬಾಲುಗೆ ನೆನಪಿದೆ. ನಂದಿನಿಯ ತಂಗಿಯೊಬ್ಬಳು ಎಂ.ಎ. ತರಗತಿಯಲ್ಲಿದ್ದಳು.

ನಂದಿನಿ ಇರುವುದು ನ್ಯೂಜೆರ್ಸಿಯಲ್ಲಿ. ನಂದಿನಿಯ ಮನೆಯಲ್ಲಿ ಎರಡು ಬೆಕ್ಕುಗಳಿವೆ. ಅವು, ಸೂಪರ್ ಮಾರ್ಕೆಟ್‌ನಲ್ಲಿ ಅಗ್ಗ ಬೆಲೆಗೆ ಮಾರಿ ಖಾಲಿ ಮಾಡುವಾಗ ಖರೀದಿಸುವ ಕ್ಯಾಟ್‌ಫುಡ್ ಕೊಟ್ಟರೆ ತಿನ್ನುವುದಿಲ್ಲ. ಮೂಸಿ ನೋಡಿದರೆ ಹಳೆಯ ಸ್ಟಾಕ್ ಎಂಬುದು ಬೆಕ್ಕುಗಳಿಗೆ ಗೊತ್ತಾಗುತ್ತದೆ. ಅಕ್ಕ ಪುನಃ ನಕ್ಕಳು.

ನಂದಿನಿಯನ್ನು ಕರೆಯೋಣ. ನಾವು ಒಂದು ವೀಕ್‌ಎಂಡಿನಲ್ಲಿ ಅಲ್ಲಿಗೆ ಹೋಗುವಾ. ಜಯಂತ್ ಬರಲಿ."

ಚೆಕ್ಕು ಮೆಲ್ಲ ಮೆಲ್ಲಗೆ ಬಾಲುವಿನ ಸಮೀಪಕ್ಕೆ ಸರಿದು ಮಡಿಲಿಗೆ ಕಾಲಿರಿಸಿದಾಗ ಅಕ್ಕ ಹೇಳಿದಳು: "ಹೆದರಬೇಡ; ಉಗುರಿಲ್ಲ"

ಫರ್ನಿಚರ್‌ಗಳ ಮೇಲೆ ಜಿಗಿದು ಓಡಾಡುವಾಗ ಉಗುರುಗಳು ತಾಗಿ ಗೆರೆ ಬೀಳತೊಡಗಿತು. ಆಗ ಜಯಂತ್ ಮೃಗಾಸ್ಪತ್ರೆಗೆ ಒಯ್ದು ಅಪರೇಟ್ ಮಾಡಿಸಿ ಉಗುರು ತೆಗೆಸಿದ್ದ. ಬಾಲು ಆಗ ತುಸು ಸಂತಾಪದೊಂದಿಗೆ ಚೆಕ್ಕನ್ನು ನೋಡಿದ.

"ಅನ್ಯಾಯವೇ. ಆದರೆ, ಕೋಸ್ಟ್ಲಿ ಫರ್ನಿಚರ್‌ಗಳೆಲ್ಲ-ಆಪರೇಶನ್ ಮಾಡಿದಾಗ ನೋವಾಗುವುದೇ ಇಲ್ಲ. ಮುಂದೆ ಉಗುರು ಬೆಳೆಯುವುದು ಇಲ್ಲ. ನಂದಿನಿಯೂ ಅದನ್ನೇ ಮಾಡಿದ್ದಳು. ಅದನ್ನು ಇಲ್ಲಿ ಎಲ್ಲರೂ ಮಾಡುತ್ತಾರೆ."

ರಾತ್ರಿ ಅಕ್ಕನ ಹಾಸಿಗೆಯಲ್ಲೇ ಶೆರ್ಲಕ್‌ನ ಶಯನ. ಅಲಾರಾಂ ಹೊಡೆಯುವ ಮೊದಲೇ ಶೆರ್ಲಕ್ ತಟ್ಟುತ್ತ, ತಡವುತ್ತ ಎಬ್ಬಿಸುವುದನ್ನು ರೂಢಿಸಿಕೊಂಡಿದೆಯಂತೆ.

ಸಾನ್‌ಹೋಸೆಯ್‌ಗೆ ಅಕ್ಕ ಒಂದು ವಾರ ರಜೆ ಪಡೆದು ಹೋದಾಗ ನೀರನ್ನು ಬದಲಾಯಿಸಲೂ ಆಹಾರವನ್ನು ತೆಗೆದುಕೊಡಲೂ ಕೀಲಿಕೈಯನ್ನು ನೆರಮನೆಯಲ್ಲಿ ಕೊಟ್ಟಿದ್ದಳು.

ಬುದ್ಧಿವಂತ ಶೆರ್ಲಕ್ ಸದಾ ಹಿಂಬಾಲಿಸುತ್ತಿದ್ದಾನೆ. ಬಾಲು ಗಮನಿಸಿದ. ಬಂದಾಗಿನಿಂದ ಅತಿಥಿಯ ಮೌಲ್ಯಮಾಪನ ಮಾಡುತ್ತಿದ್ದಾನೆ ಅವನು.

ಸ್ನಾನ ಮಾಡಿ, ತಂಪುಹಾಲಿನಲ್ಲಿ ಸಿರಿಯಲ್ಸ್ ಸುರಿದು ಸೇವಿಸಿ ಬಾಲು ಅಕ್ಕನ ಮಲಗುವ ಕೋಣೆಯೊಳಗೆ ಹೋದ. ಜಯಂತ್‌ನ ಕಂಪ್ಯೂಟರ್ ಪುಸ್ತಕಗಳೇ ಜಾಸ್ತಿ. ಚಿಕ್ಕ ಅಲ್ಮಾರದ ಒಳಗೆ ಒಂದಷ್ಟು ಕಾದಂಬರಿಗಳಿವೆ. ಲೆಕಾರೆ, ರಾಬರ್ಟ್ ಲುಡ್‌ಲಂ, ಮಾರ್ಟಿನ್ ಕ್ರುಸ್ ಸ್ಮಿತ್... ಇಂಡಿಯಾದಲ್ಲಿ ಹೆಸರು ಕೇಳಿರದ ಇತರ ಅನೇಕ ಮಂದಿಯ ಹೆಸರುಗಳು. ಎಲ್ಲವೂ ಪ್ರಚಂಡ ಪತ್ತೇದಾರರುಗಳು ಸಾಹಸಿಗರ ಕಥೆಗಳೇ. ಅಕ್ಕ ಹಿಂದೆ ಯಾವಾಗಲೂ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಹುಡುಕಿ ಸಂಗ್ರಹಿಸಿ ಓದುತ್ತಿದ್ದಳು. ಮಂಚದ ಮೇಲೆ ಡಯಾನಾ ರಾಜಕುಮಾರಿಯ ಜೀವನಕಥೆ. ಅದನ್ನೇ ಅಕ್ಕ ಈಗ ಓದುತ್ತಿರಬಹುದು. ಗೋಡೆಯಲ್ಲಿ ಅಕ್ಕ ಮತ್ತು ಜಯಂತ್ ಒಟ್ಟಿಗೆ ಇರುವ ಫೋಟೋ. ಇಬ್ಬರ ಕೈಗಳಲ್ಲೂ ಹೂಗೊಂಚಲುಗಳಿವೆ. ಮದುವೆಯಾದ ದಿನ ತೆಗೆಸಿದ್ದಿರಬಹುದು. ಪಾಶ್ಚಿಮಾತ್ಯ ವಧುವಿನ ಅಚ್ಚ ಬಿಳಿ ಉಡುಗೆ.

ದೊಡ್ಡಕ್ಕನಿಗೆ ಕಳುಹಿಸಿಕೊಟ್ಟಿದ್ದ ಬೇರೊಂದು ಫೋಟೋದಲ್ಲಿ ಇದಕ್ಕಿಂತಲೂ ಚಿಕ್ಕ ಪ್ರಾಯದವನ ಹಾಗೆ ಕಾಣಿಸುತ್ತಿದ್ದನು ಶಿಂಥೆ. ಮೂವತ್ತಾರನೆಯ ವಯಸ್ಸಿನಲ್ಲೂ ಅಕ್ಕ ಚಿಕ್ಕ ಹುಡುಗಿಯ ಹಾಗೆಯೆ ಕಾಣಿಸುತ್ತಿದ್ದಾಳೆ.

'ಡಯಾನಾಳ ಜೀವನಕಥೆಯ' ಚಿತ್ರಗಳನ್ನು ತಿರುಪಿನೋಡುತ್ತ ನಿಂತಿದ್ದಾಗ ಬಾಗಿಲಲ್ಲಿ ಚೆಕ್ಕು ಬಂತು. ಟಿವಿ ಆನ್ ಮಾಡಿದೆ. ಒಂದು ವೈಲಡ್ ವೆಸ್ಟ್ ಚಿತ್ರ. ಆಫ್ ಮಾಡಿದೆ. ಏನನ್ನೋ ಗುರುಗುಟ್ಟುತ್ತ ಬಾಗಲಿಲ್ಲ ನಿಂತಿದೆ ಶೆರ್ಲಕ್.

ಉಗುರು ಇಲ್ಲದಾದಾಗ ಬೆಕ್ಕುಗಳಿಗೆ ಧ್ವನಿಯೂ ನಷ್ಟವಾಗುವುದೇ? ಒಮ್ಮೆ ಕೂಡ ಅದು ಬೆಕ್ಕಿನ ಭಾಷೆಯಲ್ಲಿ ಮ್ಯಾವೂ ಎಂದದ್ದು ಕೇಳಲಿಲ್ಲ-ಮತ್ತೊಂದು ಅದ್ಭುತ.

ಬಾಲು ಒಂದು ಪುಸ್ತಕ ಎತ್ತಿಕೊಂಡು ಹೊರಬಿದ್ದ. ಆತನಿಗೋಸುಗ ಕಾದಿರಿಸಲಾದ ಮಹಡಿಯ ಚಿಕ್ಕ ಮಲಗುವ ಕೋಣೆಗೆ ಹೋಗಿ ಮಲಗಿದ. ಆಗ ಶೆರ್ಲಕ್ ಬಾಗಿಲಿನ ಹೊರಗೆ ಮಲಗಿ ಕಾಲುಗಳನ್ನು ಮೇಲೆ ಮಾಡಿ ವಾಯುವಿನಲ್ಲಿರುವ ಅದೃಶ್ಯ ಶತ್ರುವಿನೊಡನೆ ಯುದ್ಧಮಾಡಿತು. ತುಸು ಹೊತ್ತು. ಆಮೇಲೆ ನಿದ್ರಿಸತೊಡಿಗತು.

ಮನೆಯ ಆಕರ್ಷಣೆಯಾಗಿ ಅಕ್ಕ ಹೇಳಿದ್ದು ಬಿಸಿಲಿಗೆ ಮೈಯ್ಯೊಡ್ಡಿ ಕುಳಿತಿರಬಹುದಾದ ಹಿಂಬದಿಯ ಡೆಕ್. ಅದಲ್ಲದೆ, ಕೆಳಗಡೆ ಒಂದು ದೊಡ್ಡ ನೆಲಮನೆ ಇದೆ.

ನೆಲಮನೆಯ ಬಾಗಿಲಿನ ಬೀಗದಲ್ಲೆ ಬೀಗದ ಕೀಲಿಕೈ ಇದ್ದಿತ್ತು. ನೆಲಮನೆಯೊಳಗೆ ಬಟ್ಟೆ ಒಗೆಯುವ ಯಂತ್ರ, ಜಯಂತ್‌ನ ವ್ಯಾಯಾಮದ ಸಲಕರಣೆಗಳು, ಸ್ಯಕಲ್ ಮೊದಲಾದವು ಇವೆ. ಮಧ್ಯದಲ್ಲಿರುವ ಜಮಖಾನಾದಲ್ಲಿ ಬಾಟಲಿಗಳನ್ನು, ವೈನ್ ಬಾಟಲಿಗಳನ್ನು ಪೇರಿಸಿಡಲಾಗಿದೆ. ಸುಮಾರು ಅರುವತ್ತಿರಬಹುದು. ಎಲ್ಲದರ ಲೇಬಲ್ ಮೇಲೆಯೂ ಗುರುತು ಹಾಕಿ ಜೆ.ಎಸ್. ಎಂದು ಸಹಿ ಮಾಡಲಾಗಿದೆ. ಜೆ.ಎಸ್. ಎಂದರೆ ಜಯಂತ್ ಶಿಂಧೆ.

ಕ್ಯಾಲಿಫೋರ್ನಿಯಾದ ವೈನ್ ಕಂಪೆನಿಗಳ ಹೆಸರುಗಳೇ ಹೆಚ್ಚಿನೆಲ್ಲಾ ಲೇಬಲ್‌ಗಳಲ್ಲೂ ಇವೆ. ಫ್ರೆಂಚ್ ಭಾಷೆಯಲ್ಲಿ ಲೇಬಲ್ ಇರುವ ಒಂದು ಬಾಟಲಿಯನ್ನು ಕೈಗೆತ್ತಿಕೊಂಡು ನೋಡುವಾಗ ಹಿಂಬದಿಯಲ್ಲಿ ಯಾರೋ ಬಂದು ನಿಂತಿರುವಂತೆ ಭಾಸವಾಯಿತು.

ಓ! ನಿದ್ರಿಸುತ್ತಾ ಮಲಗಿದ್ದ ಶೆರ್ಲಕ್ ಹುಡುಕುತ್ತಾ ಬಂದಿರುವನು! ಆಕಳಿಸಿದ ಬಳಿಕ ನೋಡುತ್ತಾ ನಿಂತನು ಒಂದಷ್ಟು ಹೊತ್ತು. ಅವನನ್ನು ನೋಟದಿಂದ ಬೆದರಿಸಲು ಬಾಲು ಒಮ್ಮೆ ಪ್ರಯತ್ನಿಸಿದನು.

"ಊಂ. ಹೋಗು. ಹೋಗು ಹೊರಗೆ."

ಶೆರ್ಲಕ್ ಬಾಟಲಿಗಳ ಪಕ್ಕದಲ್ಲೆ ಮಲಗಿ ಬಾಲದಿಂದ ಅಂತರಿಕ್ಷದಲ್ಲಿ ಚಿತ್ತಾರಗಳನ್ನು ರಚಿಸತೊಡಗಿದನು.

"ಗೆಟೌಟ್!"

ಜಯಂತ್ ಕಲಿಸಿದ್ದಾದರೆ ಅಲ್ಪಸ್ವಲ್ಪ ಹಿಂದಿಯೂ ಗೊತ್ತಿರಬಹುದಲ್ಲ ಬೆಕ್ಕಿಗೆ, ಎಂದುಕೊಂಡು ಹೇಳಿದ :

"ಬಾಹರ್ ಜಾ!"

ಬಾಲು ಯೋಚಿಸಿದ : ನಾನು ನೆಲಮನೆ ತಪಾಸಣೆ ಮಾಡಿದ್ದರ ಪುರಾವೆಯೆಂಬಂತೆ, ಸಂಜೆ ಅಕ್ಕ ಬರುವ ತನಕ ಇಲ್ಲೇ ಮಲಗಿರಲು ನಿರ್ಧರಿಸಿದೆಯೇ ಈ ಬೆಕ್ಕು?

ಹಸಿವಾದಾಗ ಹೊರಗೆ ಬಾರದೆ ಇರದು, ಎಂದು ಸಮಾಧಾನ ತಂದುಕೊಳ್ಳುತ್ತ ಮೆಟ್ಟಿಲು ಹತ್ತಿ ಮಹಡಿಗೆ ಬಂದ.

ಚಿಕ್ಕ ಗೋಲ್ಫ್ ಗಾಡಿಗಳು ಮೈದಾನದತ್ತ ಹೋಗುವುದು ಕಾಣಿಸಿತು. ಆಡುವುದು ಕಿಟಕಿಯ ಮೂಲಕ ಕಾಣಿಸದು.

ಮಧ್ಯಾಹ್ನದ ಊಟ ಬಿಸಿ ಮಾಡತೊಡಗಿದಾಗ ಚಿಕ್ಕ ನೆಲಮನೆಯಿಂದ ಮೆಟ್ಟಿಲು ಹತ್ತಿ ಮಹಡಿಗೆ ಬಂತು. ಅಪಸರಿಸುತ್ತಾ ಕೆಳಗೆ ಹೋಗಿ ನೆಲಮನೆಯ ಬಾಗಿಲಿಗೆ ಬೀಗ ಹಾಕಿದೆ.

ಸಂಜೆ ಹೇಳಿದ ಹೊತ್ತಿಗೆ ಅಕ್ಕ ಮರಳಿ ಬಂದಳು.

"ಹಗಲು ಏನು ಮಾಡಿದ್ದೀ?"

"ಸುಮ್ಮನೆ ಕುಳಿತೆ."

"ಧಾರಾಳ ರೆಸ್ಟ್ ತಕ್ಕೋ. ಆರೋಗ್ಯ ತನ್ನಷ್ಟಕ್ಕೆ ಸರಿಹೋಗುತ್ತೆ. ನಿನ್ನನ್ನು ಒತ್ತಾಯಮಾಡಿ ಕರೆತರಿಸಿದ್ದೇ ಅದಕ್ಕೆ."

ಅಕ್ಕ ಮೈತೊಳೆದು ಉಡುಗೆ ಬದಲಾಯಿಸಿ ಎರಡು ಬಟ್ಟಲು ಕಾಫಿ ಹಿಡಿದುಕೊಂಡು ಸ್ವಾಗತ ಕೊಠಡಿಗೆ ಬಂದಳು.

"ಜಯಂತ್ ಕಲೆಕ್ಟ್ ಮಾಡಿದ್ದು ಬೇಸ್‌ಮೆಂಟ್‌ನ ವೈನ್ ಬಾಟಲಿಗಳು. ಜಯಂತ್‌ಗೆ ಅದೊಂದು ಹಾಬಿ. ದಾಖಲು ಮಾಡಿ ಇಟ್ಟಿರುವನು."

ನೆಲಮನೆಯ ವೈನ್ ಬಾಟಲಿಗಳ ಕುರಿತು ಅಕ್ಕ ಹೇಳಿದ್ದು-ಹಗಲು ಹೊತ್ತು ನಾನು ಅವನ್ನು ತೆರೆದು ನೋಡಿರಬಹುದೆಂದು, ಅಕ್ಕ ಊಹಿಸಿದ್ದರಿಂದ ಇರಬಹುದು.

"ಅತಿಥಿಗಳು ಬರುವಾಗ ಮಾತ್ರ ಲಿಕ್ಕರ್ ಖರೀದಿಸುತ್ತೇವೆ. ಜಯಂತ್ ಅಪರೂಪಕೊಮ್ಮೆ ವೈನ್ ಸೇವಿಸುವನು. ಮನಃಪೂರ್ವಕವೇ ಇಲ್ಲಿ ನಾನು ಏನನ್ನೂ ಇರಿಸಿಲ್ಲ. ನಿನಗೊಂದು ಟೆಂಟೇಷನ್ ಬೇಡ."

"ನಾನು ನಿಲ್ಲಿಸಿದ್ದೇನೆ, ಅಕ್ಕಾ. ನಿನಗೆ ಬರೆದಿದ್ದೆನಲ್ಲ ನಾನು?" ಬಾಲು ಅಸಮಾಧಾನದೊಂದಿಗೆ ಹೇಳಿದ.

"ಊಂ...ನಿಲ್ಲಿಸಿದವರೂ ಪುನಃ ಶುರು ಮಾಡುತ್ತಾರೆ. ಪತ್ರಿಕಾ ಕಛೇರಿಯಲ್ಲಿ ಕನ್‌ಫರ್ಮ್ ಮಾಡದೆ ಹೋದುದರ ಕಾರಣ ದೊಡ್ಡಕ್ಕ ತಿಳಿಸಿದ್ದಳು. ಪ್ರಜ್ಞೆ ಕಳೆದುಕೊಳ್ಳುವವರನ್ನು ಯಾರಾದರೂ ಕಾಯಂ ಮಾಡ್ತಾರೇನು?"

ಬಾಲು ಯಾವ ಮಾತೂ ಆಡಲಿಲ್ಲ.

"ಇಲ್ಲಿ ನೆಲೆಸುವಾಗ ದುಡಿಯಬೇಕಾಗುತ್ತದೆ. ಫೀಲ್ಡ್ ಯಾವುದೇ ಆದರೂ ಹಾರ್ಡ್‌ವರ್ಕ್ ಮಾಡಿದರೇನೇ ಇಲ್ಲಿ ಬದುಕಲು ಸಾಧ್ಯ. ಅಮೆರಿಕ ಸ್ವರ್ಗವೇನೂ ಅಲ್ಲ."

ಬಾಲು ಹೇಳಿದ :

"ಗೊತ್ತು."

"ನಾನು ಗ್ರೀನ್ ಕಾರ್ಡ್ ಹೊಂದಿಸುವುದಾಗಿ ಹೇಳಿದ್ದೆ, ಫರ್ ಯುವರ್ ಕುಮಾರಭಾವ. ಯೂ ನೋ ದಟ್!"

"ಉಮ್. ಕೇಳಿದ್ದೇನೆ" ಎಂಟು ವರ್ಷಗಳು ಹಿಂದಿನ ವಿಚ್ಛೇದನವನ್ನು ಅಕ್ಕ ಈಗಲೂ ನೆನೆಯುವುದೇಕೆ?

"ಒಂದು ತಿಂಗಳು ಇಲ್ಲಿ ಕಳೆದದ್ದು ಜೇಲುವಾಸ ಅನುಭವಿಸುವ ಹಾಗೆ ಆಗಿತ್ತಂದೆ! ರಸ್ತೆಯಲ್ಲಿ ಮನುಷ್ಯರಿಲ್ಲ; ವಾಹನಗಳಷ್ಟೇ ಇವೆ-ಎಂಬುದಾಗಿತ್ತು ಬಂದ ದಿನವೇ ಕಂಪ್ಲೇಂಟ್."

ಬಾಲು ನಗಲು ಯತ್ನಿಸಿದ.

"ಅದಕ್ಕಿಂತಲೂ ದೊಡ್ಡ ಜೋಕ್ ನೀನು ಕೇಳ್ಬೇಕು. ದೊಡ್ಡಕ್ಕ, ಮಾಳು ಅಕ್ಕ ಮೊದಲಾದವರು ಹೇಳ್ತಿರೋದು-ನಾನು ಯಾವುದೋ ಭಯಂಕರ ಅಪರಾಧ ಮಾಡಿದ್ದೆ-ಎಂದಲ್ಲವಾ-ಕಾರು ನಡೆಸಲು ಕಲಿಯದೆ ಜೀವನ ಸಾಗಿಸಲು ಸಾಧ್ಯವಾಗದ ಒಂದು ಸ್ಥಳದಲ್ಲಿ ಎಂದಾದರೆ ಅಲ್ಲಿ ನೆಲೆಸಲು ಇಷ್ಟವಿಲ್ಲ ಎಂಬುದಾಗಿತ್ತು ಅಟಿಟ್ಯೂಡ್!"

ಬಾಲು ಏನೂ ಹೇಳಲಿಲ್ಲ. ಕುಮಾರಭಾವ ಬಡ್ತಿ ಹೊಂದಿದರು, ಪ್ರೊಫೆಸರ್ ಆದರು, ಕಾಲೇಜ್ ಹತ್ತಿರ ಮನೆ ಕಟ್ಟಿಸಿದರು. ಮಕ್ಕಳಿಬ್ಬರ ತಂದೆಯೂ ಆದರು-ಎಂಬುದು ಅಕ್ಕನಿಗೂ ಗೊತ್ತಿರಬಹುದು. ಅಕ್ಕನಿಗೆ ಇಂಜಿನೀಯರ್ ಜಯಂತ್ ಶಿಂಧೆ ಸಿಕ್ಕಿದ. ಯಾರೂ ಯಾರನ್ನೂ ಆಕ್ಷೇಪಿಸಬೇಕಾಗಿಲ್ಲ.

ರಾತ್ರಿ ಸೂಪರ್ ಮಾರ್ಕೆಟ್ ಸಮೀಪದ ಚೈನೀಸ್ ಹೋಟಲ್‌ಗೆ ಕರೆದೊಯ್ದಳು. ಡಿನ್ನರ್‌ನ ಕೊನೆಯಲ್ಲಿ ತಂದುಕೊಟ್ಟ ಕುಕ್ಕೀಸ್‌ನಲ್ಲಿ ಭವಿಷ್ಯ ನುಡಿ ಇದ್ದಿತು:

ಗ್ರೇಟ್ ತಿಂಗ್ಸ್ ಹ್ಯಾಪ್ಪೆನಿಂಗ್....

ಅಕ್ಕ ಕಾಗದ ಸುರುಳಿಯನ್ನು ಬಿಡಿಸಿನೋಡಿದ ಬಳಿಕ ಮುದ್ದೆ ಮಾಡಿ ಆಷ್‌ಟ್ರೇಗೆ ಹಾಕಿದಳು. ನಿನಗೆ ಸಿಕ್ಕಿದ್ದು ಏನೆಂದು ಕೇಳುವಳೆಂದು ಅಂದುಕೊಂಡೆ. ಮಹತ್ಕಾರ್ಯಗಳು ಹಲವು ಸಂಭವಿಸುತ್ತಿವೆ ಎಂಬುದಾಗಿತ್ತು ಆ ಭವಿಷ್ಯವಾಣಿ.

"ಮಕ್ಕಳಿಗೆ ಇದೊಂದು ತಮಾಷೆ."

ಭವಿಷ್ಯವಾಣಿಯನ್ನು ಮನೆಗೆ ತಲುಪಿದೊಡನೆ ಹಿಂದಿನ ವರ್ಷದ ಖಾಲಿ ಡಯರಿಯೊಳಗೆ ತುರುಕಿದೆ. ಹಳೆಯ ಖಾಲಿ ಡಯರಿಯನ್ನು ಹ್ಯಾಂಡ್ ಬ್ಯಾಗ್‌ನಲ್ಲಿರಿಸಿದ್ದು ಯಾವುದಾದರೂ ಟಿಪ್ಪಣಿಗಳನ್ನು ಬರೆಯಬೇಕೆಂದು ಅಂದುಕೊಂಡು.

ಬಹುಶಃ ದೊಡ್ಡ ಸಂಗತಿಗಳು ಕೆಲವಾದರೂ ಸಂಭವಿಸಲೂಬಹುದು-ಮಾಸ್ ಕಮ್ಯುನಿಕೇಶನ್ ನಲ್ಲಿ ಫೆಲೋಶಿಪ್? ಮಹಾನ್ ಜ್ಞಾನಿಗಳ ಪಾರಂಪರ್ಯವಿದೆ ಚೈನಾಕ್ಕೆ. ಕ್ಷುಲ್ಲಕವಾಗಿ ಕಾಣುವುದು ಸರಿಯಲ್ಲ.

ಅರಿಯಂಪಾಡದ ಬಾಲಕೃಷ್ಣನ್ ಅಮೆರಿಕಕ್ಕೆ ಬಂದದ್ದು ಕೂಡ ಒಂದು ಮಹತ್ವದ ಘಟನೆಯೆ ತಾನೆ?

ಮೂರು ಹೆಣ್ಣುಮಕ್ಕಳ ನಂತರ ಮಗ ಹುಟ್ಟಿದ್ದು ನವಗ್ರಹಗಳು ಅನುಗ್ರಹಿಸಿದ ಮುಹೂರ್ತದಲ್ಲಿ ಎಂದು ಅಪ್ಪ ನಂಬಿದ್ದರು. ಚಿಕ್ಕಂದಿನಲ್ಲಿ ಅಮ್ಮನ ಅಥವಾ ಅಕ್ಕಂದಿರ ಜೊತೆ ಹೊರಗೆ ಹೋದಾಗ ದಾರಿಯಲ್ಲಿ ಹಲವು ವಸ್ತುಗಳು ಕಾಣಸಿಗುತ್ತಿದ್ದವು-ಮಣ್ಣಿನಲ್ಲಿ ಹುದುಗಿರುವ ನಾಣ್ಯಗಳು, ಕಾಲಂದುಗೆಯ ತುಣುಕುಗಳು, ಚಿನ್ನದ ಮೂಗುಬಟ್ಟಿನ ಆಣಿ. "ಒಮ್ಮೆ ಎಲ್ಲಾದರೂ ನಿಧಿ ಕಾಣಸಿಗುತ್ತದೆ ಬಾಲುಗೆ" ಎಂದು ಕುಶಾಲಿಗೆ ಹೇಳುವಾಗಲೂ ನಿಗೂಢವಾದ ಒಂದು ನಿರೀಕ್ಷೆಯಿರುತ್ತಿತ್ತು ಅಮ್ಮನಲ್ಲಿ.

ಅದೃಷ್ಟ ಯಾವತ್ತೂ ಮಗನನ್ನು ಹುಡುಕಿಕೊಂಡು ಬಾರದೆ ಇರಲಾರದು.

ರಾತ್ರಿ, ಹಳೆಯ ಡಯರಿಯಲ್ಲಿ ಬಾಲು ಬರೆದ : "೧೪.೬.೯೨ ಶನಿವಾರ ರಾತ್ರಿ ಒಂದು ಕನಸು ಕಂಡೆ. ಡಿಟ್ರೋಯ್ ಏರ್‌ಪೋರ್ಟ್‌ನಲ್ಲಿ ನಿದ್ರೆಯಿಂದ ಥಕ್ಕನೆ ಎಚ್ಚರಗೊಂಡಾಗ ಫಿಲಡೆಲ್ಫಿಯ ವಿಮಾನದಲ್ಲಿ ಪ್ರಯಾಣಿಕರು ಹತ್ತತೊಡಗಿರುವುದಾಗಿ ಸೈನ್ ಬೋರ್ಡಿನಲ್ಲಿ ಕಂಡೆ. ಇಪ್ಪತ್ತೇಳನೆಯ ಗೇಟ್ ಎಲ್ಲಿ ? ಕೊನೆಯಿಲ್ಲದ ದಾರಿಗುಂಟ ಓಡುತ್ತಾ, ಓಡುತ್ತಾ ಇಪ್ಪತ್ತಾರನೆಯ ಗೇಟಿನ ಬಳಿ ತಲುಪಿದಾಗ ಮುಂದೆ ಗೇಟೇ ಇಲ್ಲ. ಗಲಿಬಿಲಿಯೊಂದಿಗೆ ಮರುಬದಿಗೆ ಓಡಿದೆ. ಅಲ್ಲಿಂದ ಶುರುವಾಗಿರುವುದು ಇಪ್ಪತ್ತೆಂಟರಿಂದ! ಎಲ್ಲಿ ಇಪ್ಪತ್ತೇಳು? ನಾನು ಓಡುತ್ತಲೇ ಇದ್ದೇನೆ. ಎಲ್ಲಿ ನಾನು ಹೊರಗೆ ಹೋಗಬೇಕಾದ ಇಪ್ಪತ್ತೇಳು? ಇಪ್ಪತ್ತೇಳು ನನ್ನ ವಯಸ್ಸೂ ಹೌದು."

ಗೇಟಿನ ಕ್ರಮಸಂಖ್ಯೆ ಮತ್ತು ವಯಸ್ಸು ಒಂದೇ ಆದದ್ದು ಕನಸಿನ ಅಂಶವಾಗಿರಲಿಲ್ಲ. ಓದಿದ ಬಳಿಕ ಅದನ್ನು ಹೊಡೆದು ಹಾಕಿದೆ. ಆಮೇಲೆ ಹಾಳೆ ಹರಿದು ಕಸದ ಬುಟ್ಟಿಗೆ ಎಸೆದೆ. 'ಪ್ರವಾಸಕಥನ' ಆಗಬೇಕಿದ್ದರೆ ರೂಪಸಿಯಾಗಿರುವ ಏರ್‌ಹೋಸ್ಟೆಸ್‌ನಿಂದ ಆರಂಭಿಸಬೇಕು.

ರಾತ್ರಿ ಪಕ್ಕದ ಕೋಣೆಯಿಂದ ಅಕ್ಕ ಯಾರೊಡನೆಯೋ ಬಹಳ ಹೊತ್ತು ಮಾತಾಡುವುದು ಕೇಳಿಸಿತು, ತೀರ ಅಸ್ಪಷ್ಟವಾಗಿ. ಜಯಂತ್ ಇರಬಹುದು. ಬಳಿಕ ದಿಢೀರನೆ ಗುಡುಗೂ ಮಿಂಚೂ ಶುರುವಾಯಿತು; ತುಂತುರು ಮಳೆ ಕೂಡ. ಬೆಕ್ಕು ಬಾಗಿಲ ಬಳಿ ಬಂದು ಇಣುಕಿನೋಡಿತು. ಬಾಗಿಲು ಮುಚ್ಚಿ ಬೋಲ್ಟು ಹಾಕಿ ಮಲಗಿದೆ.

ಮರುದಿನ ಅಕ್ಕ ಹೊರಟಾಗ ತಾನು ಎಚ್ಚರಗೊಂಡಿದ್ದರೂ ಏಳಲಿಲ್ಲ. ಆಕೆ ಹೊರಟುಹೋದ ಬಳಿಕ ಮಹಡಿಯಿಂದ ಕೆಳಗಡೆಗೆ ಬಂದದ್ದು.

ಕಾಫಿ ತಯಾರಿಸಿ ಕುಡಿದ ನಂತರ ದೊಡ್ಡಕ್ಕನಿಗೆ ಒಂದು ಪತ್ರ ಬರೆಯಬಹುದು ಎಂದುಕೊಂಡೆ. ಭಾಸ್ಕರನ್ ಮೇಷ್ಟ್ರಿಗೂ ಬರೆಯುವೆನೆಂದು ಒಪ್ಪಿಕೊಂಡಿದ್ದೆ. 'ಅಮೆರಿಕದೊಂದಿಗೆ ನಾನು ಒಂದು ಹೊಂದಾಣಿಕೆಗೆ ಯತ್ನಿಸುತ್ತಿದ್ದೇನೆ' ಎಂಬ ವಾಕ್ಯದೊಂದಿಗೆ ಶುರು ಮಾಡಬಹುದು.

ಅದುಗೆಮನೆಯ ಎತ್ತರದ ಸ್ಟೂಲ್‌ನ ಮೇಲೆ ಹತ್ತಿ ಕುಳಿತು ಅರ್ಧವೃತ್ತಾಕೃತಿಯ ಕೌಂಡರ್‌ನ ಮೇಲೆ ಅಕ್ಕನ ಲೆಟರ್ ಪ್ಯಾಡ್ ತೆಗೆದಿರಿಸಿ ಬರೆಯತೊಡಗಿದೆ. ಆಗ ಬೆಕ್ಕು ಜಿಗಿಯುತ್ತ ಕೌಂಡರ್‌ನ ಮೇಲೆ ಹತ್ತಿ ಕಾಗದದ ಹತ್ತಿರವೇ ಕುಳಿತುಬಿಟ್ಟಿತು. ಬರೆಯುತ್ತಿರುವುದು ಏನೆಂದು ತಿಳಿಯಬೇಕೆಂಬ ಕುತೂಹಲದೊಂದಿಗೆ ಕಾಗದವನ್ನೇ ದಿಟ್ಟಿಸತೊಡಗಿತು.

ಆತ ಸ್ಟೂಲ್‌ನ ಮೇಲಿನಿಂದ ಕೆಳಗಿಳಿದು ಸೋಫಾದ ಮೂಲೆಯಲ್ಲಿ ಕುಳಿತುಕೊಂಡ.

ಟೀಪಾಯ್ ಮೇಲಿರಿಸಿ ಬರೆಯತೊಡಗಿದಾಗಲೂ ಬೆಕ್ಕು ಹತ್ತಿರ ಬಂದು ಕಾಗದದಲ್ಲಿ ನೋಡುತ್ತಾ ನಿಂತಿತು.

ಬಾಲುಗೆ ಸಿಟ್ಟು ಬಂತು. ಹಾಳುಮುಂಡೇದು! ಏನ್ ಕಾಣಲು ನೋಡ್ತಿರೋದು?

ಬೆಕ್ಕು ಗೇಲಿ ಮಾಡುವ ಹಾಗೆ ಒಮ್ಮೆ ನೋಡಿ ಮೆತ್ತಗೆ ಗುರ್‌ರ್-ಎಂದಿತು.

ಆತ ಒಂದು ನಿರ್ಧಾರ ತೆಗೆದುಕೊಂಡು ಸ್ವಾಗತ ಕೋಣೆಯತ್ತ ನಡೆದ. ಮುಂಬಾಗಿಲನ್ನು ತೆರೆದಿರಿಸಿ ಹೇಳಿದ :

"ಬಂದು ಒಳಗೆ ಸೇರಿಕೊಂಡ ಹಾಗೆಯೇ ಹಿಂದಿರುಗಿ ಹೋಗಬೇಕಾದರೆ ಇದೋ ದಾರಿ. ಮುಂದುಗಡೆ ಅಂಗಳ, ಕಾರ್‌ಪಾರ್ಕ್, ಅಂಗಳದಾಚೆ ಮೈದಾನ. ಮೈದಾನದಾಚೆ ಮನೆಗಳು. ನಿನಗೆ ಪರಿಪೂರ್ಣ ಸ್ವಾತಂತ್ರ್ಯ! ನೀನು ಹೋಗಬಹುದು. ಶೆರ್ಲಕ್, ಯೂ ಕ್ಯಾನ್ ಗೋ!"

ಬೆಕ್ಕು ಹೊರಗೆ ನೋಡುತ್ತಾ ಬಾಗಿಲ ಬಳಿ ಕೆಲವು ನಿಮಿಷ ನಿಂತ ಬಳಿಕ ಕಾರ್ಪೆಟ್‌ನಲ್ಲಿ ಉರುಳುತ್ತಾ ಹೊರಳುತ್ತಾ ಆಟವಾಡಿತು. ಆಮೇಲೆ ಕಣ್ಣುಗಳನ್ನು ಅರೆಬರೆ ಮುಚ್ಚಿ ಗೇಲಿ ಮಾಡುವ ಹಾಗೆ ಆತನತ್ತ ಒಮ್ಮೆ ನೋಡಿತು.

ಆತ ಸ್ನಾನ ಮಾಡಿ, ಉಡುಗೆ ಬದಲಾಯಿಸಿ, ಧೂಳು ಕೊಡವಿ ಶೂ ಹಾಕಿದ. ಮುಂಬಾಗಿಲಿನ ಕೀಲಿಕೈ ಕೈಗೆತ್ತಿಕೊಂಡು ಹೊರಗೆ ಬಂದು ಹಿಂದಿರುಗಿ ನೋಡಿದ; ಅರ್ಧ ನಿದ್ರೆಯಲ್ಲೆಂಬಂತೆ ಮಲಗಿದೆ ಬೆಕ್ಕು.

ನಡೆಯುತ್ತಾ ಗಾಲ್ಫ್ ಕೋರ್ಟ್‌ನ ಗಡಿಯ ತನಕ ಹೋಗಿ ಅಲ್ಲಿಂದ ಎಡಕ್ಕೆ ತಿರುಗಿ ಮಾರ್ಕೆಟ್‌ನ ತನಕ ಸಾಗಿ ಅಲ್ಲಿಂದ ಹಿಂದಿರುಗಿ ನಡೆದ. ಬಲು ಬಿಸುಪಿದೆ ಬಿಸಿಲಿಗೆ.

ಆತ ಮರಳಿ ಮನೆ ಸೇರಿದಾಗಲೂ ಹಿಂದಿನ ಸ್ಥಳದಲ್ಲೆ ಮಲಗಿ ನಿದ್ರಿಸುತ್ತಿತ್ತು ಬೆಕ್ಕು.

ರಾತ್ರಿ ಚಿಕನ್ ಕರಿ ತಯಾರಿಸುವುದರಲ್ಲಿ ನಿರತಳಾಗಿರುವಳು ಅಕ್ಕ. ಈರುಳ್ಳಿ ಹೆಚ್ಚಲು ನೆರವಾದನು ಆತ.

"ಎಲ್ಲಿಗೆಲ್ಲ ಸಾಗಿತ್ತು ನಿನ್ನ ಸವಾರಿ?"

"ಇಲ್ಲೇ, ಒಂದಷ್ಟು ದೂರ."

ಆತ ಒಂದು ನಡುಕದೊಂದಿಗೇ ನೆನೆದುಕೊಂಡದ್ದು ಆಗ: ಬರಿಯ ಬೆಕ್ಕಲ್ಲ ಶೆರ್ಲಕ್. ಇವನೊಬ್ಬ ಗುಪ್ತಚರ. ಅಕ್ಕ ಒಬ್ಬಳೇ ಇರುವಾಗ ಗುಪ್ತಚರ್ಯೆ ನಡೆಸಲು ಜಯಂತ್ ತರಬೇತಿ ನೀಡಿದ್ದಿರಬೇಕು. ಈಗ ಅಕ್ಕನ ಸಲುವಾಗಿ ಕೂಡ ಗುಪ್ತಚರ್ಯೆ ನಡೆಸಬೇಕಾದದ್ದು ತನ್ನ ಜವಾಬ್ದಾರಿಯೆಂದು ಭಾವಿಸುತ್ತಿದೆ ಶೆರ್ಲಕ್. ತಾನು ಹೊರಗೆ ಹೋದದ್ದು ಅಕ್ಕನಿಗೆ ಗೊತ್ತಾದದ್ದು ಹೇಗೆ?

ಅಕ್ಕನಿಗೆ ಕಾಣದಹಾಗೆ ಆತ ಸಿಟ್ಟಿನಿಂದ ಬೆಕ್ಕನ್ನು ನೋಡಿದ. ಅದು ಕಾಣಲಿಲ್ಲ ಎಂಬಂತೆ ತಲೆ ಬೇರೆ ಕಡೆಗೆ ತಿರುಗಿಸಿ ನಿರ್ಲಿಪ್ತ ಭಾವದಲ್ಲಿ ಮಲಗಿತು ಬೆಕ್ಕು.

ಪೆಕ್ಕಿನ ಕಣ್ಣುಗಳು ಸದಾ ತನ್ನನ್ನು ಹಿಂಬಾಲಿಸುತ್ತಲೇ ಇವೆ. ಬಾಗಿಲಿಕ್ಕಿ ಅಗುಳಿ ಹಾಕಿ ಮಲಗಿರುವಾಗಲೂ ಬಾಗಿಲಿನಾಚೆ ಅವನಿರುವನು. ನಿದ್ರೆಯ ಮಧ್ಯೆ ಒಮ್ಮೆ ಫಕ್ಕನೆ ಎಚ್ಚರಗೊಂಡು ಬಚ್ಚಲುಮನೆಗೆ ಹೋಗಲು ಬಾಗಿಲು ತೆರದಾಗ ಅದು ಪತ್ತೆಯಾದದ್ದು.

ಶುಕ್ರವಾರ ರಾತ್ರಿ ಜಯಂತ್ ಬರುವನೆಂದು ಹೇಳಿದ್ದ. ಅಕ್ಕ ಎಂದಿಗಿಂತ ಬೇಗನೆ ಆಫೀಸಿನಿಂದ ಮರಳಿ ಬಂದಳು.

"ಬಾ, ನಾವು ಮೀನು ತರೋಣ. ಜಯಂತ್‌ಗೆ ನಮ್ಮ ಮಲಬಾರ್ ಸ್ಟೈಲ್ ಮೀನು ಪದಾರ್ಥ ಇಷ್ಟ. ಸೂಪರ್ ಮಾರ್ಕೆಟ್ ನೋಡಬಹುದು. ಇಂಡಿಯನ್ಸ್‌ರ ಮಟ್ಟಿಗೆ ಇಲ್ಲಿಯ ಸೂಪರ್ ಮಾರ್ಕೆಟ್ ಒಂದು ಅದ್ಭುತವೆ, ನೋಡಬೇಕಾದದ್ದೆ ಹೌದು."

ಹೊರಗೆ ಕಾರು ನಿಲ್ಲಿಸಿ ಕಾರ್ಡ್ ತುರುಕಿ ಬ್ಯಾಂಕ್ ಕೌಂಟರ್‌ನಿಂದ ಹಣ ತೆಗೆಯುವ ಚಮತ್ಕಾರವನ್ನು ಕಂಡೆ; ಬಳಿಕ ಸೂಪರ್ ಮಾರ್ಕೆಟನ್ನೂ. ತರಕಾರಿಗಳು, ಶೆರ್ಲಕ್‌ನ ಆಹಾರಪೊಟ್ಟಣ, ಮೀನು ಇತ್ಯಾದಿ ಎಲ್ಲವನ್ನೂ ಕೊಂಡುಕೊಂಡ ಬಳಿಕ ಅಕ್ಕ ಹೇಳಿದಳು : "ಒಂದು ಬಾಟಲಿ ವೈನ್ ಖರೀದಿಸೋಣ. ಜಯಂತ್ ಬರುವುದಲ್ಲವಾ ?"

ಒಂಭತ್ತು ಗಂಟೆಗೆ ಜಯಂತ್‌ನ ಫ್ಲೈಟ್. ಏಳುವರೆಗೆ ಮುನ್ನ ಅಡುಗೆ ಕೆಲಸಗಳೆಲ್ಲವನ್ನೂ ಮಾಡಿ ಮುಗಿಸಲು ಅಕ್ಕ ಅವಸರಪಡುತ್ತಿರುವಾಗ ದೂರವಾಣಿ ಕರೆ ಬಂತು.

"ಹಲೋ"

ಮುಂದೆ ಬಹಳ ಹೊತ್ತು ಅಕ್ಕ ಮಾತಾಡಲಿಲ್ಲ. ಹುಂಗುಟ್ಟುವಿಕೆಯಷ್ಟೇ ಕೇಳಿಸುತಿತ್ತು. ಬಾಲು ಅಡುಗೆಮನೆಗೆ ಹೋದಾಗ ಅಕ್ಕ ಫೋನ್ ಕೆಳಗಿಟ್ಟು ಮೆಲ್ಲಗೆ ನಡೆಯುತ್ತ ಹಿಂಬಾಗಿಲಿನ ಸಮೀಪ ಹೋಗಿ ನಿಂತುಕೊಂಡಳು. ಬಳಿಕ ಹಿಂದಿರುಗಿ ಬಂದು ಸೋಫಾದ ಮೇಲೆ ಕುಳಿತು ಹೇಳಿದಳು: "ಜಯಂತ್ ಬರುವುದಿಲ್ಲ."

ವೈನ್ ಬಾಟಲಿಯ ಮುಚ್ಚಳ ಕಳಚಿ ಬಟ್ಟಲಿಗೆ ಸುರಿದು ಅಕ್ಕ ಹೇಳಿದಳು: "ಹಿ ಇಸ್ ಬಿಸಿ."

ಬಾಲುಗೆ ಬಡಿಸುವಾಗ ಅಕ್ಕ ಹೇಳಿದಳು : "ನಾನು ಊಟ ಆಮೇಲೆ ಮಾಡ್ತೇನೆ. ವಿಪರೀತ ತಲೆನೋವು. ವೈನ್ ನಿನಗೆ ಬೇಡ; ನಿಲ್ಲಿಸಿದ್ದರಿಂದ ಕೊಡ್ತಾ ಇಲ್ಲ."

ವೈನ್ ಬಾಟಲಿಯಿಂದ ಅರ್ಧದಷ್ಟು ಕುಡಿದ ಬಳಿಕ ಅಕ್ಕ ಮಹಡಿಗೆ ಹೋದಳು. ಬಾಟಲಿಯನ್ನೂ ಒಯ್ದಿರುವಳು. ಶೆರ್ಲಕ್ ಹಿಂಬಾಲಿಸದೆ ಅಡುಗೆಮನೆಯ ಬಾಗಿಲಲ್ಲೇ ಮಲಗಿದ. ಅವನೂ ಚಡಪಡಿಸುತ್ತಿರುವನು.

ಶನಿವಾರ ಮತ್ತು ಭಾನುವಾರ ಅಕ್ಕ ಹೆಚ್ಚಿನ ವೇಳೆಯನ್ನು ಮಲಗುವ ಕೋಣೆಯಲ್ಲೇ ಕಳೆದಳು.

ಭಾನುವಾರ ಮಲಗುವಾಗ ನಿರ್ಧರಿಸಿದೆ: ಮರಳಿಹೋಗುವುದರ ಕುರಿತು ಮಾತಾಡಬೇಕು. ಫೆಲೋಶಿಪ್ ಎಂಬ ಪವಾಡ ಸದ್ಯದಲ್ಲಂತೂ ಸಂಭವಿಸುವ ಸಾಧ್ಯತೆ ಕಾಣಿಸುತ್ತಿಲ್ಲ. ಅದರ ಕುರಿತು ವಿಚಾರಿಸುವುದಾಗಿ ಹೇಳಿದ್ದು ಜಯಂತ್. ಮುಖಪರಿಚಯ ಕೂಡ ಇಲ್ಲದ ಈ ಭಾವ

ಇರುವುದು ಸಾನ್‌ಹೋಸೆಯ್ ಎಂಬ ಬಲುದೂರದ ನಗರದಲ್ಲಿ. ಶೆರ್ಲಕ್‌ನ ಜೊತೆ ಇನ್ನೆಷ್ಟು ದಿನ ಇಲ್ಲಿ ಕಳೆಯಬೇಕಾದೀತೆಂದು ತಿಳಿಯದು. ಜೈಲುವಾಸ ಎಂದು ಕುಮಾರಭಾವ ಹೇಳಿದ್ದು ಸುಮ್ಮಗಲ್ಲ. ಶೆರ್ಲಕ್ ತನಗೆ ಜೊತೆಯಾಗದಲ್ಲ.

ಅವನ ಕುರಿತೆ ಯೋಚಿಸಿದ್ದೆಂದು ಅರ್ಥ ಮಾಡಿಕೊಂಡ ಭಾವವಿದೆ ಅವನ ಮುಖದಲ್ಲಿ. ನೂಕಿ ಹೊರಗೆ ಹಾಕಿ ಬಾಗಿಲು ಮುಚ್ಚಿದೆ.

ಬೆಳಗ್ಗೆ ಹೊರಟುಹೋಗುವ ಮೊದಲು ಅಕ್ಕ ಹೇಳಿದಳು: "ಸಿಗಬಹುದು. ತಾಳ್ಮೆಯಿಂದ ಇರು. ನಾನೂ ಸಂಪರ್ಕಿಸುತ್ತಿದ್ದೇನೆ ಅನೇಕ ಮಂದಿಯನ್ನು."

ತನ್ನ ಯೋಚನೆಯನ್ನು ಕೂಡ ಓದಿ ತಿಳಿದುಕೊಳ್ಳುತ್ತಿದ್ದಾನೆ ಈ ಶೆರ್ಲಕ್ ಹೋಮ್ಸ್. ಅದನ್ನು ಆಮೇಲ, ಯಾವ ರೀತಿಯಲ್ಲಿ ಎಂದು ಗೊತ್ತಾಗುತ್ತ ಇಲ್ಲ, ಅಕ್ಕನಿಗೂ ತಿಳಿಸುತ್ತಿದ್ದಾನೆ.

ಕಾರಿನ ಕಂತು, ಮನೆಯ ಕಂತು ಮತ್ತು ಮನೆವೆಚ್ಚಗಳನ್ನು ಕಳೆದ ಬಳಿಕ ಉಳಿಯುವುದು ಕೆಲವೇ ಡಾಲರ್. ಪಿ.ಟಿ.ಎ. ಕಳುಹಿಸಿ ನಿನಗೆ ಟಿಕೆಟ್ ಹೊಂದಿಸಿದ್ದು ನೀನು ಪಾರಾಗಲಿ ಎಂದುಕೊಂಡು. ಎರಡು ಸಾವಿರ ಡಾಲರ್ ಸಣ್ಣ ಮೊತ್ತವೇನೂ ಅಲ್ಲ. ಬಾಲು ಏನೂ ಹೇಳಲಿಲ್ಲ.

"ನಿನಗೆ ಡಾಲರ್ ಬೇಕಾ?"

"ಯಾಕೆ?"

"ಹೊರಗೆಲ್ಲಾದರೂ ಹೋಗಬೇಕೆಂದು ಅನ್ನಿಸಿದಾಗ."

"ಬೇಡ."

"ಬೇಸಗೆ ಕಳೆದರೆ ಚೆರಿಮರಗಳು ಹೂಬಿಡತೊಡಗುತ್ತವೆ. ಈ ಪ್ರದೇಶವಿಡೀ ಮನೋಹರವಾಗುತ್ತದೆ ಆಗ. ಈ ಪ್ರಾಂತ್ಯದ ಹೆಸರು ಪೆರ್ಲ್‌ಬಕ್ಸ್ ಕಂಟ್ರಿ ಎಂದು. ಪೆರ್ಲ್‌ಬಕ್‌ಳ ಹುಟ್ಟೂರನ್ನು ನೋಡಲು ನಾವೊಮ್ಮೆ ಹೋಗೋಣ. ಜಯಂತ್ ಬರಲಿ."

ಹಲವಾರು ಯೋಜನೆಗಳಿವೆ. ಜಯಂತ್‌ನ ಬರುವಿಕೆಯನ್ನು ಕಾಯುತ್ತಿದ್ದಾಳೆ ಅಕ್ಕ. ಪ್ರತಿಯೊಂದು ವಾರಾಂತ್ಯದಲ್ಲೂ ಮಾಡಬಹುದಾದ ಪ್ರವಾಸಗಳು, ನೋಡಬಹುದಾದ ಪ್ರೇಕ್ಷಣೀಯ ಸ್ಥಳಗಳು-ಎಲ್ಲವನ್ನೂ ಅಕ್ಕ ವಿವರಿಸಿದಳು.

ಬಾಲುಗೆ ಕಿರಿಕಿರಿ ಮಾಡುತ್ತಿರುವುದು ಒಂಟಿತನದ ಬೇಸರವಲ್ಲ. ಸದಾ ತನ್ನ ಹಿಂದೆ ಸುತ್ತಿ ಸುಳಿಯುತ್ತಿರುವ ಬೆಕ್ಕಿನ ಕಣ್ಣುಗಳು ಆತನನ್ನು ಹೆದರಿಸುತ್ತವೆ.

ಬೆಕ್ಕನ್ನು ನಿರ್ಲಕ್ಷಿಸಲು ನಿರ್ಧರಿಸಿದೆ. ಡಯಾನಾ ರಾಜಕುಮಾರಿಯ ಜೀವನದ ಕತೆ ಮುಗಿದಾಗ ಗ್ರೇಟಾ ಗಾರ್ಬೋಳ ಜೀವನಚರಿತ್ರೆಯನ್ನು ಶುರುಮಾಡಿದೆ. ಬಳಿಕ ಜಯಂತ್‌ನ ಪತ್ತೇದಾರಿಕತೆಗಳಲ್ಲಿ ಒಂದನ್ನು ಕೈಗೆತ್ತಿಕೊಂಡೆ.

ಬೆಕ್ಕು ಈಗಲೂ ದೂರದಿಂದ ಗಮನಿಸುತ್ತಾ ಇದೆ. ಸೋಲನ್ನು ಒಪ್ಪಿಕೊಂಡು ಓಡಿಹೋಗಿ ಬಿಲದಲ್ಲಿ ಅವಿತುಕೊಂಡ ಒಂದು ಸರಿಸೃಪವನ್ನು ನೋಡುತ್ತಿರುವಂಥ ತಿರಸ್ಕಾರ ಭಾವವಿದೆ ಈಗ.

ಕೆಲವು ದಿನ ಕಳೆದಾಗ ಅಕ್ಕನಿಗೂ ಸಂಜೆವೇಳೆ ಮೊದಲಿನ ಹಾಗೆ ಹೆಚ್ಚೇನೂ ಮಾತಾಡಲು ಇಲ್ಲವೆನಿಸಿತು. ಹೊಸತಾಗಿ ಕೇಳತಕ್ಕದ್ದೇನೂ ಇಲ್ಲ. ಆಫೀಸ್‌ನಲ್ಲಿ ಕೆಲಸ ಹೆಚ್ಚು ಹೊರೆಯಾಗುತ್ತಿದೆಯೆಂದು ಒಮ್ಮೆ ಅಕ್ಕ ಹೇಳಿದ್ದಳು. ಶೆರ್ಲಕ್ ಅನ್ನು ಮುದ್ದುಮಾಡುವುದೂ ಅಪರೂಪವಾಯಿತು. ಮೈಗೆ ಅಂಟಿಕೊಂಡು ನಿಲ್ಲಲು ಹವಣಿಸುವಾಗಲೆಲ್ಲ ಅಕ್ಕ ಗದರಿದಳು: "ಔಟ್! ಶೆರ್ಲಕ್, ಔಟ್!"

ವಾರಗಳು ಸ್ಥಿರವಾಗಿ ಗೊತ್ತು. ಅಕ್ಕ ಮನೆಯಲ್ಲಿರುವ ದಿನಗಳು ಶನಿ, ರವಿ ವಾರಗಳು, ಇದೇ ದಿನ ಅಕ್ಕ ಒರೆಸುವ ಒಗೆಯುವ, ಕಾರ್ಪೆಟ್‌ಗಳನ್ನು ಕ್ಲೀನ್ ಮಾಡುವುದೇ ಮೊದಲಾದ ಕೆಲಸಗಳನ್ನು ಮಾಡುವುದು ಶನಿವಾರ. ದಿನಾಂಕಗಳನ್ನು ಮಾತ್ರ ಎಣಿಸಿಯೇ ಕಂಡುಕೊಳ್ಳಬೇಕು.

ಇನ್ನೊಂದು ಶುಕ್ರವಾರ ಸಮೀಪಿಸುತ್ತಿದೆ. ಬಾಲು ವಿಚಾರಿಸಿದ:

"ಕರೆದಿದ್ರಾ?"

"ಯಾರು?"

"ಸಾನ್‌ಹೋಸೆಯಿಂದ. ಜಯಂತ್."

ಜಯಂತ್ ಶಿಂಧೆಯನ್ನು ಏನೆಂದು ಕರೆಯಬೇಕು? ಜಯಂತ್‌ಭಾವ, ಜಯಂತ್‌ದಾದಾ. ಭಾವನನ್ನು ಉತ್ತರಭಾರತೀಯರು ಕರೆಯುವುದು ಬಹುಶಃ ಜೀಜಾಜಿ ಎಂದು. ಮರಾಠಿಗರಲ್ಲಿ ಬರೆ ಹೆಸರು ಇರಲೂಬಹುದು.

"ಇಲ್ಲ. ಬರುತ್ತಿದ್ದರೆ ಕರೆಯುತ್ತೇನೆ, ಎಂದಿದ್ದರು."

ಅಕ್ಕ ಆಮೇಲೆ ಗೊಣಗಿದಳು: "ಕೆಲಸದೊತ್ತಡಗಳು ಕೊನೆಗೊಳ್ಳಲಿ."

ಹಗಲುಹೊತ್ತೂ ನಿದ್ರಿಸತೊಡಗಿದಾಗ ದಿನದೂಡುವುದು ಸುಲಭವೆಂದು ಬಾಲು ಕಂಡುಕೊಂಡ.

ನಾಲ್ಕು ದಿನಗಳ ಬಳಿಕ ಅಂದು ಶೇವ್ ಮಾಡಿದ. ಬರುವಾಗ ತೊಟ್ಟುಕೊಂಡಿದ್ದ ಜೀನ್ಸ್ ಮತ್ತು ಜಾಕೆಟನ್ನು ಅಕ್ಕ ಬ್ರಷ್ ಮಾಡಿ ನೀಟಾಗಿ ಇಸ್ತ್ರಿ ಹಾಕಿ ಹಾಂಗರ್‌ನಲ್ಲಿ ತೂಗು ಹಾಕಿದ್ದಾಳೆ. ಅವನ್ನು ಇನ್ನೊಮ್ಮೆ ತೊಟ್ಟುಕೊಳ್ಳುತ್ತೇನೆ. ಹಿತ್ರೋದ ಬ್ರೇಕ್ ಫಾಸ್ಟ್‌ಗೆ ವ್ಯಯಿಸಿದ್ದು ಕಳೆದು ಹನ್ನೆರಡು ಡಾಲರ್ ಉಳಿದಿದೆ ಪರ್ಸ್‌ನಲ್ಲಿ.

ಮನೆಯಿಂದ ಹೊರಬಿದ್ದು ನಡೆಯತೊಡಗಿದೆ. ಕುಮಾರಭಾವನ ನಿರ್ಣಯ ಸರಿಯೇ. ರಸ್ತೆಗುಂಟ ವಾಹನಗಳಷ್ಟೇ ಸಾಗುತ್ತಿವೆ. ರಸ್ತೆ ದುರಸ್ತಿ ಮಾಡುತ್ತಿರುವ, ಕೆಂಪಂಗಿಯವರ ಒಂದು ತಂಡವನ್ನು ಕಂಡೆ. ನಂತರ ಶಾಪಿಂಗ್ ಸೆಂಟರ್ ತಲುಪಿದೆ. ಕಾರ್ ಪಾರ್ಕ್‌ನ ಸಮೀಪದಿಂದ ಅಂಗಡಿಗಳ ನಾಮಫಲಕಗಳನ್ನು ಓದಿದೆ. ಇಲ್ಲೇ ಇವೆ ಹಲವು ಭೋಜನಾಲಯಗಳು. ಟಿ.ವಿ.ಯಲ್ಲಿ ಯಾವುದೇ ಚಾನಲ್‌ನಲ್ಲೂ ಹೆಚ್ಚಿನ ಜಾಹಿರಾತುಗಳು ಆಹಾರವಸ್ತುಗಳದ್ದೇ. ಅಮೆರಿಕ ದೊಡ್ಡ ಒಂದು ಹೊಟ್ಟೆಯೆಂದು ಡಯರಿಯಲ್ಲಿ ಬರೆಯಬೇಕೆಂದು ನಿರ್ಧರಿಸಿದೆ.

ಒಂದು ಪ್ಯಾಕ್ ಸಿಗರಟ್ ಕೊಂಡುಕೊಂಡೆ. ಮುಂದಿನ ಶಾಪ್ ವೈನ್‌ನದ್ದು. ಅರ್ಧ

ಬಾಟಲಿ ವೋಡ್ಕಕ್ಕೆ ಒಂಭತ್ತು ಡಾಲರ್ ಇಪ್ಪತ್ತು ಸೆಂಟ್. ಬೇಡ. ಒಂದು ಆಶಯ: ಹತ್ತು ಡಾಲರ್ ಸಹ ಖರ್ಚು ಮಾಡಿದರೆ ಮತ್ತೆ ಕೈಯಲ್ಲಿ ಏನೂ ಉಳಿಯುವುದಿಲ್ಲ. ಯಾವ ಪ್ರಲೋಭನಕ್ಕೂ ಅವಕಾಶ ಇರುವುದಿಲ್ಲ; ನಿರ್ಮುಕ್ತ; ನಿತ್ಯಮುಕ್ತ. ಪೊಪ್ಪೋವ ಬೇಕೊ, ಸ್ಮರ್ನೋಫೋ ಬೇಕೊ? ಆಯ್ಕೆಯಾದದ್ದು ಪೊಪ್ಪೋವ. ಮೀರ್ ದ್ರುಷ್‌ಬಾ!

ಮರಳಿ ಮನೆ ಸೇರಿದಾಗ ಶೆರ್ಲಕ್ ರೋಷದಿಂದ ನೋಡುತ್ತ ಗುರ್ ಎಂದಿತು. ಅವನ ಮುಂದೆ ವೋಡ್ಕ ಇರಿಸಿದೆ. ಬಟ್ಟಲಿನ ಮೂರನೇ ಒಂದರಷ್ಟು ಸುರಿದು ಆರೆಂಜ್ ಜ್ಯೂಸ್ ಮತ್ತು ತಣ್ಣಗಿನ ನೀರನ್ನು ಬೆರಸಿದೆ. ಐಸ್ ತುಂಡುಗಳನ್ನೂ ಹಾಕುತ್ತೇನೆ. ಮಾನ್ಯ ವ್ಯಕ್ತಿಗಳ ಮರ್ಜಿಯಲ್ಲೆ ಎಲ್ಲವೂ ಸಾಗಲಿ. ಗಲಿಬಿಲಿಯೊಂದಿಗೇ ಶೆರ್ಲಕ್ ಎಲ್ಲವನ್ನೂ ನೋಡುತ್ತಿರುವನು. ಒಂದು ಗುಟುಕು ಹೀರಿ, ಪುನಃ ಒಂದಿಷ್ಟು ನೀರು ಸುರಿದೆ. ಪೊಪ್ಪೋವಗೆ ನರ್ತನ ಮತ್ತು ಗಾಯನವೂ ಗೊತ್ತು.

"ಶೆರ್ಲಕ್, ನಿನಗೆ ಬೇಕೆ ಒಂದು ಹನಿ?"

"ಶೆರ್ಲಕ್ ತಲೆ ತಗ್ಗಿಸಿ ನಿಂತುಕೊಂಡಿತು, ಅಷ್ಟೆ."

ಆಹಾರ ಬಿಸಿ ಮಾಡಲು ಇನ್ನೂ ಸಮಯ ಆಗಲಿಲ್ಲ. ವಾಷ್ ಬೇಸಿನ್‌ನ ಮೇಲಿನ ಅಲ್ಮಾರಾದಿಂದ ಎರಡು ಡಬ್ಬಗಳನ್ನು ತೆಗೆದು ಕೆಳಗೆ ಇಟ್ಟೆ. ಒಂದರಲ್ಲಿ ಪೀನಟ್ಸ್, ಇನ್ನೊಂದರಲ್ಲಿ ಆಲ್ ಮಂಡ್ಸ್.

ಶೆರ್ಲಕ್‌ಗೆ ಕಡಲೆ ಮತ್ತು ಬಾದಾಮಿ ಬೀಜ ಬೇಡ. ಮೂಸಿದ ಬಳಿಕ ತ್ಯಜಿಸಿತು; ನಿಯಮವನ್ನು ಪಾಲಿಸುತ್ತಿದೆ ಬೆಕ್ಕು.

"ನಿನಗೆ ಬೇಕೆ ಒಂದು ಹನಿ?"

ಒಂದು ಸಾಸರ್‌ಗೆ ತುಸು ಸುರಿದು ಕೊಟ್ಟೆ. ಶೆರ್ಲಕ್ ಮೂಸಿದ ಬಳಿಕ ಅನುಮಾನಿಸುತ್ತ ಕೊನೆಗೊಮ್ಮೆ ನೆಕ್ಕಿತು. ಬಳಿಕ ಕೃತಜ್ಞತೆಯಿಂದ ಒಮ್ಮೆ ನಸುನಕ್ಕು ಮಿಕ್ಕಿದ್ದನ್ನು ಪೂರ್ತಿ ನೆಕ್ಕಿ ಕುಡಿಯಿತು. ಬಾಲು ವಿಜೇತನ ಸಂಭ್ರಮದೊಂದಿಗೆ ನಕ್ಕ: "ನೋಡು, ನೀನೂ ನಿಯಮವನ್ನು ಮುರಿದಿರುವೆ. ಅಂದಮೇಲೆ ನಿನಗೆ ಹೇಗೆ ಈ ಗುಟ್ಟನ್ನು ನಿನ್ನ ಒಡತಿಗೆ ತಿಳಿಸಲು ಸಾಧ್ಯವಾದೀತು?"

ಎರಡನೆಯ ಬಟ್ಟಲನ್ನು ಬಾಲು ಒಬ್ಬನೇ ಕುಡಿದು ಖಾಲಿ ಮಾಡಿದಾಗ ಶೆರ್ಲಕ್ ಅಸಹನೆಯೊಂದಿಗೆ ಗುರ್‌ರ್-ಎನ್ನತೊಡಗಿತು.

"ಸರಿ, ನಿನಗೆ ಇನ್ನೊಂದು ಹನಿ ಕೊಡ್ತೇನೆ. ಆಮೇಲೆ ಕೇಳ್ಬಾರ್ದು."

ಒಳಗ ನಸುಬೆಚ್ಚಗಿನ ಒಂದು ಖುಷಿ ಕೊಡುವ ಅಲೆ ಏಳತೊಡಗಿದಾಗ ಬಾಲು ಶೆರ್ಲಕ್‌ನ ತಲೆ ತಡವಿದ. ನಂತರ ಮಾತಾಡತೊಡಗಿದ:

"ಲೋ ಶೆರ್ಲಕ್, ನೀನು ಮಲಯಾಳಂ ಕಲೀಬೇಕು, ಮ-ಲ-ಯಾ-ಳಂ. ನಿನಗೆ ಏನ್ ಗೊತ್ತು ನನ್ನ ಈ ಚಿಕ್ಕಕ್ಕನ ಕುರಿತು? ಮೂಗಿನ ಮೂಲಕ ಇಂಗ್ಲಿಷ್ ಹೇಳುವ ಈ ಚಿಕ್ಕಕ್ಕನೇ ಎತ್ತಿ ಬೆಳೆಸಿದ್ದು ನನ್ನನ್ನು.

"ನಿನಗೆ ಅರ್ಥವಾಗ್ತದಾ? ಆಲೋಚನೆಗಳನ್ನು ಕೂಡ ಓದಬಲ್ಲ ನಿನಗೆ ಅರ್ಥವಾಗಬೇಕು."

"ನಮ್ಮ ಹಿತ್ತಲಿನಲ್ಲಿ ಒಂದ ಪಾಯಿಖಾನ ಇರಲಿಲ್ಲ; ನನ್ನ ಚಿಕ್ಕಂದಿನಲ್ಲಿ. ಅಂದು ನಾಗಬನದ ಹಿಂಬದಿಯ ಗುಡ್ಡದ ಇಳಿಜಾರಿನಲ್ಲಿ ಬಹಿರ್ದೆಸೆಗೆ ಹೋಗುವಾಗ ಈ ಚಿಕ್ಕಕ್ಕನಿಗೆ ನಾನು ಕಾವಲು ನಿಲ್ಲಬೇಕು.

"ನಿನಗೆ ಜಾರಪತ್ರಿ ಕಲಿಸಿದ್ದ ಮುಂಬೈವಾಲ ಇದ್ದಾನಲ್ಲ, ಜಯಂತ್ ಷಿನ್‌ಡೆ, ಷಿನ್...ಡ್ಯೆ. ಅವನಿಗೆ ಹೇಳು...ಈ ಚಿಕ್ಕಕ್ಕನ ಮದುವೆಗೆ ತುಂಬು ತೋಳಿನ ಬಿಳಿಯಂಗಿ, ಜರಿಪಂಚೆ, ಚಂದನತಿಲಕಗಳನ್ನು ಧರಿಸಿ ವರನೂ ತಂದವ್ವಾ ಬಂದಾಗ ಕುಮಾರಭಾವನ ಕಾಲಿಗೆ ನೀರೆರದವನು ನಾನು. ಈ ನಾನು!"

"ನಿನಗೆ ನನ್ನ ಭಾಷೆ ಗೊತ್ತು. ಗೊತ್ತಿಲ್ಲವೆಂಬುದು ನಟನೆಯಷ್ಟೇ. ಜಯಂತ್ ನಮ್ಮ ಕುಮಾರಭಾವನಿಗಿಂತ ದೊಡ್ಡ ಮನುಷ್ಯನೇನು?"

ಬಾಲು ವ್ಹೋಡ್ಕದ ಬಾಟಲಿಯನ್ನು ಶೆರ್ಲಕ್‌ಗೆ ಬೆಟ್ಟು ಮಾಡಿ ತೋರಿಸುತ್ತ ಪ್ರಶ್ನಿಸಿದ: "ಇದನ್ನು ನಾವು ಎಲ್ಲಿ ಬಚ್ಚಿಡುವುದು, ಮಿಸ್ಟರ್ ಶೆರ್ಲಕ್ ಹೋಮ್ಸ್?"

ಸಂಜೆ ನಾಲ್ಕುವ್ಹೊರೆಗೆ ಮುನ್ನ ಕಾಲೋನಿಯ ಹೊರಗಿರುವ ತೊಟ್ಟಿಗೆ ತಲುಪಿಸಿದರೆ, ಸಾಕು, ಅಲ್ವಾ?

ಬಾಲು ಫ್ರಿಜ್‌ನಿಂದ ಅನ್ನ ತೆಗೆದು ನೀರು ಚಿಮುಕಿಸಿ ಮೈಕ್ರೊ ವೇವ್‌ನಲ್ಲಿ ಇರಿಸಿದ. ಬೇರೊಂದು ಪಾತ್ರೆಯಲ್ಲಿ. ಹಿಂದೆ ಯಾವತ್ತೋ ತಯಾರಿಸಿದ್ದ ಚಿಕನ್ ಕರಿಯನ್ನು ಕೂಡ.

ಆಮೇಲೆ ಬಟ್ಟಲಿನಿಂದ ಸಾಸರ್ಗೆ ಇನ್ನೂ ತುಸು ಸುರಿದು ಕೊಟ್ಟ. ಉಳಿದದ್ದನ್ನು ಸ್ವಾದ ಸವಿಯುತ್ತಾ ಮೆಲ್ಲಮೆಲ್ಲಗೆ ಹೀರತೊಡಗಿದ; ಮುಗಿಸಲಿಲ್ಲ.

ಬಿಸಿ ಮಾಡಿದ ಅನ್ನ ಮತ್ತು ಚಿಕನ್ ಕರಿಯನ್ನು ಪ್ಲೇಟ್‌ನಲ್ಲಿ ಬಡಿಸಿ ಮುಂದೆ ಇಟ್ಟು ಹೇಳಿದ:

"ಶೆರ್ಲಕ್, ಇವತ್ತು ನಮ್ಮ ಲಂಚ್ ಜೊತೆಯಲ್ಲೆ! ಇವತ್ತು ನಾವು ಮಾತಾಡಿ ಎಲ್ಲ ವಿವಾದಗಳನ್ನೂ ವಿಲೆವಾರಿ ಮಾಡ್ಬೇಕು.

ತಟ್ಟೆಯೊಂದರಲ್ಲಿ ಅನ್ನ ಹಾಕಿ ಶೆರ್ಲಕ್‌ನ ಮುಂದೆ ಇರಿಸಿ ಹೇಳಿದ:

"ತಿಂದು ನೋಡು. ಇಂಡಿಯ, ಚೈನಾ, ಜಪಾನ್, ತಾಯ್‌ಲಾಂಡ್, ಬರ್ಮ ಮೊದಲಾದ ಅನೇಕ ದೇಶಗಳಿವೆ ಅಮೆರಿಕದ ಹೊರಗೆ. ಅಲ್ಲಿಯ ಮನುಷ್ಯರು ತಿನ್ನುವುದು ಇದು; ಬೆಕ್ಕುಗಳು ಕೂಡ. ಆದುದರಿಂದ ಇಂಡಿಯಾದವರು ಸಾಕುವ ಬೆಕ್ಕೂ ತಿನ್ನಬಹುದು. ಅನ್ನ...ಇಂಡಿಯಾದವರು ದೇವರೊಡನೆ ಪ್ರಾರ್ಥಿಸುವುದು ಅನ್ನಕ್ಕಾಗಿ, ಗೊತ್ತೇನು?"

ಶೆರ್ಲಕ್‌ನ ನೋಟ ನೆಲಸಿರುವುದು ಬಟ್ಟಲಿನಲ್ಲಿ.

ಬಾಲು ನಕ್ಕ. "ಕೊನೆಯ ಹನಿಗಳು ನಮಗೆ ಅರ್ಥಾರ್ಥ. ಅದೃಷ್ಟದ ಹನಿಗಳು ಎನ್ನುತ್ತೇವೆ

ನಾವು ನಮ್ಮ ನಾಡಿನ ಗಡಂಗುಗಳಲ್ಲಿ ಇದಕ್ಕೆ. ಅನ್ನ ತಿನ್ನಬೇಕೆಂಬ ಷರತ್ತಿನೊಂದಿಗೆ ಇದನ್ನು ಕೊಡ್ತಾ ಇದ್ದೇನೆ, ಶೆರ್ಲಕ್!"

"ಶೆರ್ಲಕ್ ಮೆಲ್ಲಗೆ ನಕ್ಕ; ಬಾಲು ಕೂಡ."

"ನಿನಗೂ ಲಂಚದ ರುಚಿ ಗೊತ್ತಾಯ್ತು. ಇದೇ ನಮ್ಮ ಜಾಣ್ಮೆ: ಇಂಡಿಯನ್ನರ ಜಾಣ್ಮೆ."

ಆಗ ಅಮೆರಿಕದ ಮಟ್ಟಿಗೆ ಅದ್ಭುತವೊಂದು ಸಂಭವಿಸಿತು. ಶೆರ್ಲಕ್ ಒಂದು ಜಾಣಸಗೆಯೊಂದಿಗೆ ಊಟ ಮಾಡತೊಡಗಿದ-ಸ್ವಾದ ಸವಿಯುತ್ತಲೇ!

ಬಾಲು ಪಾತ್ರೆ ತೊಳೆದು ಚೊಕ್ಕಗೊಳಿಸಿದ ಬಳಿಕ ಒಂದು ಸಿಗರಟ್ ಹಚ್ಚಿದ. ಶೆರ್ಲಕ್‌ಗೆ ಹೆಚ್ಚು ಪ್ರೋತ್ಸ ಕೊಟ್ಟುಬಿಟ್ಟೆನೆಂದು ಅಂದುಕೊಂಡ. ಅಳತೆಯಲ್ಲಿ ಅಮೆರಿಕನ್ ಅರ್ಧಬಾಟಲಿ, ಇಂಡಿಯನ್ ಅರ್ಧ ಬಾಟಲಿಗಿಂತ ಕಡಿಮೆಯಿರಬಹುದು. ಎಷ್ಟು ಬೇಗನೆ ಮುಗಿದದ್ದು?

ಸಲಿಗೆ ಭಾವಿಸಿ ಪ್ರೊಫ್ರೋವದಲ್ಲಿ ಪಾಲು ಪಡೆಯಲು ಬಂದ ಶೆರ್ಲಕ್‌ನ ಮೇಲೆ ಇದ್ದಕ್ಕಿದ್ದಂತೆ ಸಿಟ್ಟು ಬಂತು.

"ಬಾ ಬಾ, ನೀನು ಹೊರಗಿನ ಜಗತ್ತನ್ನೆಲ್ಲ ಒಮ್ಮೆ ಸುತ್ತಾಡಿ ನೋಡಿದ ಬಳಿಕ ಮರಳಿ ಬಾ."

ಕರೆದದ್ದು ಮುಂಬಾಗಿಲನ್ನು ತೆರದಿರಿಸಿದ ಬಳಿಕ. ಆದರೆ ಶೆರ್ಲಕ್ ಬರಲಿಲ್ಲ. ಅವನನ್ನು ಅವನ ಮೈಮುಟ್ಟಿ, ಪ್ರೀತಿ ಭಾವಿಸಿ ಮೈದಡವಿದ. ಆಮೇಲೆ ಮೇಲಕ್ಕೆ ಎತ್ತಿ ಬಾಗಿಲಿನತ್ತ ಒಯ್ಯಲು ಹವಣಿಸಿದಾಗ ಕೊಸರಿ ಕೆಳಗೆ ಹಾರಿತು.

ಸಿಟ್ಟಿನಿಂದ ಗಂಟಲಿನಲ್ಲಿ ಅನುರಣಿಸುತ್ತಿರುವ ಗುರ್‌ರ್ ಧ್ವನಿಯೊಂದಿಗೆ ನಿಂತುಕೊಂಡಿತು ಬೆಕ್ಕು.

"ಶೆರ್ಲಕ್....ಬಾಲು ಪುನಃ ಸಮೀಪಿಸಿದಾಗ ಶೆರ್ಲಕ್ ಮುಂಗಾಲುಗಳನ್ನೆತ್ತಿ ಚೀರುತ್ತಾ ಒಂದು ಹೋರಾಟಕ್ಕೆ ಸಜ್ಜಾದ ಹಾಗೆ ನಿಂತುಕೊಂಡಿತು. ಆಗ ಒಂದು ನಡುಕದೊಂದಿಗೇ ಕಂಡನು ಬಾಲು-ಶೆರ್ಲಕ್‌ನ ನಾಲ್ಕು ಕಾಲುಗಳಲ್ಲೂ ಉದ್ದನೆಯ ಚೂಪು ಚೂಪಾದ ಉಗುರುಗಳು!

ತಬ್ಬಿಬ್ಬಾಗಿ ನಿಂತ ಬಾಲು ಬಳಿಕ ಬಳಲಿದ, ತಿರಸ್ಕಾರದಿಂದ ಒಮ್ಮೆ ನೋಡಿ, ಉಗುರುಗಳನ್ನು ಒಂದಕ್ಕೆಳೆದು ಮೆಲ್ಲಮೆಲ್ಲನೆ ಬೆಕ್ಕು ಮೇಲಕ್ಕೆ ಹೋಯಿತು.

ಬಳಿಕ ಬಾಲು ತನ್ನ ಕೋಣೆಗೆ ತೆರಳಿ ಮಲಗಿದಾಗ ಬೆಕ್ಕು ಪುನಃ ಒಳಗೆ ಬಂದಿತು. ಒಂದು ಪರಸ್ಪರ ಗ್ರಹಿಕೆಗೆ ಬಂದಿರುವಂತೆ ಸಣ್ಣಗೆ ನಕ್ಕಿತು.

ಹಾಸಿಗೆಗೆ ಹತ್ತಿಬಂದ ಶೆರ್ಲಕ್ ಪಕ್ಕದಲ್ಲಿ ಮಲಗಿದಾಗ ಬಾಲು ನಕ್ಕ. ಉಗುರುಗಳನ್ನು ಬಚ್ಚಿಟ್ಟುಕೊಂಡ ಅವನ ಕಾಲುಗಳನ್ನು ನೇವರಿಸಿದ. ಕತ್ತು ನೇವರಿಸಿದ. ಆಗ ಕೋಣೆಯೊಳಗೆ ಒಂದು ನಗೆ ಮೊಳಗಿತು.

ಶೆರ್ಲಕ್. ಯಾರು ನಕ್ಕದ್ದು? ನೀನೋ ನಾನೋ?

ಆತ ಏಳಲು ಯತ್ನಿಸಿದ.

ಬೆಕ್ಕು ಆತನನ್ನು ತಡೆಯುತ್ತಾ ಎದೆಯ ಮೇಲೆ ಒಂದು ಕಾಲು ಎತ್ತಿಟ್ಟು, ಹಾಸಿಗೆಗೆ ಅಮುಕುತ್ತಾ ಗೊಣಗುಟ್ಟಿತು:

"ನಿದ್ರೆ ಮಾಡು, ಹಾಯಾಗಿ ನಿದ್ರೆ ಮಾಡು."

ಎದೆಯನ್ನು ನೇವರಿಸುತ್ತಾ ಸಂತೈಸುತ್ತಾ ಇದ್ದು ಶೆರ್ಲಕ್ ಬಲುಗಟ್ಟಿನ ಹಾಗೆ ಕಿವಿಯಲ್ಲಿ ಪಿಸುಗುಟ್ಟಿತು: "ನಾನು ಇಲ್ಲಿದ್ದೇನೆ, ಹೆದರದೆ ನಿದ್ರೆ ಮಾಡು."

ಆಗ ಆತಗೆ ಗಟ್ಟಿಯಾಗಿ ಅಳಬೇಕೆನಿಸಿತು. ಅದು ಸಾಧ್ಯವಾಗದೆ ಹೋದಾಗ ಬಿಕ್ಕಳಿಸುತ್ತಾ ಕಣ್ಣು ಮುಚ್ಚಿದ.

□

# ಮಹಾಕವಿ ಪಂಪ : ಮಾನವೀಯತೆಯ ಮಿಡಿತ

ಡಾ. ಶಾಂತಿನಾಥ ದಿಬ್ಬದ

ವೈಚಾರಿಕತೆ, ಪ್ರಗತಿಪರ ಧೋರಣೆ ಮತ್ತು ದಲಿತ-ಬಂಡಾಯ ಪ್ರಜ್ಞೆ ಮೊದಲಾದವು ಮನುಷ್ಯನ ಬೌದ್ಧಿಕ ಚರಿತ್ರೆಯೊಂದಿಗೆ ಬೆಳೆಯುತ್ತ ಬಂದಿರುವ ವಿಚಾರಗಳಾಗಿವೆ. ಇವೆಲ್ಲ ಮನುಷ್ಯನ ಚಿಂತನಕ್ರಮ ಮತ್ತು ಜೀವನ ವಿಧಾನಗಳಿಗೆ ಸಂಬಂಧಿಸಿದ ವಿಶೇಷಾಂಶಗಳು. ಇವುಗಳ ಕುರಿತಾದ ಸ್ಪಷ್ಟವಾದ ಪರಿಕಲ್ಪನೆ ಸಾಧ್ಯವಾದದ್ದು ಮತ್ತು ವ್ಯಾಪಕ ಚರ್ಚೆ ನಡೆದುದು ಮಾತ್ರ ಈಚಿನ ದಿನಗಳಲ್ಲಿ. ಹಾಗಾಗಿ ಇವೆಲ್ಲ ಆಧುನಿಕ ಸಾಹಿತ್ಯದಲ್ಲಿ ಮಾತ್ರ ಕಾಣಬರುವ ಅಂಶಗಳೆಂದು ಕೆಲವರು ಭಾವಿಸುತ್ತಾರೆ. ಶೋಧಿಸಿ ನೋಡಿದಾಗ ಈ ವಿಚಾರಗಳ ಹೆಜ್ಜೆ ಗುರುತುಗಳು ಮಹಾಕವಿ ಪಂಪನ ಕೃತಿಗಳಲ್ಲಿರುವುದು ಕಂಡು ಬರುತ್ತದೆ. ಅಂಥ ಶೋಧ ಮತ್ತು ವಿಶ್ಲೇಷಣೆಯ ಪ್ರಯತ್ನ ಈ ಪ್ರಬಂಧ.

ಪಂಪ ರಾಜಸತ್ತೆಯ ಕಾಲದಲ್ಲಿ ಕಾವ್ಯರಚನೆ ಮಾಡಿದವನು. ಅಷ್ಟೇ ಅಲ್ಲ ರಾಜಾಶ್ರಯದ ನೆರಳಿನಲ್ಲಿಯೇ ನಿಂತು ಕಾವ್ಯ ರಚನೆ ಮಾಡಿದವನು ಎಂಬುದು ನಿಜ. ಈ ಒಂದೇ ಒಂದು ಕಾರಣಕ್ಕಾಗಿ ಅವನಲ್ಲಿ ಸ್ವಂತಿಕೆ, ಸ್ವಾಭಿಮಾನ, ವಿಚಾರವಂತಿಕೆಗಳು ಇರಲಿಲ್ಲವೆಂದು ಭಾವಿಸುವುದು ಸರಿಯಲ್ಲ. ರಾಜಸತ್ತೆಯ ಪರಿಸರದಲ್ಲಿದ್ದು ಅದರ ದೋಷಗಳನ್ನು ವಿಮರ್ಶಿಸುವ ಪ್ರಜ್ಞೆ ಮತ್ತು ಕೆಚ್ಚು ಪಂಪನಲ್ಲಿದ್ದವೆಂಬುದನ್ನು ನಾವು ತಪ್ಪದೆ ಗುರುತಿಸಬೇಕು. ಹಾಗೆಯೇ ಪಂಪನು ಅಂದು ಮೇಲ್ತರಗತಿಯದೆಂದು ಭಾವಿಸಲಾದ ಜೈನ ಧರ್ಮಕ್ಕೆ ಸೇರಿದವನಾಗಿದ್ದನೆಂಬ ಅಂಶವೂ ಎಷ್ಟೋ ಸಲ ಅವನ ವೈಚಾರಿಕತೆ, ದಲಿತ-ಬಂಡಾಯ ಪ್ರಜ್ಞೆಗಳನ್ನು ಗುರುತಿಸುವಾಗ ಅಡ್ಡ ಬರುತ್ತವೆಯೆಂದು ತೋರುತ್ತದೆ. ಮೇಲ್ತರಗತಿಯ ಒಂದು ಧರ್ಮಕ್ಕೆ ಸೇರಿದಾಕ್ಷಣ ಒಬ್ಬ ವ್ಯಕ್ತಿಯು ವೈಚಾರಿಕತೆ ಮತ್ತು ವಿಚಕ್ಷಣತೆಗೆ ಎರವಾಗುತ್ತಾನೆಂದೇನೂ ಇಲ್ಲ. ಹಳೆಯ ವೈದಿಕ ಪರಿಸರದ ದೋಷಗಳನ್ನು ಪ್ರತಿಭಟಿಸಿ ಪಂಪನ ತಂದೆ ಭೀಮಪಯ್ಯ ವೈದಿಕ ಧರ್ಮವನ್ನು ತ್ಯಜಿಸಿ ಜೈನ ಧರ್ಮೀಯನಾಗಿದ್ದನೆಂಬುದನ್ನೂ,

ಪಂಪ ಆ ಸಂಸಾರದ ಜೀವಂತ ಪ್ರತಿನಿಧಿಯಾಗಿರುವನೆಂಬುದನ್ನೂ ಸ್ಮರಿಸಿಕೊಳ್ಳುವುದು ಈ ಸಂದರ್ಭದಲ್ಲಿ ಅಗತ್ಯವಾಗುತ್ತದೆ. ಜೈನ ಧರ್ಮವು ಮೊದಲಿನಿಂದಲೂ ಜೀವವಿರೋಧಿಯಾದ ಕೆಲವು ವೈದಿಕ ವಿಚಾರಗಳನ್ನು ನಿಂದಿಸುತ್ತ ಬಂದಿರುವುದನ್ನೂ, ಸರ್ವಸಮಾನತೆ, ಅಹಿಂಸೆ, ಅನೇಕಾಂತವಾದ ಮೊದಲಾದ ಜೀವಪರ ಸಿದ್ಧಾಂತಗಳನ್ನು ಘೋಷಿಸುತ್ತ ಬಂದಿರುವುದನ್ನೂ ನಾವಿಲ್ಲಿ ನೆನಪಿಸಿಕೊಳ್ಳಬೇಕು. ಇವೆಲ್ಲವರ ಧ್ವನಿಯಾಗಿ ನಿಂತು ಪಂಪ ತನ್ನ ಕಾವ್ಯಗಳನ್ನು ರಚಿಸಿದ್ದಾನೆ. ಹೀಗಾಗಿ ಹಲವಾರು ಪ್ರಗತಿಪರ ವಿಚಾರಗಳು ಅವನ ಕಾವ್ಯಗಳಲ್ಲಿ ಎಡೆಪಡೆದಿವೆ. ಕೆಲವು ಮುಖ್ಯ ಪ್ರಸಂಗಳನ್ನು ಪರಿಭಾವಿಸುವ ಮೂಲಕ ಇದನ್ನು ಸ್ಪಷ್ಟಪಡಿಸಬಹುದು.

"ಪ್ರಾಣಿಹಿತಮಂ ವಿನೇಯ
ಪ್ರೀಣನಕರಮಂ ಜಗತ್ತ್ರಯ ಪ್ರಕಟಿತತಕ
ಲ್ಯಾಣಮನೀ ನೆಗಬ್ದಾದಿಪು
ರಾಣಮನಪರಿಮಿತ ಭಕ್ತಿಯಿಂ ವಿರಚಿಸುವೆಂ"

(ಆ.ಪು. ೧-೪೨)

ಎಂಬಲ್ಲಿ "ನಾನು ಆದಿಪುರಾಣವನ್ನು ಅತಿಭಕ್ತಿಯಿಂದ ರಚಿಸುತ್ತೇನೆ. ಅದು ಪ್ರಾಣಿಗಳಿಗೆ ಹಿತವಾದುದು. ಶಿಷ್ಟ ಜನರಿಗೆ ಸಂತೋಷ ನೀಡಬಲ್ಲುದು. ಮೂರೂ ಲೋಕಗಳಿಗೆ ಕಲ್ಯಾಣವನ್ನುಂಟು ಮಾಡಬಲ್ಲುದು" ಎಂಬುದು ಪಂಪನ ಸ್ಪಷ್ಟ ತಿಳುವಳಿಕೆಯಾಗಿದೆ.

ಜೈನ ಧರ್ಮದ ಉತ್ತಮಾಂಶಗಳನ್ನು ಹೆಮ್ಮೆಯಿಂದ ಹೊಗಳಬಲ್ಲ ಪಂಪನು ಇನ್ನೊಬ್ಬರ ದೃಷ್ಟಿಯಲ್ಲಿ ಜೈನ ಧರ್ಮವು ಹೇಗೆ ಕಾಣುತ್ತದೆಯೆಂಬುದನ್ನು ತೆರೆವ ಮನಸ್ಸಿನಿಂದ ತಿಳಿಸಬಲ್ಲವನೂ ಆಗಿದ್ದಾನೆ. ಆದಿ ಪುರಾಣದಲ್ಲಿ ಬರುವ ಮಹಾಬಲನ ಒಡ್ಡೋಲಗ ಪ್ರಸಂಗದಲ್ಲಿ ಇದನ್ನು ಗುರುತಿಸಬಹುದು.

"ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೈಯಾಗಿರೆ ನಿಂದ ಧರ್ಮಮೆ ವಲಂ ಪೊತ್ತೆತ್ತುಗುಂಮುಕ್ತಿಪ
ರ್ಯವಸಾನಂಬರಮಾನುಷಂಗಿತ -ಫಲಂ ಭೂಪೇಂದ್ರದೇವೇಂದ್ರ ರಾ
ಜ್ಯವಿಳಾಸಂ ಪೇರಿತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ"

(ಆ.ಪು. ೨-೭)

ಎಂಬ ಮಾತು ಹೊರನೋಟಕ್ಕೆ ಜೈನಪರವಾಗಿರುವಂತೆ ಭಾಸವಾದರೂ ಅದು ಸಂಪೂರ್ಣ ಜೀವಪರವಾಗಿದೆ. ದಯೆ, ದಮ,ದಾನ, ತಪ, ಶೀಲಗಳೆಂಬ ಮೌಲ್ಯಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ, ಅದು ಮುಕ್ತಿಗೆ ದಾರಿಮಾಡಿಕೊಡುತ್ತದೆ ಎಂದು ಹೇಳುವ ಮಂತ್ರಿ ಸ್ವಯಂ ಬುದ್ಧನ ಮಾತು ಪಂಪನೇ ಆಡಿದ ಮಾತಿನಂತಿದೆ. ಜೈನ ಧರ್ಮವೇ ಶ್ರೇಷ್ಠವೆಂದು ಪಂಪ ಇಲ್ಲಿ ಹೇಳಿಸಲಿಲ್ಲ. ಅದರ ಬದಲು ಉತ್ತಮ ಧರ್ಮದ ಮೌಲ್ಯಗಳಾವವು? ಎಂಬ ವ್ಯಾಖ್ಯಾನವನ್ನು ಸ್ವಯಂಬುದ್ಧನ ಮುಖಾಂತರ ಮಂಡಿಸುತ್ತಾನೆ. ಪಂಪ ಹೇಳಿ ಕೇಳಿ ಅನೇಕಾಂತವಾದಿ. ಅಂತೆಯೇ ಈ ಚರ್ಚಾಪ್ರಸಂಗವನ್ನು ಅನೇಕಾಂತವಾದದ ಒಂದು ಗೋಷ್ಠಿಯನ್ನಾಗಿ ರೂಪಿಸಿಕೊಂಡಿದ್ದಾನೆ. ಮರ ಮರ ಮಥನಿಸಿದಾಗ ತಾನೆ ಕಿಚ್ಚು ಹುಟ್ಟುವುದು? ಕೊನೆಗೆ.

"ಪುಸಿಯ ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೊಳ್ಗಿಲ್ದ ದು
ರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ
ಪೊಸಯಿಸಿ ಜೀವನಿಲ್ಲ ಮೊಜ಼ೆಯಿಲ್ಲಱನಿಲ್ಲ ಪರಸ್ತ್ರಿಯಿಲ್ಲೆನಲ್
ಕಸಕಳಿಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್

(ಆ.ಪು. ೨-೧೧)

ಎಂಬ ಪರಿಸಮಾಪ್ತಿಯ ಮಾತುಗಳನ್ನು ಪಂಪ ಸ್ವಯಂ ಬುದ್ಧನಿಂದ ಹೇಳಿಸುತ್ತಾನೆ. ಸುಳ್ಳು, ಪರಸ್ತ್ರೀವ್ಯಾಮೋಹ, ಮದ್ಯ ಮತ್ತು ದುರ್ವ್ಯಸನಗಳು ಮನುಷ್ಯನನ್ನು ಹಾಳು ಮಾಡುತ್ತವೆ. ಅವುಗಳನ್ನು ಪ್ರಚೋದಿಸುವ ಧರ್ಮವು ಧರ್ಮವೇ ಅಲ್ಲ ಎಂಬ ಸರ್ವಸಮ್ಮತ ವಿಚಾರವನ್ನು ಹೇಳಿಸುತ್ತಾನೆ.

ಸಾಮಾನ್ಯವಾಗಿ ನಿಸರ್ಗವರ್ಣನೆಯು ಮಹಾಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಯ ಒಂದು ಭಾಗವಾಗಿಯೋ; ರಾಜ-ರಾಣಿಯರ, ಪ್ರಿಯಕರ-ಪ್ರೇಯಸಿಯರ ಶೃಂಗಾರಕ್ಕೆ ಪೂರಕ ಪರಿಸರವಾಗಿಯೋ ವರ್ಣಿತವಾಗಿರುತ್ತದೆ. ಆದರೆ ಪಂಪನ ಕಾವ್ಯಗಳಲ್ಲಿ ಬರುವ ನಿಸರ್ಗವರ್ಣನೆಗಳು ಅಷ್ಟಕ್ಕೇ ನಿಲ್ಲುವುದಿಲ್ಲ, ಇನ್ನಾವುದೋ ಹೆಚ್ಚಿನ ಉದ್ದೇಶವನ್ನು ಹೊಂದಿ ನಿಲ್ಲುತ್ತವೆ. ಮೇಲಿನ ಪ್ರಸಂಗದಲ್ಲಿಯೂ ಇದನ್ನು ಗುರುತಿಸಬಹುದು. ಭರತನ ಪರಿವಾರದವರು ಸ್ವೇಚ್ಛೆಯಿಂದ ವಿಹರಿಸಿ ಹಿಂದಿರುಗಿದರೆಂದು ಹೇಳಿದ್ದರೆ ನಡೆಯುತ್ತಿತ್ತು. ಆದರೆ ಪಂಪನಿಗೆ ಅಷ್ಟರಿಂದ ತೃಪ್ತಿಯಿಲ್ಲ. ತನ್ನ ಸಶಕ್ತವಾದ ಕವಿದರ್ಶನವನ್ನು ಬಳಸಿಕೊಂಡು ಆ ಪ್ರಸಂಗಕ್ಕೆ ಹೊಸ ಮೆರುಗನ್ನು ನೀಡಿದ್ದಾನೆ. ಪರಿವಾರದವರು ಪ್ರಕೃತಿಯಲ್ಲಿ ಕ್ಷಮೆ ಯಾಚಿಸಿದರೆಂಬ ಸಾತ್ವಿಕ ಕಲ್ಪನೆ ಕೇವಲ ಪಂಪನಂಥ ದೃಷ್ಟಾರರಿಗೆ ಮಾತ್ರ ಸಾಧ್ಯ! ಅಂತೆಯೆ ಭರತನ ಪರಿವಾರದವರು:

"ತಳಿರೊಳ್ ನೀನೆ ಬೆಡಂಗನ್ನೆ ನನೆಗಳೊಳ್ ನೀಂ ನೀಱನ್ನೆ ಪುಷ್ಪಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನ್ನೆ ಪಣ್ತ ಪ
ಣ್ಗಳಿನೋವೋ ಪೆಜಿತೇನೊ ನೀನೆ ಭುವನಕ್ಕಾರಾಧ್ಯನ್ನೆ ಭಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆಲ್ವಂಗಳೇ"

(ಆ.ಪು. ೧೧-೯೮)

ಎಂದೂ ಮರಗಿಡಗಳೊಂದಿಗೆ ಪ್ರಾಯಶ್ಚಿತ್ತ ಮಾಡಬೇಕಾಯಿತು. ಈ ಪ್ರಾಯಶ್ಚಿತ್ತಕ್ಕೆ ಜೈನ ದರ್ಶನದಲ್ಲಿ ವಿಶೇಷ ಮಹತ್ವವಿದೆ.

ಆದಿಪುರಾಣವನ್ನು ಕೇವಲ ಒಂದು ಆಗಮಿಕ ಕಾವ್ಯವೆಂದು ಭಾವಿಸಿ ಓದುವ ಪರಿಪಾಠದಿಂದ ಪಂಪನ ಪ್ರತಿಭೆಯ ಇಂಥ ಎಷ್ಟೊ ಒಳಸೋಟಗಳು ನಮಗೆ ದಕ್ಕದೆ ಉಳಿದಿವೆ. ಹಾಗಾಗಿ ಪಂಪನನ್ನು ಮತ್ತೆ ಮತ್ತೆ, ಬೇರೆ ಬೇರೆ ದೃಷ್ಟಿಕೋನದಿಂದ ಓದುಬೇಕು.

"ನೀಚ್ಚಂ ಪೊಸತು ಅರ್ಣವಂಬೊಲತಿ ಗಭೀರಂ ಕವಿತ್ವಂ" ಎಂದು ಪಂಪನೆ ಹೇಳಿಲ್ಲವೆ? ನಿಸರ್ಗದೊಂದಿಗಿನ ಈ ಬಗೆಯ Confessionನ ಚಿತ್ರಣವು ವಿಶ್ವದ ಅನ್ಯ ಭಾಷಾ ಸಾಹಿತ್ಯದಲ್ಲಿ ಬಂದಿದೆಯೋ ಇಲ್ಲವೊ ಗೊತ್ತಿಲ್ಲ. ಮರಗಿಡಗಳಿಗೂ ಜೀವವಿದೆಯೆಂಬ ಸೂಕ್ಷ್ಮ ಜೈನ ಪ್ರಜ್ಞೆಯು ಪಂಪನಿಂದ ಈ ಮಾತನ್ನು ಹೇಳಿಸಿರುವುದನ್ನು ನಾವು ಗುರುತಿಸಬೇಕು.

"ಓ ವೃಕ್ಷಗಳೇ ನಮ್ಮನ್ನು ನೆನಪಿಸಿಕೊಳ್ಳುತ್ತೀರಿ ಎಂದು ಹೇಳುವುದು ನಮಗೆ ಲಜ್ಜೆಯ ವಿಷಯವೇ. ನಮ್ಮಲ್ಲಿ ಯಾವ ಗುಣಗಳಿವೆಯೆಂದು ನೀವು ನೆನಪಿಸಿಕೊಳ್ಳುತ್ತೀರಿ? ಎಲೈ ಶೋಕವೇ ನಿನ್ನನ್ನು ಒದ್ದುದು (ತುಳಿದದ್ದು) ನಮ್ಮ ಗುಣವೆ? ಬಕುಳವೇ ನಿನ್ನ ಮೇಲೆ ತಾಂಬೂಲದ್ರವ್ಯವನ್ನು ಉಗುಳಿದುದುದು ನಮ್ಮ ಗುಣವೆ? ದಯವಿಟ್ಟು ನಮ್ಮ ಮದೋತ್ಕಟ ಚೇಷ್ಟೆಗಳನ್ನು ಮರೆತು ಬಿಡಿ. ಮೊಗ್ಗುಗಳ ಕುಚ್ಚನ್ನು, ತಳಿರ ಗೊಂಚಲನ್ನು, ಸುಂದರವಾಗಿ ಆಡುತ್ತಿರುವ ಕೊಂಬೆಗಳಲ್ಲಿನ ಮಿಡಿಗಾಯಿಗಳನ್ನು ಪ್ರೀತಿಸದೆ, ರಕ್ಷಿಸದೆ, ರಸ ಸುರಿಯುವಂತೆ ತಂದು ನಿಮ್ಮನ್ನು ಕಾದಿದ್ದೇವೆ. ಎಲೈ ಬಾಲಚೂತ ಈ ಎಲ್ಲ ಅಪರಾಧಗಳನ್ನು ಮನಸ್ಸಿಗೆ ತಂದುಕೊಳ್ಳದೆ ನಾವು-ನೀನು ಜೊತೆಯಲ್ಲಿದ್ದುದನ್ನು ಮಾತ್ರ ನೆನಪಿಟ್ಟುಕೋ" ಎಂದು ಹೆಂಗಳೆಯರು ಸಿಹಿ ಮಾವಿನ ಮರವನ್ನು ಆಲಂಗಿಸಿದರೆಂದು ಕಲ್ಪಿಸಿಕೊಳ್ಳುವುದು ಬಹುಶಃ ಪಂಪನಂಥ ಸೂಕ್ಷ್ಮ ಕವಿದರ್ಶನಕ್ಕೆ ಮಾತ್ರ ಸಾಧ್ಯ. ಇಲ್ಲಿಯ ಪದ್ಯಗಳನ್ನು ಓದುವಾಗ ಓದುಗನೂ ಸಹಿತ ತನಗರಿವಿಲ್ಲದಂತೆ ಪಂಪನ ಭಾವನೆಗಳಲ್ಲಿ ತಾನೂ ಒಂದಾಗಿ ಬಿಡುತ್ತಾನೆ.

ಪ್ರಸ್ತುತ ಸಂದರ್ಭಕ್ಕೆ ಪೂರಕವಾಗಬಲ್ಲ ಇನ್ನೊಂದೆರಡು ಪದ್ಯಗಳನ್ನು ಇಲ್ಲಿ ಎತ್ತಿ ಕೊಡುತ್ತೇನೆ.

"ಭಂಗಿಗಳೊಳೆಮ್ಮೊಳಾದೀ
ಸಂಗಡಮಂ ನೀಮೆ ಮನದೆಗೊಂಡೆಮ್ಮ ಕಿಸುರ್
ಪಿಂಗುಗಲ್ವೆಡೆಯೊಳ್ ಕೆಳೆ
ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳಿರಾ"

(ಆ.ಪು. ೧೧-೧೩೧)

ಎಂಬಲ್ಲಿಯ ಕವಿಕಲ್ಪನೆಯನ್ನು ಒಂದಿಷ್ಟು ಗಮನವಿಟ್ಟು ಪರಿಭಾವಿಸಬೇಕು. ಮರಗಿಡಬಳ್ಳಿಗಳಲ್ಲಿ ಕ್ಷಮೆ ಕೇಳಿದ ಪರಿವಾರದವರು ಹೊರಡುವ ಮುನ್ನ ಮರಗಿಡಬಳ್ಳಿಗಳಿಗೆ ಪ್ರದಕ್ಷಿಣೆ ಹಾಕಿದರಂತೆ! ಪಂಪನ ಅದ್ಭುತ ನಿಸರ್ಗಪ್ರೇಮ ಮತ್ತು ಜೀವಪರ ನಿಲುವನ್ನು ಅರ್ಥ ಮಾಡಿಕೊಳ್ಳಲು ಇದೊಂದೇ ಮಾತು ಸಾಕ್ಷ್ಯನುತ್ತದೆ. ಕೋಗಿಲೆಗೆ ಅವರೇನು ಹೇಳಿದರು ಕೇಳಿ. " ಓ ಕೋಗಿಲೆಯೇ ಮನ್ಮಥನು ಈ ವನದ ಕಾವಲುಗಾರಿಕೆಯನ್ನು ನಿನಗೆ ಕೊಟ್ಟಿದ್ದಾನೆ. ಬಹುಶಃ ನಮ್ಮಂಥ ಕಠೋರ ಹೃದಯದವರಿರುವುದನ್ನು ತಿಳಿದೇ ನೀನು "ಪುಗಲಿಂ", "ಪುಗಲಿಂ" (ಒಳಗೆ ಬರಬೇಡ, ಒಳಗೆ ಬರಬೇಡ) ಎಂದು ಹೇಳುವಂತೆ ತೋರುತ್ತದೆ. ನಾವು ಅದನ್ನು ನೆನೆಯುವುದಿಲ್ಲ. ನಿನ್ನ ಇಂಚರವನ್ನು ಮಾತ್ರ ಸದಾ ಸ್ಮರಿಸಿಕೊಳ್ಳುತ್ತೇವೆ." ದಾರಿಯಲ್ಲಿ ಅವರು ದುಂಬಿಗಳನ್ನು ಮಾತನಾಡಿಸುತ್ತಾರೆ. ತಮ್ಮೊಡನೆ ಹಿಂಬಾಲಿಸಿ ಬರುತ್ತಿದ್ದ ರಾಜಹಂಸಗಳನ್ನೂ ಮಾತನಾಡಿಸುತ್ತಾರೆ. "ನಮ್ಮದು ಕಷ್ಟದ ದಾರಿ, ದೂರದ ದಾರಿ, ಅಲ್ಲಿಯವರೆಗೆ ನಮ್ಮೊಂದಿಗೆ ನಡೆದು ಬಂದರೆ ನಿಮಗೆ ಆಯಾಸವಾಗುತ್ತದೆ, ಕಾರಣ ನೀವು ಹಿಂದಿರುಗಿ" ಎಂದು ಹಂಸಗಳಿಗೆ ಹೇಳಿದರಂತೆ! ಇಂಥ ಪ್ರಸಂಗಗಳನ್ನು ನೋಡಿದಾಗ ಆದಿಪುರಾಣವನ್ನು ಇನ್ನಷ್ಟು Micro ಸ್ತರದ ಓದಿಗೆ ಒಳಪಡಿಸುವುದು ಅಗತ್ಯವಿದೆಯೆಂದು ಯಾರಿಗಾದರೂ ಅನ್ನಿಸದೆ ಇರದು.

ಆದಿಪುರಾಣದ ಕೊನೆಯಲ್ಲಿ ಬರುವ "ಪಾದ್ಯವಿಧಿ"ಯ ಪ್ರಸಂಗವನ್ನೂ ಇಲ್ಲಿ ಅವಲೋಕಿಸುವುದು ಅಗತ್ಯವಾಗಿದೆ. ಅಧಿಕಾರ ಮತ್ತು ಅಭಿಮಾನದ ಕಾರಣವಾಗಿ ಮೂರು ಬಗೆಯ ಯುದ್ಧಗಳನ್ನಾಡಿದ ಭರತ-ಬಾಹುಬಲಿಗಳಿಗೆ ತರುವಾಯ ಜ್ಞಾನೋದಯವಾಗುತ್ತದೆ.

ಅಧಿಕಾರದ ಮತ್ತಿನಲ್ಲಿ ತಮ್ಮನೊಂದಿಗೆ ಅನುಚಿತವಾಗಿ ನಡೆದುಕೊಂಡೆನೆಂಬ ಪ್ರಾಯಶ್ಚಿತ್ತ ಭರತನದಾದರೆ, "ಪಿರಿಯಣ್ಣಂ ತಂದೆಗೆ ಸಮಾನಂ, ಗುರುಗೆ ಸಮಾನಂ" ಎಂಬುದನ್ನು ಮರೆತು ಅಣ್ಣನೊಂದಿಗೆ ಅವಿನಯದಿಂದ ವರ್ತಿಸಿದೆ ಎಂಬ ಪ್ರಾಯಶ್ಚಿತ್ತ ಬಾಹುಬಲಿಯದಾಯಿತು. ಇದನ್ನು ಬಳಸಿಕೊಂಡ ಪಂಪ ಒಂದು ಅದ್ಭುತ ಶಬ್ದಚಿತ್ರವನ್ನೇ ಅಲ್ಲಿ ಕಟ್ಟಿಕೊಡುತ್ತಾನೆ.

ಬಾಹುಬಲಿ ತಪಸ್ಸಿಗೆ ನಿಂತಿದ್ದಾನೆ. ಭೂಮಿ ಮತ್ತು ಆಕಾಶಗಳು ಅವನಿಗೆ ಆಧಾರ ಮತ್ತು ಆಶ್ರಯತಾಣಗಳಾಗಿವೆ. ಅವನ ಪಾದಗಳ ಬಳಿಯಲ್ಲಿ ಭರತಚಕ್ರವರ್ತಿ ವೀರಮಂಡೆಯನ್ನೂರಿ ನತಮಸ್ತಕನಾಗಿ ಕುಳಿತಿದ್ದಾನೆ. ಅಧಿಕಾರದ ಹಮ್ಮು-ಬಿಮ್ಮುಗಳು ಈಗ ಅವನಲ್ಲಿಲ್ಲ. ಅದರ ಪ್ರತೀಕವೆಂಬಂತೆ ಪಕ್ಕದಲ್ಲಿ ನೆಲದ ಮೇಲೆ ತನ್ನ ಕಿರೀಟ-ಖಡ್ಗಗಳನ್ನು ಇರಿಸಿದ್ದಾನೆ. ತಪ್ಪು ನನ್ನಿಂದ ಜರುಗಿತು ಎಂಬ ಕಳವಳದಿಂದಾಗಿ ಇಬ್ಬರ ಕಣ್ಣಲ್ಲೂ ನೀರು ಧಾರಾಕಾರವಾಗಿ ಸುರಿಯುತ್ತಿದೆ. ಭರತನ ಕಣ್ಣೀರು ಬಾಹುಬಲಿಯ ಪಾದಗಳನ್ನು ತೊಳೆಯುತ್ತಿದೆ. ಬಾಹುಬಲಿಯ ಕಣ್ಣೀರು ಭರತನ ಮಸ್ತಕವನ್ನು ತೊಳೆಯುತ್ತಿದೆ. ಕಣ್ಣೀರಿನ ಅಭಿಷೇಕದೊಂದಿಗೆ ಇಂದು ಬಾಹುಬಲಿ ಭರತನಿಗೆ ನಿಜವಾಗಿ ಪಟ್ಟಾಭಿಷೇಕೋತ್ಸವವನ್ನು ನೆರವೇರಿಸಿದನೆಂದು ಹೇಳುವ ಮೂಲಕ ಪಂಪ ಈ ಪ್ರಸಂಗಕ್ಕೆ ಅತಿಶಯತೆಯನ್ನುಂಟುಮಾಡುತ್ತಾನೆ. ಕೇವಲ ಭಾವಾವೇಶದಲ್ಲಿ ಕಟ್ಟಿದ ಪ್ರಸಂಗ ಇದಲ್ಲ. ಪ್ರಾಯಶ್ಚಿತ್ತದ ಜೈನ ಮೌಲ್ಯವನ್ನು ಎತ್ತಿ ಹಿಡಿಯುವ ದೃಷ್ಟಿಯಿಂದ ಮತ್ತು ಮಾನವಸ್ವಭಾವದ ಸಂಕೀರ್ಣತೆಯನ್ನು ತಿಳಿಯಪಡಿಸುವ ದೃಷ್ಟಿಯಿಂದ ಪ್ರಜ್ಞಾಪೂರ್ವಕವಾಗಿ ಪಂಪ ಅದನ್ನು ಕಟ್ಟಿಕೊಟ್ಟಿದ್ದಾನೆ. ಗುಣಕ್ಕೆ ಗುಣವು ಮಣಿದಿರುವ ಅದ್ಭುತ ಪ್ರಸಂಗ ಇದು. ಇಲ್ಲಿಯ ಗುಣಗೌರವ ಪ್ರಜ್ಞೆ ನಮಗೆ ಮುಖ್ಯ. ವ್ಯಕ್ತಿ ಯಾವಾಗಲೂ ಸ್ವವಿಮರ್ಶೆಗೆ ಮುಂದಾಗಬೇಕೆಂಬ ಪ್ರಗತಿಪರ ವಿಚಾರ ಇಲ್ಲಿದೆ.

ಪಂಪನದು ಶುದ್ಧಧಾರ್ಮಿಕ ಪ್ರಜ್ಞೆಯಾಗಿದ್ದಿತೆಂಬುದು ನಿಜ. ಆದರೆ ಅದು ಅಂಥ ಧಾರ್ಮಿಕ ಪ್ರಜ್ಞೆಯಲ್ಲ, ವೈಜ್ಞಾನಿಕತೆಯಿಂದ, ವೈಚಾರಿಕತೆಯಿಂದ ಕೂಡಿದುದಾಗಿದ್ದಿತು. 'ಧರ್ಮ'ದ ಬಗ್ಗೆ ಅವನ ತಿಳುವಳಿಕೆ ಹೇಗಿದ್ದಿತೆಂಬುದನ್ನು ನೋಡಿದಾಗ ಇದು ಸ್ಪಷ್ಟವಾಗುತ್ತದೆ.

"ಪುಸಿಯದುದು ಪರಾಂಗನೆಗಾ
ಚಿಸದುದು ಕೊಲ್ಲದುದು ಮೋಹಮಿಲ್ಲದುದರಿವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸೆವಪುದು ಧರ್ಮಮದಱ ತಡೆವುದಧರ್ಮಂ"

(ಆ. ಪು. ೫-೭೯)

ಇಲ್ಲಿ ಹೇಳಲಾದ ಕದಿಯದುದು, ಕೊಲ್ಲದುದು, ಪುಸಿಯದುದು, ಪರಸ್ತ್ರೀಯರನ್ನು ಆಶಿಸದಿರುವುದು, ಸಂಪತ್ತಿಗೆ ಆಸೆ ಪಡಲಾರದುದು ಇವೆಲ್ಲ ಸಾಮಾನ್ಯ ಮೌಲ್ಯಗಳು, "ಅರಿವಂ ಪೊಸಯಿಸುವುದೆ ಧರ್ಮಂ" ಎಂದಿರುವಲ್ಲಿ ಪಂಪನ ಹೆಚ್ಚುಗಾರಿಕೆಯಿದೆ. ನಮ್ಮ ತಿಳುವಳಿಕೆಗಳು ಸ್ಥಗಿತವಾಗಿಬಾರದು, ಜಿಡ್ಡುಗಟ್ಟಬಾರದು. ಕಾಲಕಾಲಕ್ಕೆ ಅವು ಪರಿಷ್ಕರಣಗೊಳ್ಳಬೇಕೆಂದು ಪಂಪ ಬಯಸುತ್ತಾನೆ. ಇದು ಅತ್ಯಾಧುನಿಕ ವಿಚಾರವಾಗಿದೆ. ಜ್ಞಾನದ ನವೀಕರಣ(Renewal of Knowledge) ನಡೆಯುತ್ತಿರಬೇಕೆಂಬಲ್ಲಿ ಪಂಪನ ಮುಕ್ತ ಮನಸ್ಸು ಪ್ರಕಟವಾಗಿದೆ.

ವಿಕ್ರಮಾರ್ಜುನ ವಿಜಯಂನ ಕೆಲವು ಪ್ರಸಂಗಗಳ ಮೂಲಕ ಪಂಪನ ಧೋರಣೆಯನ್ನು ಇನ್ನಷ್ಟು ಸ್ಪಷ್ಟಪಡಿಸಬಹುದು.

"ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್"

(ವಿ.ವಿ. ೪-೨೯)

ಎಂಬ ಪದ್ಯವು ಪಂಪನ ವಿಚಾರಧಾರೆಯ ಪ್ರತೀಕವಾಗಿದೆ. ತ್ಯಾಗ, ಭೋಗ, ವಿದ್ಯೆ, ಗೇಯ, ಗೋಷ್ಠಿ ಮೊದಲಾದ ಮೌಲ್ಯಗಳಿದ್ದವರು ಮಾತ್ರ ಮನುಷ್ಯರು, ಮಿಕ್ಕವರಲ್ಲ- ಎಂಬ ಹೊಸ ವ್ಯಾಖ್ಯಾನವನ್ನು ಇಲ್ಲಿ ಮಂಡಿಸಿದ್ದಾನೆ. ತಾನು ಬನವಾಸಿಯಲ್ಲಿ ಮತ್ತೊಮ್ಮೆ ಹುಟ್ಟುವುದಾದರೆ ಇಂಥ ಗುಣಗಳನ್ನು ಮೈವೆತ್ತು ಹುಟ್ಟಬೇಕೆಂದು ಆತ ಬಯಸುತ್ತಾನೆ. ಅದು ಸಾಧ್ಯವಾಗದಿದ್ದರೆ ಮರಿದುಂಬಿಯಾಗಿ ಅಥವಾ ಕೋಗಿಲೆಯಾಗಿ ಹುಟ್ಟಿ ಬರಲು ಬಯಸುತ್ತಾನೆ. ಪಂಪ ದೇವರಾಗಿಯೋ, ಇಂದ್ರ-ಚಂದ್ರರಾಗಿಯೋ, ರಾಜನಾಗಿಯೋ ಹುಟ್ಟಲು ಬಯಸಲಿಲ್ಲ, ಒಬ್ಬ ಸಾಮಾನ್ಯ ಮನುಷ್ಯನಾಗಿ ಹುಟ್ಟಲು ಬಯಸಿದ. (ಮನುಷ್ಯಜನ್ಮ ಜೈನರಲ್ಲಿ ಶ್ರೇಷ್ಠ. ಮನುಷ್ಯತ್ವದಿಂದ ದೈವತ್ವ ಪ್ರಾಪ್ತಿ) ಭೌತಿಕ ಸಂಪತ್ತಿಗೆ ಆಸೆ ಪಡಲಿಲ್ಲ, ಹೃದಯಶ್ರೀಮಂತಿಕೆಗೆ ಹಂಬಲಿಸಿದ. ಅದು ಸಾಧ್ಯವಾಗದಿದ್ದರೆ, ಪಶುಪಕ್ಷಿಗಳೊಂದಿಗೆ ಸಹಜೀವನ ನಡೆಸಲು ಬಯಸಿದ. ಪಂಪನ ಕಾವ್ಯವು ಕೇವಲ ಕಾವ್ಯಕ್ಕಾಗಿ ಬರೆದುದಲ್ಲ. ವಿಶ್ವಪ್ರಜ್ಞೆಯ ಒತ್ತಾಸೆಗಾಗಿ ಬರೆದುದು ಎಂಬುದನ್ನು ಇಂಥದಲ್ಲಿ ಅರ್ಥ ಮಾಡಿಕೊಳ್ಳಬಹುದು.

ಕುಲವಿಚಾರವಾಗಿ ಪಂಪ ಹೊಂದಿರುವ ವಿಚಾರಗಳೂ ಸಮರ್ಪಕವಾಗಿವೆ. ಸರ್ವಸಮ್ಮತವಾಗಿವೆ. ಕರ್ಣನ ಪಾತ್ರದ ವಿಶ್ಲೇಷಣೆಯ ಮೂಲಕ ಇದನ್ನು ಸಾಬೀತು ಪಡಿಸಬಹುದು.

ದ್ರೋಣ-ಕೃಪರು ಜಾತಿಯ ಮಾತುಗಳನ್ನೆತ್ತಿ ಕರ್ಣನನ್ನು ನಿಂದಿಸಿದಾಗ ಮಧ್ಯೆ ಪ್ರವೇಶಿಸಿ ಮಾತನಾಡಿದ ದುರ್ಯೋಧನನ ಹಿಂದೆ ನಮಗೆ ಪಂಪನ ಧ್ವನಿಯೇ ಕೇಳಿ ಬರುತ್ತದೆ.

"ಕುಲಮೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ
ಮೊಲಿದೆಲ್ಲಿ ಪುಟ್ಟಿ ಬಳೆದಿರೊ
ಕುಲವಿರ್ದುದೆ ಕೊಡದೊಳಂ ಶರಸ್ತಂಬದೊಳಂ"

(ವಿ.ವಿ.೨-೮೩)

ಎಂಬ ಪದ್ಯದ ಮೂಲಕ ಕುಲವಿಚಾರವನ್ನು ಹೇಗೆ ಅರ್ಥೈಸಿಕೊಳ್ಳಬೇಕೆಂಬುದನ್ನು ದುರ್ಯೋಧನನಿಂದ ಹೇಳಿಸಿದ್ದಾನೆ. ಕುಲಸಮಸ್ಯೆ ಭಾರತಕ್ಕೆ ಅಂಟಿದ ಪಿಡುಗೆಂಬುದು ಪಂಪನಿಗೆ ಗೊತ್ತಿದೆ. ತನ್ನ ಕಾವ್ಯಗಳ ಮೂಲಕ ಅದರ ಬಿಕ್ಕಟ್ಟನ್ನು ಪರಿಹರಿಸಲು ಪಂಪ ಪ್ರಯತ್ನಿಸಿದ್ದಾನೆ. ಜಾತಿಯ ವಿಷಯದಲ್ಲಿ ಕೀಳುಕುಲದವರು ಅಂದು ಅನುಭವಿಸುತ್ತಿದ್ದ ಕೀಳರಿಮೆ ಪಂಪನನ್ನು ಬಹುವಾಗಿ ಕಾಡಿದಂತಿದೆ ಕರ್ಣನ ಹಾಗೆ ದೀನ ದಲಿತರು "ಪಂದೆಯಂ ಪಾವಡರ್ದಂತೆ" ಒದ್ದಾಡುವುದನ್ನು

ಪಂಪ ನೋಡಲಾರ, ಮನುಷ್ಯನ ವ್ಯಕ್ತಿತ್ವವನ್ನು ಗುಣದಿಂದ ತಿಳಿಯಬೇಕೇ ವಿನಃ ಜನ್ಮ-ಜಾತಿಗಳಿಂದಲ್ಲ ಎಂಬ ಜೈನ ವಿಚಾರ ಇಲ್ಲಿ ಅನುಕರಣಿತವಾಗಿದೆ. ಸ್ವಾರ್ಥದಿಂದ ಪ್ರೇರಿತನಾದ ದುರ್ಯೋಧನ, ಕರ್ಣನೊಂದಿಗೆ ಆತ್ಮೀಯವಾಗಿ ನಡೆದುಕೊಂಡನೆಂಬ ವಾದಕ್ಕೆ ಇಲ್ಲಿ ಎಡೆಯಿದೆ. ಆದರೂ "ಪೊಡಮಡುವುದು, ಜೀಯ-ಹಸಾದ ಎಂಬುದು ನನ್ನ ನಿನ್ನ ನಡುವೆ ಬೇಡ" ಎಂಬ ದುರ್ಯೋಧನನ ಮಾತಿನಲ್ಲಿ ಪಂಪ ಹೇಳಬಯಸಿದ ಹೆಚ್ಚಿನ ಅಂಶ ಅಡಗಿದೆಯೆಂಬುದು ಸ್ಪಷ್ಟ. ಪಂಪನು ಕರ್ಣನಲ್ಲಿ ತನ್ನನ್ನೂ ದುರ್ಯೋಧನನಲ್ಲಿ ಅರಿಕೇಸರಿಯನ್ನು ಕಂಡಿರಬಹುದೆಂಬ ತರ್ಕವನ್ನು ವಿದ್ವಾಂಸರು ಮಾಡಿರುವುದರಲ್ಲಿ ಹುರುಳಿಲ್ಲದೆ ಇಲ್ಲ. 'ನೆನೆವೊಡೆ ಕರ್ಣನಂ ನೆನೆಯ', 'ಕರ್ಣಂಗೊಡ್ಡಿತ್ತು ದಲ್ ಭಾರತಂ', 'ಕರ್ಣರಸಾಯನ ಮಲ್ತೆ ಭಾರತಂ' ಎಂಬೆಲ್ಲ ಮಾತುಗಳು ಇದಕ್ಕೆ ಸಮರ್ಥನೆಯನ್ನೊದಗಿಸುತ್ತವೆ.

ಕರ್ಣನಿಗೆ ಸೇನಾಪತಿ ಪಟ್ಟಕಟ್ಟಲು ಮುಂದಾದ ದುರ್ಯೋಧನನ ಕ್ರಮವನ್ನು ಪ್ರಶ್ನಿಸಿದ ಅಶ್ವತ್ಥಾಮ ಸೂತನಿಗೇಕೆ ಪಟ್ಟ? ಎಂದು ಕಿಡಿ ಕಾರುತ್ತಾನೆ. ಆಗ ಕರ್ಣನ ಪರವಾಗಿ ವಾದಿಸಿದ ದುರ್ಯೋಧನ "ಸಾಮ್ಯಾನದ ಮನುಜನಲ್ಲಂಗಜ ಮಹೀಶಂ" ಎಂದು ಅಶ್ವತ್ಥಾಮನನ್ನು ಸುಮ್ಮನಾಗಿಸುತ್ತಾನೆ. ಮತ್ತೂ ಒಮ್ಮೆ ಅಶ್ವತ್ಥಾಮ ಕರ್ಣನ ಬಗ್ಗೆ ಬಿರುನುಡಿಗಳನ್ನಾಡಿದಾಗ ದುರ್ಯೋಧನ ಅಶ್ವತ್ಥಾಮನನ್ನು ಚೆನ್ನಾಗಿಯೇ ತರಾಟೆಗೆ ತೆಗೆದುಕೊಳ್ಳುತ್ತಾನೆ. "ನಿನ್ನಿಂದ ತ್ರಿಭುವನ ರಾಜ್ಯೋನ್ನತಿ ಬಂದೋದಗಿದರೂ ಅದು ನನಗೆ ಬೇಡ. ನೀನು ನನ್ನ ಗುರುವಿನ ಮಗನೆಂಬ ಒಂದೇ ಕಾರಣಕ್ಕೆ ನಿನ್ನನ್ನು ಜೀವಸಹಿತ ಉಳಿಸಿದ್ದೇನೆ. ಬೇರೆ ಯಾರಾದರೂ ಆಗಿದ್ದರೆ ಅವರನ್ನು ಕೊಚ್ಚಿ ಹಾಕುತ್ತಿದ್ದೆ. ಕರ್ಣ ಬದುಕಿರುವಾಗ ನೀನು ಈ ಮಾತುಗಳನ್ನಾಡಿದರೆ ನಡೆಯುತ್ತಿತ್ತು. ಅವನ ಅನುಪಸ್ಥಿತಿಯಲ್ಲಿ ಹೀಗೆ ನಿಂದಿಸುವುದು ಸರಿಯಲ್ಲ. ಇದರಿಂದ ಸ್ವರ್ಗದಲ್ಲಿರುವ ಕರ್ಣನ ಮನಸ್ಸಿಗೆ ನೋವಾಗುತ್ತದೆ". ಎಂದು ಭಾವುಕನಾಗಿ ನುಡಿಯುತ್ತಾನೆ. ಹೀಗೆ ಎಲ್ಲೆಲ್ಲಿ ಕುಲದ ವಿಚಾರ ಬರುತ್ತದೆಯೋ ಅಲ್ಲಿ ಪಂಪ ತುಂಬ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸುತ್ತಾನೆ. ಏಕೆಂದರೆ ಮನುಷ್ಯ ಜಾತಿ ಒಂದೇ ಎಂಬ ಪ್ರಬುದ್ಧ ಪ್ರಜ್ಞೆ ಅವನದಾಗಿದೆ. ದ್ರೋಣರಿಗೆ ಕರ್ಣ ಕೊಡುವ ಉತ್ತರ ಎಷ್ಟು ಖಾರವಾಗಿದೆ ನೋಡಿ:

"ಕುಲಮನೆ ಮುನ್ನಮುಗ್ಗಡಿಪಿರೇಂಗಳ ನಿಮ್ಮ ಕುಲಂಗಳಾಂತು ಮಾ
ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮುಕುಲಂ ಬಗೆವಾಗಳೀ
ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟು ಮಾಡುಗುಂ"
(ವಿ.ವಿ. ೧೦-೨೧)

ಕುಲವು ಕುಲವಲ್ಲ, ಚಲವು ಕುಲ, ಗುಣವು ಕುಲ, ಶೌರ್ಯವು ಕುಲ,ಅಭಿಮಾನವೊಂದೇ ಕುಲ ಎಂಬ ಕ್ಷೇತ್ರಯುಗಕ್ಕೆ ತಕ್ಕುದಾದ ಮಾತುಗಳನ್ನು ಪಂಪ ಕರ್ಣನ ಮುಖದಿಂದ ಹೇಳಿಸುತ್ತಾನೆ. ಕುಲವನ್ನೇ ಮಾನದಂಡವನ್ನಾಗಿಟ್ಟುಕೊಂಡು ನೀವು ಮಾಡ ಹೊರಟಿರುವ ಕಲಹವು ನಿಮಗೆ ಆಕುಲ (ತೊಂದರೆ)ವನ್ನುಂಟುಮಾಡುವುದು ಸುನಿಶ್ಚಿತ ಎಂಬ ಕರ್ಣನ ಭವಿಷ್ಯವಾಣಿ ತುಂಬ ಮಹತ್ವಪೂರ್ಣ್ನಿಸುತ್ತದೆ. ಅದು ಅಂದಿನ ಮಹಾಭಾರತಕ್ಕೆ ಹೊಂದಿಕೆಯಾಗುವುದಕ್ಕಿಂತ ಹೆಚ್ಚಾಗಿ ಇಂದಿನ ಭಾರತಕ್ಕೆ ಚೆನ್ನಾಗಿ ಅನ್ವಯಿಸುವಂತೆ ತೋರುತ್ತದೆ. ಜಾತಿ ಜಾತಿಗಳ ಮೇಲಾಟದಲ್ಲಿ ಪಂಪ

ಯಾವಾಗಲೂ ಕೆಳಜಾತಿಯವರ ಪರವಾಗಿ ನಿಲ್ಲುತ್ತಾನೆನ್ನುವುದು ವಿಶೇಷವಾಗಿದೆ. ಬಹುಶಃ ಇದೇ ಕಾರಣದಿಂದಾಗಿ ಪಂಪನ ಕೃತಿಗಳು ಅಂದಿನಂತೆ ಇಂದಿಗೂ ಪ್ರಸ್ತುತವಾಗಿ ನಿಲ್ಲುತ್ತವೆ.

ಹಾಗೆಯೇ ರಾಜಸತ್ತೆಯ ವಿಮರ್ಶೆಯ ಪ್ರಸಂಗಗಳನ್ನೂ ಪಂಪ ತುಂಬ ಸಮರ್ಥವಾಗಿ ನಿರ್ವಹಿಸುತ್ತಾನೆ.

"ಪೆಣಸುಳ್ಳುದ್ದುತ್ತರಂ ತಳ್ತಿರಿಯದೆ ಚತುರಂಬೋಧಿ ಪರ್ಯಂತಮಂ ಧಾ
ರಿಣಿಯಂ ತಾಂ ಪೋಗಿ ಬಾಯ್ಕೇಳಿಸದೆ ಮುನಿಜನಕ್ಕಿಷ್ಟವಿಘ್ನಂಗಳಂ ದಾ
ರುಣ ದೈತ್ಯರ್ ಮಾಡೆ ನೀಡಿಲ್ಲದೆ ಸಲೆ ಚಲದಾಟಂದು ಕೊಂದಿಕ್ಕದೋರ್ವಂ
ಗುಣಮುಂಟೆಂದುಂಡು ಪಟ್ಟಿರ್ಪಣಗಮೆ ನಿರುದ್ಯೋಗಿಯಂ ನಿರುದ್ಯೋಗಿಯಂ
-ಭೂ ಪರೆಂಬರ್"

ಮತ್ತು (ವಿ.ವಿ. -೪-೧೧)

"ಒತ್ತಿ ತಱುಂಬಿ ನಿಂದ ರಿಪುಭೂಜಸಮಾಜದ ಬೆರ್ಗಳಂ ನಧ
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ
ಚ್ಚೊತ್ತದೆ ಮಾಣ್ಬ ಬಾಳ್ವ ಪುಟೆವಾನಸನೆಂಬನಜಾಂಡಮೆಂಬುದೊಂ
ದತ್ತಿಯ ಪಣ್ಣೊಳಿರ್ಪ ಪುಟೆವಲ್ಲದೆ ಮಾನಸನೇ ಮುರಾಂತಕಾ"

(ವಿ.ವಿ. ೫-೭೫)

ರಾಜನಾದವನು ಕೇವಲ ತನ್ನ ಸಂಪತ್ತು -ಅಧಿಕಾರಗಳನ್ನು ಪ್ರದರ್ಶಿಸದೆ ಸಮಾಜದ ಸರ್ವಾಂಗೀಣ ಹಿತಕ್ಕಾಗಿ ಶ್ರಮಿಸಬೇಕೆಂಬ ಅಭಿಪ್ರಾಯವನ್ನು ಪಂಪ ಅರ್ಜುನನ ಬಾಯಲ್ಲಿ ಹೇಳಿಸಿದ್ದಾನೆ.

ಇದಕ್ಕಿಂತ ತುಂಬ ಮುಕ್ತವಾಗಿ ರಾಜಸತ್ತೆಯ ದೋಷಗಳನ್ನು ವಿಮರ್ಶಿಸುವ ಅವಕಾಶ ಪಂಪನಿಗೆ ದೊರೆಯುವುದು ಶಲ್ಯ- ದುರ್ಯೋಧನರ ವಾದಪ್ರಸಂಗದಲ್ಲಿ. ಕರ್ಣನಿಗೆ ಸಾರಥಿಯಾಗುವಂತೆ ದುರ್ಯೋಧನನು ಶಲ್ಯನನ್ನು ಕೇಳಿದಾಗ ಸಿಡಿದೇಳುವ ಶಲ್ಯ ರಾಜಸಂಕುಳದ ಜಾತಕವನ್ನೇ ಜಾಲಾಡಿ ಬಿಡುತ್ತಾನೆ:

"ಕಲಿಮನೆ ಪಂದೆ ಮಾಟ್ಟಿ ಕಡುವಂದೆಯನೊಳ್ಗಲಿ ಮಾಟ್ಟಿ ತಕ್ಕನಂ
ಪೊಲೆಯನೆ ಮಾಟ್ಟಿ ಮುಂ ಪೊಲೆಯನಂ ನೆಱೆತಕ್ಕನೆ ಮಾಟ್ಟತಮ್ಮೊಳ
ಗ್ಗಲಿಸಿ ಪೊವಜ್ಜ ಪರ್ವಿದವಿವೇಕತೆಯಿಂ ನೃಪ ಚಿತ್ತವೃತ್ತಿ ಸಂ
ಚಳಮದಱಿಂದ ಮೋಲಗಿಸಿ ಬಾಟ್ಟವೆ ಕಷ್ಟಮಿಳಾಧಿನಾಥರಂ"

(ವಿ.ವಿ. ೧೨-೯೨)

ಅನುಪಮವಿಕ್ರಮ ಕ್ರಮ ಮುದಾರಗುಣಂ ಋತವಾಕ್ಯಮೆಂಬ ಪೆಂ
ಪೆನಲಿವು ಮೂಱೆ ನಾಲ್ಕೆ ಗುಣಮತ್ತ ಮದಾನ್ವಿತ ರಾಜ ಬೀಜ ಸಂ
ಜನಿತಗುಣಂ ಮದಂ ಮದಮನಾಳ್ದವಿವೇಕತೆಯಿಂದಮಲ್ತೆ ತೋ
ಱ್ತೆನ ಮೊಲೆಪಾಲನುಂಡ ಗುಣವಿಂತಿವನಾರ್ಕಿಡಿಪರ್ ನರೇಂದ್ರರೊಳ್"

(ವಿ.ವಿ.. ೧೨-೯೩)

ವೀರರನ್ನು ಹೇಡಿಗಳನ್ನಾಗಿ, ಹೇಡಿಗಳನ್ನು ವೀರರನ್ನಾಗಿ, ಯೋಗ್ಯರನ್ನು ಅಯೋಗ್ಯರನ್ನಾಗಿ, ಅಯೋಗ್ಯರನ್ನು ಯೋಗ್ಯರನ್ನಾಗಿ ಮಾಡುವ ಪಕ್ಷಪಾತ ಧೋರಣೆ ರಾಜರದಾಗಿರುತ್ತದೆ. ಅವಿವೇಕದಿಂದಾಗಿ ರಾಜರ ಚಿತ್ತವೃತ್ತಿ ಚಂಚಲವಾಗಿರುತ್ತದೆ. ಅವರನ್ನು ಓಲಗಿಸಿ ಬಾಳುವುದೇ ಕಷ್ಟ ಎಂದು ಶಲ್ಯ ದುರೋಧನನ ಮುಖಕ್ಕೆ ಹೊಡೆದಂತೆ ಹೇಳುತ್ತಾನೆ. ಅಷ್ಟೇ ಅಲ್ಲ, 'ರಾಜರು ತೊಟ್ತಿನ ಮೊಲೆವಾಲನುಂಡವರು' ಎಂದೂ ಕಿಡಿ ಕಾರುತ್ತಾನೆ. ಒಬ್ಬ ಸಮಕಾಲೀನ ರಾಜನ ಆಶ್ರಯದಲ್ಲಿ ನೆಲೆನಿಂತು ಕಾವ್ಯ ಬರೆಯುತ್ತಿರುವ ಪಂಪ ರಾಜಸತ್ತೆಯ ವಿರುದ್ಧ ಇಂಥ ಮಾತುಗಳನ್ನು ಹೇಳಿಸಬೇಕಾದರೆ ಅವನ ಕೆಚ್ಚು ಎಂಥದಾಗಿರಬೇಕೆಂಬುದನ್ನು ಊಹಿಸಿಕೊಳ್ಳಬೇಕು. ರಾಜಸತ್ತೆಯ ಯಾವುದೇ ವಜ್ರಸಂಕೋಲೆಗೆ ಪಂಪ ಸಿಲುಕಿರಲಿಲ್ಲ. ಅಂತೆಯೇ ಅವನು "ಪೆರರೀವುದೇಂ ಪೆರರಿಂದಪ್ಪದೇಂ?" ಎಂದು ದಿಟ್ಟದತನದಿಂದ ಪ್ರಶ್ನಿಸುತ್ತಾನೆ. ಒಂದು ಕ್ಷೇತ್ರದ ಹೊರಗೆ ನಿಂತು ಅದನ್ನು ಪ್ರತಿಭಟಿಸುವುದಕ್ಕಿಂತ ಆ ಕ್ಷೇತ್ರದ ಒಳಗಿದ್ದುಕೊಂಡೇ ಅದನ್ನು ಪ್ರತಿಭಟಿಸುವುದು ನಿಜವಾದ ಬಂಡಾಯವೆನ್ನಿಸುತ್ತದೆ. ಹುಲಿಯ ಗುಹೆಯೊಳಗಿದ್ದು ಹುಲಿಯೊಂದಿಗೆ ಹೋರಾಡುವ ಕೆಲಸ ಅದಾಗಿರುತ್ತದೆ.

ಒಟ್ಟಾರೆ ನೋವಿನ ಎದುರು ಪಂಪನ ಮನಸ್ಸು ಕರಗಿ ನೀರಾಗುತ್ತದೆ. ಶೋಷಣೆಯ ಎದುರು ಹೆಪ್ಪುಗಟ್ಟಿ ಕಲ್ಲಾಗುತ್ತದೆ. ಅವನ ಪ್ರಜ್ಞೆ ಕುಸುಮವೂ ಹೌದು, ವಜ್ರವೂ ಹೌದು! ಒಬ್ಬ ಸಮರ್ಥ ಕವಿಗೆ ಇವೆರಡೂ ಗುಣಗಳು ಅತ್ಯಗತ್ಯ.

□

---

ಡಾ. ಶಾಂತಿನಾಥ ದಿಬ್ಬದ
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

# ಜಿ.ಪಿ. ಬಸವರಾಜು : ಕವಿತೆಗಳು

## ನೆಲಕ್ಕಂಟಿದ ಪಾದ

ಪುಟ್ಟ
ಮೂರ್ತಿಗೊಂದು ಚೌಕಟ್ಟು
ಗರ್ಭಗುಡಿ
ಬಾಗಿಲು ಕಮಾನು
ಕೆತ್ತನೆ ಕುಸುರಿ
ಬಳ್ಳಿ ಬಳ್ಳಿ
ಕಮಲಗಳ ಅಲಂಕಾರ.

ಪದ್ಮಾಸನದ ಭಂಗಿಯಲಿ
ಕಣ್ಮುಚ್ಚಿ ಕುಳಿತ
ಮೂರ್ತಿ
ಭವ ಭವಗಳ ದಾಟುತ್ತ ಬಂದು
ಬಂಧನ ಬಂಧನಗಳ ಹರಿಯುತ್ತ ಬಂದು
ಮುಕ್ತಿ ಶಿಖರವ
ಮುಟ್ಟುವ ತವಕ.
ಆದರೂ
ಕುಳಿತೇ ಇರಬೇಕು
ಈ ಚೌಕಟ್ಟಿನಲ್ಲಿ

ಗರ್ಭಗುಡಿಯ
ಕಟ್ಟುಪಾಡಿನಲ್ಲಿ
ಹಠಯೋಗದಲ್ಲಿ
ತೊರೆದ ಭೋಗದಲ್ಲಿ

೨

ಶ್ರೀಪಾದ ಗೊಮ್ಮಟ
ತನ್ನೆರಡು ಭದ್ರಪಾದಗಳನ್ನು
ನೆಲಕ್ಕೂರಿ.

ಆಕಾಶಕ್ಕೆ
ಬಾಹು ತೆರೆದು
ಬಟಾ ಬಯಲಲ್ಲಿ
ಎಲ್ಲ ತೊರೆದು
ಬೆಟ್ಟದ ಮೇಲೆ
ನಿಂತರೂ
ಈ ನೆಲದ ನಂಟು
ಬಿಟ್ಟವನಲ್ಲ.

ಸುರಿವ ಮಳೆ
ಉರಿವ ಬಿಸಿಲು
ಸುಳಿಗಾಳಿ ಬಿರುಗಾಳಿ ತಂಗಾಳಿ.

ತೆರೆದ ಕಣ್ಣಿನ ಮೇಲೆ
ಕುಳಿತುಕೊಳ್ಳುತ್ತದೆ ಹಕ್ಕಿ
ತಲೆಯ ಮೇಲೆ ಲಾಗ ಹಾಕುತ್ತದೆ ಕೋತಿ
ಪಾದಕ್ಕೆ ಸುತ್ತಿಕೊಳ್ಳುತ್ತದೆ
ನೆಲದ ಬಳ್ಳಿ.

ತ್ಯಜಿಸಿದ್ದೋ
ಅಂಟಿಕೊಂಡದ್ದೋ
ಅಂತೂ
ಈ ಪಾದಗಳು
ಭದ್ರ ಊರಿವೆ
ನೆಲಕೆ;

ಭದ್ರಪಾದ ಅಜೇಯ;
ಈ ನೆಲದ ವಿಜಯ.

## ಎಷ್ಟು ಜಾಗ?

ಈ ಮನೆಯಲ್ಲೆಷ್ಟು ಜಾಗ ನಿನ್ನದು?
ಅಷ್ಟೂ ಜಾಗ ನನ್ನದೇ.
ಈ ಕೋಣೆಯಲ್ಲೆಷ್ಟು ಜಾಗ ನಿನ್ನದು?
ಅಷ್ಟೂ ಜಾಗ ನನ್ನದೇ.
ಈ ಮಂಚದ ಮೇಲೆಷ್ಟು ಜಾಗ ನಿನ್ನದು?
ಅಷ್ಟೂ ಜಾಗ ನನ್ನದೇ.
ಈ ಪರದೆಯ ಒಳಗೆಷ್ಟು ಜಾಗ ನಿನ್ನದು?
ಅಷ್ಟೂ ಜಾಗ ನನ್ನದೇ.

ಅಷ್ಟೂ ಜಾಗಕ್ಕೆ ಕೈಕಾಲು ಚಾಚಿ
ಒಳಸರಿಯುತ್ತೇನೆ;
ಮನದೊಳಕ್ಕೆ ಇಳಿಯುತ್ತೇನೆ,
ಅಲ್ಲಿ ಇಡೀ ನಾನು ಬೆಳೆಯುತ್ತೇನೆ.

ಈ ಮನಸ್ಸಿನ ಆಳ ಅಗಲ ವಿಸ್ತಾರ ಎಷ್ಟು?
ಚಾಚುತ್ತೇನೆ
ನೆಲದಿಂದ ಮುಗಿಲಿಗೆ
ಭೂಲೋಕ-ಸ್ವರ್ಗಲೋಕ-ಪಾತಾಳ ಲೋಕಗಳಿಗೆ
ಇನ್ನೆಷ್ಟೊ ಲೋಕಗಳಿಗೆ
ಬೆಳೆದು ನಿಲ್ಲುತ್ತೇನೆ
ಎಲ್ಲೆಲ್ಲು ನಾನೇ ನಾನು.

ನಕ್ಷತ್ರಗಳ ಮುಡಿಯುತ್ತೇನೆ
ಸೂರ್ಯ ಚಂದ್ರರ ಕಣ್ಮಿಟುಕಿಸುತ್ತೇನೆ
ವಾಯುಮಂಡಲ ನಭೋಮಂಡಲಗಳ ದಾಟುತ್ತೇನೆ
ಕತ್ತಲಾಳದ ಗರ್ಭದಲ್ಲೂ ನಿರಾಂತಕ ಸಾಗುತ್ತೇನೆ
ಸ್ವರ್ಗದ ಪುಷ್ಪಕ ವಿಮಾನ ತೇಲುತ್ತೇನೆ-
ನಾನೆ ನಾನು.
ಮತ್ತೆ ಮುದುಡುತ್ತೇನೆ:

ಅಷ್ಟು ಇಷ್ಟು,
ಇಷ್ಟೇ ಇಷ್ಟು
ಆರಡಿ ಉದ್ದವೂ ಬೇಡ
ಮೂರಡಿ ಅಗಲವೂ ಬೇಡ;

ನಾನು
ಅಂಥ ದೊಡ್ಡ
ಆಳಲ್ಲ.



ಜಿ.ಪಿ. ಬಸವರಾಜು
ಪ್ರಜಾವಾಣಿ, ನಂ. ೭೫, ಎಂ.ಜಿ. ರಸ್ತೆ
ಬೆಂಗಳೂರು - ೫೬೦ ೦೦೧.

# ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿಯ ಸ್ವರೂಪ

ಡಾ. ಎಲ್. ರಾಜಶೇಖರಯ್ಯ

ಭಾರತೀಯರಲ್ಲಿ ವಿವಾಹ ಒಂದು ಧಾರ್ಮಿಕ ಸಂಸ್ಥೆಯಾಗಿ ಅಂಗೀಕೃತವಾಗಿದೆ. ವಿವಾಹವನ್ನು ಸಂಸ್ಕಾರ ಪ್ರಜ್ಞೆ ಮತ್ತು ಧಾರ್ಮಿಕ ವಿಧಿ-ನಿಷೇಧಗಳ ದೃಷ್ಟಿಯಿಂದ ಆಚರಿಸುವುದೇ ಇದಕ್ಕೆ ಮುಖ್ಯ ಕಾರಣ. ಭಾರತೀಯರಿಗೆ ವಿವಾಹ ಧಾರ್ಮಿಕ ಸಂಸ್ಥೆಯೂ ಹೌದು, ಸಾಮಾಜಿಕ ಸಂಸ್ಥೆಯೂ ಹೌದು. ಹದಿನಾರು ಸಂಸ್ಕಾರಗಳಲ್ಲಿ ವಿವಾಹವೂ ಒಂದು ಮುಖ್ಯ ಸಂಸ್ಕಾರ. ಸ್ತ್ರೀಯರಿಗೆ ವಿವಾಹದಿಂದಲೇ ಸಂಸ್ಕಾರ ವಿಧಿ ಪ್ರಾರಂಭವಾಗುವುದು. ಬ್ರಹ್ಮಚರ್ಯ, ಸನ್ಯಾಸ, ವಾನಪ್ರಸ್ಥ ಮುಂತಾದ ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಬುನಾದಿಯಾದರೆ, ಗೃಹಸ್ಥಾಶ್ರಮಕ್ಕೆ ವಿವಾಹ ಸಂಸ್ಕಾರವೇ ಅಡಿಗಲ್ಲು. ಆದ್ದರಿಂದ ಮನುಷ್ಯ ಸಮಾಜದ ವಿವಾಹ ಪದ್ಧತಿಯ ವಿವೇಚನೆ ಬಹು ಕುತೂಹಲ ಮತ್ತು ಆಕರ್ಷಕ. ಈ ವಿವಾಹ ಪದ್ಧತಿ ಬಹಳ ಪ್ರಾಚೀನ, ವಿಶ್ವವ್ಯಾಪಿ ಹಾಗೂ ವೈವಿಧ್ಯಪೂರ್ಣ.

ಪ್ರಾಚೀನ ಕನ್ನಡ ಸಾಹಿತ್ಯದ ವಿವಾಹ ವರ್ಣನೆಯಲ್ಲಿ ಪ್ರಧಾನವಾಗಿ ವ್ಯಕ್ತವಾಗಿರುವುದು ಕನ್ಯಾದಾನ ಪದ್ಧತಿ. ಕನ್ಯಾಪಿತೃ ವರನಿಗೆ ಕೈನೀರಧಾರೆ ಎರೆದು ತನ್ನ ಕನ್ಯೆಯನ್ನು ಕೊಡುವ ವರ್ಣನೆ ಇಲ್ಲಿ ಬಹು ಸಾಮಾನ್ಯ. ಪ್ರಾಚೀನ ಕಾಲದ ಅಷ್ಟವಿವಾಹ ಪ್ರಕಾರಗಳಲ್ಲಿ ಒಂದಾದ ಬ್ರಾಹ್ಮ ವಿವಾಹವನ್ನೇ ಇವು ಪರೋಕ್ಷವಾಗಿ ಅನುಸರಿಸಿವೆ; ಆಚರಣೆಯಲ್ಲಿ ವ್ಯಕ್ತಪಡಿಸಿವೆ. ಧರ್ಮಶಾಸ್ತ್ರಗಳ ವಿವಾಹದ ವಿಧಿ-ನಿಷೇಧಗಳಂತೆ ಕಾವ್ಯಗಳು ಇಲ್ಲಿನ ವಿವಾಹ ವೃತ್ತಾಂತಗಳನ್ನು ವರ್ಣಿಸಿವೆ. ವೈದಿಕ ಕಾವ್ಯಗಳಾಗಿರಲಿ, ಜೈನ ಕಾವ್ಯಗಳಾಗಿರಲಿ ಅಥವಾ ವೀರಶೈವ ಕಾವ್ಯಗಳೇ ಆಗಿರಲಿ ಎಲ್ಲದರಲ್ಲೂ ಕೈನೀರಧಾರೆ, ಪಾಣಿಗ್ರಹಣ, ಅಗ್ನಿಪ್ರದಕ್ಷಿಣೆ ಹಾಗೂ ಸಪ್ತಪದಿಗಳೆಂಬ ಪ್ರಮುಖ ವಿವಾಹ ವಿಧಿಗಳು ಕಂಡುಬರುತ್ತವೆ. ಇವು ಶಾಸ್ತ್ರಕಾರರ ನಿರೂಪಣೆಗನುಸಾರವಾಗಿವೆ. ಕೆಲವು ಕಾವ್ಯಗಳು ವಿವಾಹ ಪೂರ್ವದ ವಿಧಿ, ಕಲಾಪಗಳನ್ನು ಹೆಚ್ಚು ಪ್ರಸ್ತಾಪಿಸಿದ್ದರೆ, ಮತ್ತೆ ಕೆಲವು

ಕಾವ್ಯಗಳು ವಿವಾಹೋತ್ತರ ವಿಧಿ ವಿಧಾನಗಳನ್ನು ಹೆಚ್ಚು ಪ್ರಸ್ತಾಪಿಸಿವೆ. ಆದರೆ ವಿವಾಹ ಸಂದರ್ಭದಲ್ಲಿ ಜರುಗುವ, ಮೇಲೆ ಹೆಸರಿಸಿರುವ ವಿಧಿಗಳನ್ನು ಮಾತ್ರ ಎಲ್ಲಾ ಕಾವ್ಯಗಳು ವರ್ಣಿಸಿವೆ. ಆ ವರ್ಣನೆಯಲ್ಲಿ ಕೆಲವು ವರದಿಗಳು ಮತ್ತೆ ಕೆಲವು ಅವುಗಳನ್ನು ಆಚರಿಸುತ್ತಿದ್ದ ತತ್ಕಾಲೀನ ರೀತಿ ನೀತಿಗಳ ಉಲ್ಲೇಖಗಳಾಗಿವೆ. ಪಂಪ ತನ್ನ ಕಾವ್ಯಗಳಲ್ಲಿ ವಿವಾಹ ಪದ್ಧತಿಯ ಮೂರು ಬಗೆಯ ವಿಧಿ ಕಲಾಪಗಳೆಲ್ಲವನ್ನು ಹಿತಮಿತವಾಗಿಯೆ ವರ್ಣಿಸಿರುವುದು ಇದಕ್ಕೊಂದು ನಿದರ್ಶನ. ಅವನು ಎಲ್ಲಾ ವಿಧಿಗಳೂ ಪ್ರಮುಖವೆನ್ನುವಂತೆ ಹೆಸರಿಸಿ ವಿವರಿಸಿದ್ದಾನೆ. ಅವನ ಕಾಲಕ್ಕಿದ್ದ ಪಾಣಿಗ್ರಹಣ ಪದ್ಧತಿಯನ್ನು ತನ್ನ ಎರಡೂ ಕಾವ್ಯಗಳಲ್ಲೂ ಎತ್ತಿ ಹಿಡಿದಿದ್ದಾನೆ. ಪೊನ್ನ ತನ್ನ 'ಶಾಂತಿಪುರಾಣ'ದಲ್ಲಿ ವಿವಾಹ ವರ್ಣನೆಯನ್ನು ಹ್ರಸ್ವ ಮಾಡಿದ್ದಾನೆ. ಆದರೆ ಪಾಣಿಗ್ರಹಣಾದಿ ಪ್ರಮುಖ ವಿಧಿಗಳೆಲ್ಲವನ್ನು ಒಕ್ಕಣಿಸಿದ್ದಾನೆ. ಆತನು ಹೆಚ್ಚಾಗಿ ಸ್ವಯಂವರ ಕ್ರಮಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾನೆ. ಸ್ವಯಂವರದ ಸಾಮಾನ್ಯ ಸ್ವರೂಪವನ್ನು ಅರಿಯಲು ಇಲ್ಲಿ ಆವಶ್ಯ ಮಾಹಿತಿ ಲಭ್ಯವಾಗುತ್ತದೆ. ಹರಿಹರನ ಕಾಲಕ್ಕೆ ವಿವಾಹ ಒಂದು ಪ್ರಧಾನ ವಸ್ತುವಾಗಿ ಕಾವ್ಯದಲ್ಲಿ ಮೈದಾಳುವಂತಾಗಿದೆ. ಆ ವಸ್ತು ಪೌರಾಣಿಕವೇ ಆಗಿದ್ದರೂ ಅದರ ನೆಲೆ ಲೌಕಿಕವಾಗಿದೆ. ಅಂದಿನ ಎಲ್ಲ ಸಂಪ್ರದಾಯ ಆಚರಣೆಗಳನ್ನೇ ಶಿವ ಗಿರಿಜೆಯರ ಕಲ್ಯಾಣಕ್ಕೆ ಆತ ಎರಕ ಹೊಯ್ದಿದ್ದಾನೆ. ಇದರಲ್ಲಿ ವಿವಾಹ ಪೂರ್ವದ ಹೆಣ್ಣನ್ನು ಕೇಳುವುದು, ಹಿರಿಯರ ಸಮ್ಮತಿಯಂತೆ ನಿಶ್ಚಯವಾದ ಮೇಲೆ ದಿಬ್ಬಣ ಬಂದು ವಿವಾಹವಾಗುವುದಿದೆ. ಇಲ್ಲಿ ವಿವಾಹಪೂರ್ವ ಮತ್ತು ವಿವಾಹ ಸಂದರ್ಭದಲ್ಲಿನ ವಿಧಿ ಕಲಾಪಗಳಿಗೆ ಹೆಚ್ಚು ಗಮನ ಕೊಡಲಾಗಿದೆ. ಚೌಂಡರಸ ತನ್ನ 'ನಳಚಂಪು'ವಿನಲ್ಲಿ ಭೂರಿಭೋಜನಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದಾನೆ. ವರನಾದ ನಳಮಹಾರಾಜ ಪಾಕಶಾಸ್ತ್ರ ಪ್ರತೀತೀ ಇದಕ್ಕೆ ಕಾರಣವಿರಬಹುದು. ವಿವಾಹ ಮಹೋತ್ಸವದಲ್ಲಿ ಭೋಜನೋತ್ಸವ ಕೂಡ ಜನಪ್ರಿಯ ಸಂಪ್ರದಾಯವಾಗಿ ಆ ಕಾಲದ ಹೊತ್ತಿಗೆ ಬೆಳೆದಿತ್ತು ಎನ್ನುವುದು ಇದಕ್ಕೆ ಕಾರಣವಿರಬಹುದು. ದೊಡ್ಡಯ್ಯನ 'ಚಂದ್ರಪ್ರಭ ಚರಿತೆ'ಯ ಕಾಲಕ್ಕೆ ವಿವಾಹ ವರ್ಣನೆ ಉಳಿದ ವರ್ಣನೆಗಳಿಗಿಂತ ಕಾವ್ಯಗಳಲ್ಲಿ ಒಂದು ಕೈ ಮೇಲು ಎನ್ನುವಂತೆ ವಿಸ್ತಾರಗೊಂಡಿದೆ.

ಕೈನೀರಧಾರೆಯ ಮೂಲಕ ಕನ್ಯೆಯನ್ನು ವರನಿಗೆ ವಿವಾಹ ಮಾಡಿಕೊಡುವುದನ್ನು ಕಾವ್ಯಗಳು ವರ್ಣಿಸಿರುವುದೇ ಹೆಚ್ಚು. ಇಂದು ಪ್ರಾಮುಖ್ಯ ಪಡೆದಿರುವ ಮಾಂಗಲ್ಯಧಾರಣೆ ಪ್ರಾಚೀನ ಕಾವ್ಯಗಳಲ್ಲಿ ಎಡೆಪಡೆದಿಲ್ಲ. ವಧುವಿಗೆ ವರನು ತಾಳಿ ಕಟ್ಟುವ ಪ್ರಸಂಗವನ್ನು ಕಾವ್ಯಗಳು ಪ್ರಮುಖ ಸಂದರ್ಭವಾಗಿ ವರ್ಣಿಸುವುದಿಲ್ಲ. "ಪಂಪಭಾರತದಲ್ಲಿ ಒಮ್ಮೆ ಇದು ಆಭರಣ (೪-೮೬)ದಂತೆ, ಇನ್ನೊಮ್ಮೆ ಮಾಂಗಲ್ಯ ಸೂಚಕ (೬-೩೨)ದಂತೆ ಬಳಕೆಯಾಗಿದೆ. ಮೂಲತಃ ಇದು ಒಂದು ಆಭರಣವಾಗಿದ್ದು ಪಂಪನ ಕಾಲಕ್ಕೆ ಮಾಂಗಲ್ಯ ಸೂಚಕವೆನಿಸತೊಡಗಿರಬೇಕು. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಮಾಂಗಲ್ಯದ ಉಲ್ಲೇಖವಿದೆ. 'ಮಾಂಗಲ್ಯ' ಪತಿಯ ಹೊರತು ಪರಪುರುಷನ ದೃಷ್ಟಿಗೆ ಬಿದ್ದರೆ ಅವಳ ಪಾತಿವ್ರತ್ಯದ ಕೇಡು ಎಂಬ ಭಾವನೆ ಅಲ್ಲಿರುವುದರಿಂದ ಆಗ ಅದನ್ನು ಗೌಪ್ಯವಾಗಿ ಧರಿಸುತ್ತಿರಬಹುದು. ತಾಳಿ ಕಟ್ಟುವ ಸಂಪ್ರದಾಯವು ದಾಕ್ಷಿಣಾತ್ಯರಿಗೆ ಅಂದರೆ ದ್ರಾವಿಡ ಭಾಷೆಗಳನ್ನಾಡುವ ಕರ್ನಾಟಕ, ತಮಿಳುನಾಡು ಹಾಗೂ ಆಂಧ್ರಪ್ರದೇಶದ ಜನರಿಗೆ ಸೀಮಿತವಾಗಿದೆ ಎಂಬ ಕುಪ್ಪುಸ್ವಾಮಿಯವರ ಮಾತಿಗೆ ಶಾಸನಗಳು ಉಲ್ಲೇಖವನ್ನೊದಗಿಸುವುದಿಲ್ಲ. ಬಹುಶಃ ಮಂಗಳಸೂತ್ರದ ಪಾವಿತ್ರ್ಯಕಾರಣವಾಗಿ ಶಾಸನಗಳು ಅದನ್ನು ವರ್ಣಿಸದೇ ಹೋಗಿರಬಹುದು. ಆದರೆ ಪರಕೀಯರ ದಾಳಿಯ ಸಂದರ್ಭದಲ್ಲಿ ಗೃಹಿಣಿಯರ ಸುರಕ್ಷತೆಯ ದೃಷ್ಟಿಯಿಂದ ಈ ಮಾಂಗಲ್ಯವನ್ನು ಪ್ರಕಟವಾಗಿ ಧರಿಸುವುದು, ಆಮೇಲೆ ಮದುವೆ ಕಾರ್ಯದಲ್ಲಿ ಉಪಯೋಗಿಸುವುದು

ಪ್ರಾರಂಭವಾಗಿರಬೇಕು" ಎಂಬುದಾಗಿ 'ಶಾಸನಗಳಲ್ಲಿ ಕರ್ನಾಟಕ ಸ್ತ್ರೀಸಮಾಜ'ವೆಂಬ ತಮ್ಮ ಮಹಾಪ್ರಬಂಧದಲ್ಲಿ ಚೆನ್ನಕ್ಕ ಎಲಿಗಾರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. (ಪು. ೧೯).

ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಮಾಂಗಲ್ಯದ ಉಲ್ಲೇಖವಿಲ್ಲ. ಗೃಹ್ಯಸೂತ್ರಗಳಲ್ಲಿ ಕೂಡ ಇದನ್ನು ಉಲ್ಲೇಖಿಸಿಲ್ಲ. ವಾಸ್ತವವಾಗಿ ತಮಿಳು ಸಂಗಂ ಸಾಹಿತ್ಯದಲ್ಲಿ ತಾಳಿ ಒಂದು ಒಡವೆಯಾಗಿ ಕಾಣಿಸಿಕೊಂಡಿದೆ. ಮದುವೆಯಲ್ಲಿ ತಾಳಿ ಕಟ್ಟುವ ಪದ್ಧತಿ ಸಾರ್ವತ್ರಿಕವಾದುದೇನೂ ಅಲ್ಲ. ದಕ್ಷಿಣ ಕನ್ನಡದ ಕುಡುಬಿಯರಲ್ಲಿ ಹುಡುಗಿ ಮೈನೆರೆವ ಮುನ್ನ ವಿವಾಹ ಯೋಗ್ಯ ಕಾಲ ಎಂದು ಪರಿಗಣಿಸಿ ಅವಳಿಗೆ ಅವಳ ತಾಯಿ ತಾಳಿ ಕಟ್ಟುತ್ತಾಳೆ. ಮದುವೆ ದಿನ ಬೆಳಗ್ಗೆ ವರನ ಕಡೆಯ ಮುತ್ತೈದೆಯರು 'ಕಟಕರಿಮಣಿ'ಯನ್ನು ತಂದು ಹುಡುಗಿಯ ಕೊರಳಿಗೆ ಕಟ್ಟುತ್ತಾರೆ. ಕಾಡುಗೊಲ್ಲರಲ್ಲಿ ಪೂಜಾರಿಯು ಮಾಂಗಲ್ಯವನ್ನು ವಧುವಿನ ಕೊರಳಿಗೂ, ಕಣಗಳ ಹೂವಿನ ಬಾಸಿಂಗವನ್ನು ವರನ ತಲೆಗೂ ಕಟ್ಟುತ್ತಾನೆ. ತಾಳಿಯ ಜತೆ ಇರುವ ಕರಿಮಣಿಗಳು ಬಹುತೇಕ ಎಲ್ಲರಲ್ಲೂ ಮಂಗಳ ಸೂಚಕವಾಗಿವೆ. "ತಾಳಿಗೂ ಮದುವೆಗೂ ಮೂಲತಃ ಸಂಬಂಧವಿರಲಿಲ್ಲ. ಅದು ಕೆಟ್ಟ ಶಕ್ತಿಗಳನ್ನು ದೂರವಿರಿಸಲು ಹೆಣ್ಣು ಮಕ್ಕಳು ಧರಿಸುತ್ತಿದ್ದ ತಾಯತ (amulet) ಆಗಿದ್ದು, ಅದು ಒಡವೆಯಂತೆಯೆ ಬಳಕೆಯಾಗುತ್ತಿತ್ತು" ಎಂಬುದು ಎಂ. ಚಿದಾನಂದಮೂರ್ತಿ ಅವರ ಅಭಿಪ್ರಾಯ. (ಗಾಯತ್ರೀ ನಾವಡ ಎ.ವಿ. ನಾವಡ. ಸಪ್ತರಂಗ ಪು ೨೨೨).

ವಾಸ್ತವವಾಗಿ ಮಂಗಲಸೂತ್ರ ಬೇರೆ, ತಾಳಿ ಬೇರೆ. ಮಂಗಲಸೂತ್ರ ಅದರ ಹೆಸರೇ ಸೂಚಿಸುವಂತೆ ಅದು ಮಂಗಲವನ್ನು ಸೂಚಿಸುವ ದಾರ. ವಿವಾಹದಲ್ಲಿ ಗಂಡಿನಿಂದ ಹೆಣ್ಣಿಗೆ ಈ ಮಂಗಲಸೂತ್ರವನ್ನು ಕಟ್ಟುವ ಸಂಪ್ರದಾಯ ಯಾವಾಗ ಆರಂಭವಾಯಿತೆನ್ನುವುದು ತಿಳಿಯದು. ತಾಳಿ ಬಂಧನಕ್ಕೆ ವೇದೋಕ್ತ ಮಂತ್ರ ಪುರಾವೆಯಿಲ್ಲ. ಅದು ಸ್ಮೃತಿಸಮ್ಮತವಾದ ವಿಧಿ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ 'ಮಂಗಲಸೂತ್ರದೊಳಗಿನ ಐದೆತಾಳಿ' ಪ್ರಯೋಗ ಬರುವುದರಿಂದ ಮಂಗಲಸೂತ್ರ ಹಾಗೂ ತಾಳಿ ಬೇರೆ ಬೇರೆ ಎಂಬುದನ್ನು ಹೇಳುತ್ತವೆ ಎಂದು ಗಾಯತ್ರೀ ನಾವಡ ಎ.ವಿ. ನಾವಡ ಅವರು ಅಭಿಪ್ರಾಯಪಡುತ್ತಾರೆ (ಪೂರ್ವೋಕ್ತ, ಸಪ್ತರಂಗ, ಪು. ೨೨೩). ಇಂದು ಮಾಂಗಲ್ಯಧಾರಣೆ ಇಲ್ಲದಿದ್ದರೆ ವಿವಾಹಕ್ಕೆ ಅರ್ಥವಿಲ್ಲವೆನ್ನುವ ಅಚಲವಾದ ಪವಿತ್ರ ನಂಬಿಕೆ ಇದೆ.

"ವಿವಾಹದಲ್ಲಿ ವರನಿಗೆ ಉಡುಗೊರೆ, ದಾನ ಧರ್ಮ, ಬಳುವಳಿಗಳನ್ನು ಕೊಡುತ್ತಿದ್ದ ವಧುವಿನ ತಂದೆ ತಾಯಿಯರ ಕರ್ತವ್ಯವನ್ನು ಶಾಸನಗಳೂ ಉಲ್ಲೇಖಿಸಿವೆ. ಪ್ರಾಚೀನ ಕರ್ನಾಟಕದಲ್ಲಿ ಮದುವೆಗೂ ಕರವನ್ನು ವಿಧಿಸಲಾಗುತ್ತಿದ್ದ ಸಂಗತಿಯನ್ನು ಶಾಸನಗಳು ಹೇಳುತ್ತವೆ. 'ಮದುವೆದೆರೆ' 'ಹಂದರವಣ' ಎಂಬ ಎರಡು ಪರಿಭಾಷೆಗಳು ತೆರಿಗೆಯನ್ನು ಸೂಚಿಸುವ ಒಂದೇ ಅರ್ಥದ ಎರಡು ಪದಗಳೆಂದು ಹೇಳಬಹುದು. 'ಸೇಸೆದೆರೆ', 'ಹಸೆಯ ಹಣ' ಎಂಬುದು ಕೂಡ ತೆರಿಗೆಯನ್ನೇ ಸೂಚಿಸುತ್ತಿರಬೇಕು. ಊರ ಹಿರಿಯರು ಈ ತೆರಿಗೆಯ ಪ್ರಮಾಣವನ್ನು ನಿಶ್ಚಯಿಸುತ್ತಿದ್ದು ಅದು ರಾಜನ ಬೊಕ್ಕಸಕ್ಕೆ ಹೋಗುವುದಕ್ಕಿಂತ ದೇವಸ್ಥಾನದ ಜೀರ್ಣೋದ್ಧಾರ, ಕೆರೆ ನಿರ್ಮಾಣಗಳಂತಹ ಕಾರ್ಯಕ್ಕೆ ವಿನಿಯೋಗವಾಗುತ್ತಿದ್ದುದಿರಬಹುದು. ನನ್ನಿವೆಡಂಗ ಕಟ್ಟಿಸಿದ ಕೆರೆಗೆ ವಿವಾಹ ತೆರಿಗೆಯನ್ನು ವಿನಿಯೋಗಿಸಿದ್ದರ ವಿಷಯವಿದೆ. ಇಲ್ಲಿ ವಿಪ್ರರು ಎರಡು, ಶೂದ್ರರು ಒಂದು 'ದ್ರಮ್ಮ'ನ್ನೂ ಮದುವೆದೆರೆಯಾಗಿ ಕೊಡಬೇಕೆಂದು ಹೇಳಿರುವ ಹಣದ ಪ್ರಮಾಣವನ್ನು ಗಮನಿಸಬೇಕು. ಮೂಲಸ್ಥಾನ ರಾಮೇಶ್ವರದೇವರ ಗಂಧಧೂಪ ನಿವೇದ್ಯಕ್ಕೆ ಎಪ್ಪತ್ತೊಕ್ಕಲು 'ಮದುವೆಯ ಪಂದರವಣ'ವನ್ನು

ಬಿಟ್ಟುಕೊಟ್ಟಿರುವರು. ಮಹಾಮಂಡಳೇಶ್ವರ ಮನ್ನೆಯ ಘಟ್ಟಿದೇವರಸ 'ಮದುವೆಯಾದಲ್ಲಿ ಹಂದರಣ'ವನ್ನು ಸ್ವಯಂಭೂ ಕವಿದೇವಸ್ವಾಮಿದೇವರ ನಂದಾದೀವಿಗೆಗೆ ಬಿಟ್ಟುಕೊಡಬೇಕೆಂದು ಆಜ್ಞೆ ಹೊರಡಿಸಿರುವನು. ಈ ತೆರಿಗೆಯನ್ನು ವಧು-ವರರು ಉಭಯ ಪಕ್ಷದವರಿಂದಲೂ ಪಡೆಯುತ್ತಿದ್ದುದಕ್ಕೆ ಆಧಾರವಿದೆ. ಕಣೆಕಟ್ಟೆಯ ಸಮಸ್ತ ಜಗತಿಗಳು ಸೋಮೇಯನಾಯಕ ಸಮಸ್ತ ಪ್ರಜೆ ಗೌಂಡರುಗಳು ಮದುವೆಯ ಮಾಡಿದಲ್ಲಿ ಮದುವಳಿಗೆಯವರಲ್ಲಿ ಒಂದು ಹಣ, ಮದುವಣಿಗನಲ್ಲಿ ಒಂದು ಹಣವನ್ನು ಜಗತೇಶ್ವರ ದೇವರ ನಂದಾದೀವಿಗೆಗೆ ಬಿಟ್ಟುಕೊಟ್ಟಿರುವರು. ಅಗ್ರಹಾರ ಬಾಗೇವಾಡಿಯಲ್ಲಿ ಮಲ್ಲಿಕಾರ್ಜುನದೇವರ ಧೂಪದಿಪಕ್ಕೆ 'ಮಾಲಗಾರಗೊತ್ತಳಿವೊಕ್ಕಲು ಮದುವೆ ಮದುವಣಿಗನಲ್ಲಿ ಒಂದು ಹಾಗ ಮದುವಳಿಗೆಯಲ್ಲಿ ಒಂದು ಹಾಗ, ಎರಡು ಕೊಳಗ ಜೋಳ'ವನ್ನು ಬಿಟ್ಟುಕೊಟ್ಟಿರುವರು-ಮಗುವೊಂದು ಹುಟ್ಟಿದಾಗಲೂ ಒಂದು ಹಣ ಕೊಟ್ಟ ಅಪರೂಪದ ಉಲ್ಲೇಖ ಕಂದಗಲ್ಲಿನ ಶಾಸನದಲ್ಲಿದೆ. ಕಾವಣದ ವಿನಾಯಕನಿಗೆ ಹಸೆಯ ಹಣ ಮೊದಲ್ಗೊಂಡು 'ಏನು ಹುಟ್ಟಿದಡಂ ಕೊಟ್ಟೆ'ವೆಂದು ಮಣೆಗುಂಡಗೆಯ ಐನೂರ ನಾಲ್ವರು ಚಂದ್ರಭೂಷಣರ ಪಾದ ತೊಳೆದು ದತ್ತಿ ಬಿಟ್ಟಿರುವರು. ಇಲ್ಲಿ 'ಹಂದರವಣ'ಕ್ಕೆ ಪ್ರತಿಯಾಗಿ 'ಹಸೆಯಹಣ' ಎಂಬ ಪ್ರಯೋಗವಿದ್ದು ಜೊತೆಗೆ, ಬಹುಶಃ ಮಕ್ಕಳು ಜನಿಸಿದ ಸಂತೋಷಾರ್ಥವಾಗಿ ದೇವರಿಗೆ ನೀಡಬೇಕಾದ ದಾನಗಳ ಉಲ್ಲೇಖವಿದೆ. ಅಗ್ರಹಾರ ಕೋಲಾರದ ಮಲ್ಲಿಕಾರ್ಜುನದೇವ ಅಂಗರಂಗ ಭೋಗಕ್ಕೆ 'ದಾಸೇಗೌಡ ಕೊತ್ತಳಗಳು ಕೊಟ್ಟ ಆಯ, ಕೊಡಗೂಸಿನ ಮದುವೆಗೆ ಹಣ ಹಾಗ. ಮದುವತ್ತಿಗೆ ಅಡಂಬೇಳೆವೀಳೆಯ ಅಡಿಕೆ....ಹೀಗೆ ದತ್ತಿ ಬಿಟ್ಟುಕೊಟ್ಟಿರುವರು. ಕೊಟಪಿ ಎಂಬ ಗ್ರಾಮದಲ್ಲಿಯ ನಾನಾ ಜಾತಿಯ ಮದುವೆ ಸುಂಕವನ್ನು ಧರ್ಮಕ್ಕೆ ಬಿಟ್ಟಿದ್ದು ಅದನ್ನು ಯಾರಾದರೂ ಮೀರಿದರೆ ವಾರಣಾಸಿಯಲ್ಲಿ ಸಾವಿರ ಕಪಿಲೆಯನ್ನು ಕೊಂದ ಪಾಪಕ್ಕೆ ಗುರಿಯಾಗುವರು ಎಂದು ಹೇಳಲಾಗಿದೆ. ಇದನ್ನು ನೋಡಿದಾಗ ಬ್ರಾಹ್ಮಣ ಮೊದಲ್ಗೊಂಡು ಶೂದ್ರರವರೆಗಿನ ಪ್ರಜೆಗಳಿಂದ ಮದುವೆ ತೆರಿಗೆ ಅಕರಣೆ ಮಾಡಲಾಗುತ್ತಿದ್ದಿತೆಂದು ವೇದ್ಯವಾಗುತ್ತದೆ" ಎಂದು ಚೆನ್ನಕ್ಕ ಎಲಿಗಾರ ಅಭಿಪ್ರಾಯಪಡುತ್ತಾರೆ (ಪೂರ್ವೋಕ್ತ. ಪು. ೨೨-೨೩).

ಪ್ರಾಚೀನ ಕನ್ನಡ ಕಾವ್ಯಗಳು ವಿವಾಹ ಪದ್ಧತಿಗೆ ಪೂರಕವಾಗಿ ಕೆಲವು ವಿಶಿಷ್ಟ ವಿವಾಹ ಕ್ರಮಗಳನ್ನು ಉಲ್ಲೇಖಿಸಿವೆ. ಪ್ರಾಚೀನ ಕಾಲದ ವೀರಯುಗವನ್ನು ನಮ್ಮ ಆರಂಭ ಕಾಲದ ಕಾವ್ಯಗಳು ಪ್ರತಿನಿಧಿಸುವುದರಿಂದ ಸಹಜವಾಗಿಯೇ ಕೆಲವು ಕ್ಷತ್ರಿಯ ವಿವಾಹ ಪದ್ಧತಿಗಳನ್ನು ಉಲ್ಲೇಖಿಸಿವೆ. ಸ್ವಯಂವರ ಪದ್ಧತಿ, ವಿವಾಹಪೂರ್ವದಲ್ಲಿ ಜರುಗುತ್ತಿದ್ದ ಒಂದು ಬಗೆಯ ವರನ ಆಯ್ಕೆಯ ಪದ್ಧತಿಯೇ ಆಗಿದೆ. ರಾಜರು ಅವರ ಕುಮಾರರ ನಡುವೆ ಶತ್ರುತ್ವ ಹುಟ್ಟದಂತೆ ಇರಲು ಕನ್ಯೆಗೆ ಸ್ವಯಂವರವನ್ನು ಏರ್ಪಡಿಸುತ್ತಿದ್ದರು (ಶಾಂತೀಶ್ವ ೩-೪೭). ಸ್ವಯಂವರ ಶಾಲೆಯನ್ನು ಊರಿನ ಹೊರವಲಯದಲ್ಲಿ ನಿರ್ಮಿಸುತ್ತಿದ್ದರು. ತೆಂಕಲು ಬಡಗಲು ಉದ್ದವಾಗಿಯೂ ಮೂಡಣ ಪಡುವಣ ಅಗಲವಾಗಿಯೂ ಅದರ ಇಕ್ಕೆಲದಲ್ಲಿ ಏಳು ನೆಲಮಾಡಗಳು ಇರುವಂತೆಯೂ ಸ್ವಯಂವರ ಶಾಲೆಯನ್ನು ನಿರ್ಮಿಸುತ್ತಿದ್ದರು (ಬಾಥಪು ೧೧-೩೦ವ). ಅದರ ಇಕ್ಕೆಲದಲ್ಲಿ ಬೇರೆ ಬೇರೆ ದೇಶದ ರಾಜಕುಮಾರರು ಕುಳಿತಿರುತ್ತಿದ್ದರು. ಅವರ ಮಧ್ಯೆದಲ್ಲಿ ಸ್ವಯಂವರದ ಕನ್ಯೆ, ವೃದ್ಧ ಕಂಚುಕಿ ಅಥವಾ ಮಂತ್ರಿ ಅಥವಾ ಆಪ್ತ ಸಖಿಯರೊಡನೆ ಸ್ವಯಂವರ ಮಂಟಪ ಶಾಲೆಯಲ್ಲಿ ಹಾದುಹೋಗುತ್ತಿದ್ದಳು. ಆಗ ಅವಳಿಗೆ ಪ್ರತಿಯೊಬ್ಬ ರಾಜಕುಮಾರನನ್ನೂ ಗುಣಗಾನದಿಂದ ಪರಿಚಯಿಸಲಾಗುತ್ತಿತ್ತು. ಅವಳು ಇಷ್ಟವಿಲ್ಲದಿದ್ದರೆ ಮುಂದೆ ಮುಂದೆ ಹೋಗುತ್ತಿದ್ದಳು. ಇಷ್ಟದ ವರನ ಮುಂದೆ ನಿಂತು ಸ್ವಯಂವರ ಮಾಲೆ ಅಥವಾ ಸುಗಂಧ

ಪುಷ್ಪಹಾರವನ್ನು ಆತನ ಕೊರಳಿಗೆ ಹಾಕುತ್ತಿದ್ದಳು. ಆಗ ವರನ ಆಯ್ಕೆ ಆದಂತೆ. ಅಲ್ಲಿಗೆ ಮೊದಲ ಘಟ್ಟ ಮುಗಿಯುತ್ತಿತ್ತು. ತದನಂತರ ವಧು ಮತ್ತು ವರರನ್ನು ಮುಂದಿಟ್ಟುಕೊಂಡು ಕನ್ಯೆಯ ಬಂಧುಗಳು ಪರಿವಾರ ಸಮೇತ ಪುರವನ್ನು ಸೇರುತ್ತಿದ್ದರು. ಇವರ ನಡುವೆ ಅಸಮಾಧಾನಗೊಂಡ ರಾಜಪುತ್ರರು ಅವರ ಮೇಲೆ ಯುದ್ಧ ಮಾಡುತ್ತಿದ್ದರು. ಆ ಯುದ್ಧದಲ್ಲಿ ಅವರನ್ನು ವರನೂ ಸೇರಿದಂತೆ ಅವಳ ಬಂಧುಗಳು ಹಿಮ್ಮೆಟ್ಟಿಸಬೇಕಿತ್ತು. ಇದೆಲ್ಲ ಆದಮೇಲೆ ವಿಧ್ಯುಕ್ತವಾಗಿ ಅವರಿಗೆ ವಿವಾಹವಾಗಿತ್ತು. ಇದು ಪ್ರಾಚೀನ ಕಾವ್ಯಗಳು ವರ್ಣಿಸಿರುವ ಸ್ವಯಂವರ ಪದ್ಧತಿಯ ಸಾಮಾನ್ಯ ಸ್ವರೂಪ.

ಕೆಲವೊಮ್ಮೆ ಸರಳವಾಗಿಯೂ, ಇನ್ನು ಕೆಲವೊಮ್ಮೆ ಸಾಹಸ ಪರೀಕ್ಷಾ ಕ್ರಮದಲ್ಲಿಯೂ ಕನ್ಯೆ ತನ್ನ ವರನನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದುದನ್ನು ಕಾವ್ಯಗಳು ಉಲ್ಲೇಖಿಸಿವೆ. ಕನ್ಯೆ ತನ್ನ ಇಚ್ಛೆಗೆ ತಕ್ಕಂತೆ ಮೆಚ್ಚಿದ ವರನಿಗೆ ವನಮಾಲೆಯನ್ನು ಕೊರಳಿಗೆ ಹಾಕುವುದು ತುಂಬ ಸರಳವಾದ ಕ್ರಮ. ಇದಕ್ಕೆ ನಿದರ್ಶನವಾಗಿ ವಡ್ಡಾರಾಧನೆಯಲ್ಲಿನ ಸುಕೌಶಳ ಸ್ವಾಮಿಯ ಕಥೆಯಲ್ಲಿರುವ ಮನೋಹರಿ ಮತ್ತು ಕುಬೇರಕಾಂತರ ಸ್ವಯಂವರ ಪದ್ಧತಿಯನ್ನು ಗಮನಿಸಬಹುದು. ದಿವ್ಯಧನುವನ್ನು ಎದೆಯೇರಿಸಿ ಮೇಲೆ ತಿರುಗುವ ಯಂತ್ರಮತ್ಸ್ಯಕ್ಕೆ ಗುರಿಯಿಟ್ಟು ಪ್ರಯೋಗ ಮಾಡಿ ಗೆದ್ದ ವರನಿಗೆ, ಕನ್ಯೆ ಮಾಲೆಯನ್ನು ಹಾಕುವುದು ಸಂಕೀರ್ಣ ಪದ್ಧತಿ. ಇದು ವರನ ಸಾಹಸ ಪರೀಕ್ಷಾ ಪ್ರದರ್ಶನ ವಿಧಾನ. ಪಂಪಭಾರತದಲ್ಲಿನ ದ್ರೌಪದಿಯ ಸ್ವಯಂವರ ಇದಕ್ಕೆ ನಿದರ್ಶನ (೩-೫೪ ೬೬). ವಜ್ರಾವರ್ತವೆಂಬ ಬಿಲ್ಲನ್ನು ಎದೆಯೇರಿಸಿ ಅದನ್ನು ಜೇವೊಡೆದ ವರನಿಗೆ ಮಾಲೆಯಿಕ್ಕುವುದನ್ನು ಕೂಡ ಕಾವ್ಯಗಳು ಉಲ್ಲೇಖಿಸಿವೆ (ಪಂಪರಾ ೫). ತನ್ನ ಪಾತಿವ್ರತ್ಯವನ್ನೆ ಸವಾಲಿಗೆ ಒಡ್ಡಿ ವರನನ್ನು ಆರಿಸಿಕೊಳ್ಳುತ್ತಿದ್ದ ಪ್ರಸಂಗಗಳನ್ನು ಕೂಡ ಕಾವ್ಯಗಳು ಉಲ್ಲೇಖಿಸಿವೆ. ಚೌಂಡರಸನ 'ನಳಚಂಪು'ವಿನಲ್ಲಿ ಕಪಟ ವೇಷಧಾರಿಗಳಾಗಿ ಬಂದಿದ್ದ ಇಂದ್ರಾದಿ 'ಪಂಚನಳ'ರ ಕಪಟ ರೂಪ ಇಂಗಿದ ಮೇಲೆ ವಧು ದಮಯಂತಿ ತನ್ನ ನಿಜವಾದ ನಳನನ್ನು ವರಿಸಿದುದನ್ನು ಹೇಳಿದೆ (ಪದ್ಯ ೩೯೯). ಯಾವುದೇ ಸ್ವಯಂವರಕ್ಕೆ ಐವತ್ತಾರು ದೇಶಗಳ ರಾಜಕುಮಾರರು ಆಗಮಿಸುತ್ತಿದ್ದುದು ಸಾಮಾನ್ಯವಾಗಿತ್ತು. ಈ ಸ್ವಯಂವರ ನಡುಹಗಲಿನ ತನಕ ಜರುಗುತ್ತಿತ್ತು (ಶಾಂತಿಪು ೬-೩ವ). ತಾವು ಇಚ್ಛಿಸಿದ ವರನನ್ನು ಕಡ್ಡಾಯವಾಗಿ ಸ್ವಯಂವರಕ್ಕೆ ಬರಮಾಡಿಕೊಂಡು ಕನ್ಯೆ ವರಿಸುವಂತೆ ಮಾಡಿಕೊಳ್ಳುತ್ತಿದ್ದುದೂ ಉಂಟು (ಶಾಂತಿಪು ೬-೨೨-೨೪ವ). ಈ ಪದ್ಧತಿಯಲ್ಲಿ ರಾಜಕನ್ಯೆಗೆ ವರನ ಆಯ್ಕೆಯಲ್ಲಿ ಸ್ವಾತಂತ್ರ್ಯವಿತ್ತು. ಆದರೆ ಇಂಥ ಸ್ವಯಂವರಗಳ ನಂತರ ಶಾಸ್ತ್ರೋಕ್ತ ರೀತಿಯ ವಿವಾಹ ಆಗುತ್ತಿತ್ತು; ಆಗಲೇ ಈ ಪದ್ಧತಿಗೆ ಬೆಲೆ ಬರುತ್ತಿತ್ತು.

ಕನ್ನಡ ಕಾವ್ಯಗಳು ಪ್ರಾಚೀನ ವಿವಾಹ ಪದ್ಧತಿಯಾದ ಗಾಂಧರ್ವ ಪ್ರಕಾರವನ್ನು ಸಹ ಉಲ್ಲೇಖಿಸಿವೆ. ಸ್ವಯಂವರ ಮತ್ತು ಗಾಂಧರ್ವ ಪದ್ಧತಿಗಳೆರಡರಲ್ಲೂ ಕನ್ಯೆಗೆ ವರನನ್ನು ವರಿಸಲು ಸ್ವಾತಂತ್ರ್ಯ ಇರುವುದಾದರೂ ಈ ಎರಡೂ ಕ್ರಮಗಳು ಬೇರೆ ಬೇರೆಯೇ. ಪ್ರಾಚೀನ ಅಷ್ಟವಿಧ ವಿವಾಹ ಪ್ರಕಾರಗಳಲ್ಲಿ ಸ್ವಯಂವರ ಸೇರುವುದಿಲ್ಲ. ಗಾಂಧರ್ವ ಪದ್ಧತಿಯಲ್ಲಿ ವಧು-ವರರಿಬ್ಬರೂ ಸ್ವತಂತ್ರರಾಗಿ ವರ್ತಿಸುತ್ತಾರೆ. ಇದರ ಮೂಲ ಸೆಲೆ ಪ್ರೇಮ. ಪಂಪಭಾರತದ ಭೀಮ-ಹಿಡಿಂಬಿ, ಅರ್ಜುನ-ಸುಭದ್ರೆಯರ ವಿವಾಹ (೫-೮೭), ಜಗವಿಯಲ್ಲಿ ಬರುವ ಉಷೆ ಅನಿರುದ್ಧರ ವಿವಾಹ (೧೭-೧೨೧ವ), ರುಕ್ಮಾಂಕದನು ಬ್ರಹ್ಮನ ಪುತ್ರಿಯಾದ ಮೋಹಿನಿಯನ್ನು ಶಿವಮಂದಿರದಲ್ಲಿ ಪ್ರೇಮಿಸಿ ಗಾಂಧರ್ವ ವಿವಾಹವಾದುದು (ರುಕ್ಮಾಚ ೨-೩೫) ಇದಕ್ಕೆ ನಿದರ್ಶನಗಳು. ಲಕ್ಷ್ಮಯ್ಯನ 'ಮದನಮೋಹಿನಿಯ ಕಥೆ' ಕೃತಿಯಲ್ಲಿ ಬರುವ ಮದನಮೋಹಿನಿ ಮತ್ತು ಜಯಸೇನರ ಗಾಂಧರ್ವ

ವಿವಾಹ ಕೂಡ (೫-೪೪-೬೬) ಉಲ್ಲೇಖಾರ್ಹವಾದುದೇ. ಇಲ್ಲಿ ಇವರಿಬ್ಬರ ಗಾಂಧರ್ವ ವಿವಾಹಕ್ಕೆ ನೆರವಾಗುವುದು ಒಂದು ಸಾಕು ಗಿಳಿ. ಇದೊಂದು ವಿಶೇಷ. ಮಂದಾಕಿನಿಪುರದಲ್ಲಿ ರಕ್ಕಸನ ದೆಸೆಯಿಂದ ಸೆರೆಯಲ್ಲಿದ್ದ ಮದನಮೋಹಿನಿಯನ್ನು ಜಯಸೇನ ಬಿಡಿಸುತ್ತಾನೆ. ಅದಕ್ಕೆ ಅವಳು ತನ್ನನ್ನು ಸಲಹಬೇಕೆಂದು ಬೇಡುತ್ತಾಳೆ. ಜಯಸೇನನು ತಂದೆ ತಾಯಿಯರು ಒಪ್ಪಿ ತಂದ ಹೆಣ್ಣಿನ್ನಲ್ಲದೆ ಇನ ಕುಲದ ರಾಜರು, ಬೇರೆಯವರನ್ನು ಅಂಗೀಕರಿಸುವುದಿಲ್ಲ ಎನ್ನುತ್ತಾನೆ. ಅವರ ಮಾತನ್ನು ಮೀರಿ ಮಕ್ಕಳನ್ನೂ, ಹೆಣ್ಣನ್ನು ತರಬಾರದೆಂದು ಹೇಳುತ್ತಾನೆ. "ಇದು ವಿಪ್ರರಿಗೆ ಸಲ್ಲುವ ಮಾತು. ರಾಜಕುಮಾರರಿಗೆ ಗಾಂಧರ್ವ ವಿವಾಹ ಒಪ್ಪುವುದು. ಇದಕ್ಕೆ ಸ್ಮೃತಿಗಳ ಸಮ್ಮತವಿದೆ. ಆದ್ದರಿಂದ ಮೋಹಿನಿಯನ್ನು ವರಿಸು ನಡೆ" ಎಂದು ಅವನಿಗೆ ಗಿಳಿ ಬೋಧಿಸಿದೆ (೫-೪೩-೪೪). ಇಲ್ಲಿ ಗಿಳಿಯ ಮೂಲಕ ಕವಿ ಕ್ಷಾತ್ರ ಪದ್ಧತಿಗೆ ಅನುಗುಣವಾದ ಗಾಂಧರ್ವ ವಿವಾಹವನ್ನು ಹೇಳಿಸಿರುವುದು ಇದೆ. ಮುಂದೆ ಇದೇ ಗಿಳಿ ಆಕೆಯ ರೂಪ ಲಾವಣ್ಯಗಳನ್ನು ವರ್ಣಿಸಿ ಸುಮುಹೂರ್ತದಲ್ಲಿ ಸ್ನಾನಾದಿ ಮಂಗಲಾಲಂಕೃತರಾದ ಈ ವಧೂವರರಿಗೆ ತಾನೇ ಮದನಮೋಹಿನಿಯನ್ನು ಜಯಸೇನನಿಗೆ ಧಾರೆಯೆರೆಯುತ್ತದೆ (೫-೪೮-೫೬). ಇದು ತೀರ ವಿಶಿಷ್ಟವಾದ ಸಂಗತಿ. ಗಿಳಿಯ ವರ್ತನೆ ಸ್ವಲ್ಪ ಉತ್ಪ್ರೇಕ್ಷಿತವಾಗಿದೆ ಅಷ್ಟೆ. ನೇಮಿಚಂದ್ರನ 'ಲೀಲಾವತಿ ಪ್ರಬಂಧಂ' ಕೂಡ ಗಾಂಧರ್ವ ವಿವಾಹ ಪದ್ಧತಿಗೆ ಒಂದು ಉತ್ತಮ ನಿದರ್ಶನ.

ಪ್ರಾಚೀನ ಕಾಲದಲ್ಲಿ ಬಹುಬಗೆಯ ವಿವಾಹ ಪದ್ಧತಿಗಳು ಮನ್ನಣೆ ಪಡೆದಿದ್ದವು. ಅವುಗಳಲ್ಲಿ ಏಕಪತ್ನಿತ್ವ ಪದ್ಧತಿಯೂ ಒಂದು. ಕಾವ್ಯಗಳು ಏಕಪತ್ನಿತ್ವವನ್ನು ಒಂದು ಪದ್ಧತಿಯಾಗಿತ್ತೆನ್ನುವಂತೆ ಉಲ್ಲೇಖಿಸಿಲ್ಲ. ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ದೊರೆಯುವ ವಿರಳವಾದ ಈ ಪದ್ಧತಿಯ ನಿದರ್ಶನಗಳನ್ನು ಇಲ್ಲಿ ಗುರುತಿಸಿಕೊಳ್ಳಲಾಗಿದೆ. ಪಂಪರಾಮಾಯಣದಲ್ಲಿ ಬರುವ ಶ್ರೀರಾಘವ ಸೀತೆಯರ ವಿವಾಹ ಏಕಪತ್ನಿತ್ವ ಪದ್ಧತಿಗೆ ಸಂಬಂಧಿಸಿದೆ. ಇದಕ್ಕೆ ಪೂರಕವಾಗಿ ಅದೇ ಕಾವ್ಯದಲ್ಲಿ ಬರುವ ಉಪರಂಭೆಯ ಪ್ರಕರಣ ಶ್ರೀರಾಘವನ ಏಕಪತ್ನಿತ್ವದ ಆದರ್ಶ ತತ್ವಗಳನ್ನು ಗಟ್ಟಿಗೊಳಿಸುತ್ತದೆ. ಅನಂತನಾಥ ಪುರಾಣದಲ್ಲಿ ಬರುವ ಅನಂತನಾಥ ಮತ್ತು ರತ್ನಮಾಲೆಯರ ವಿವಾಹ ಏಕಪತ್ನಿತ್ವಕ್ಕೆ ನಿದರ್ಶನವಾಗಿದೆ (೬-೨೮-೮೫). ಬಾಧಪುದಲ್ಲಿ ಬರುವ ಧರ್ಮನಾಥ ಶೃಂಗಾರವತೀ ದೇವಿಯರ ವಿವಾಹವು ಏಕಪತ್ನಿತ್ವ ಪದ್ಧತಿಯನ್ನೇ ಪ್ರತಿನಿಧಿಸುತ್ತದೆ (೧೧-೭೯-೬೮). ಕ್ಷಾತ್ರ ಪದ್ಧತಿಯ ಬಳಕೆ ಗುರುತರವಾಗಿದ್ದ ಕಾಲದಲ್ಲೂ ಒಬ್ಬಳೇ ಮಡದಿಯನ್ನು ಹೊಂದಿದ ನಿದರ್ಶನಗಳು ಹಲವಿವೆ.

ಬಹುಪತ್ನಿತ್ವ ಪದ್ಧತಿ ಎನ್ನಬಹುದಾದ ಉಲ್ಲೇಖಗಳು ಪ್ರಾಚೀನ ಕಾವ್ಯಗಳಲ್ಲಿ ಹೆಚ್ಚಾಗಿಯೇ ಇವೆ. ಇದಕ್ಕೆ ಆ ಕಾಲದಲ್ಲಿ ಸಾಮಾಜಿಕ ಮನ್ನಣೆಯಿತ್ತು. ಅರಸರಲ್ಲಿ, ಅಧಿಕಾರಿಗಳಲ್ಲಿ ಬಹುಪತ್ನಿತ್ವ ಅಧಿಕ ಪ್ರಮಾಣದಲ್ಲಿತ್ತು. ಸಾಮಾನ್ಯರಲ್ಲಿ ಇದು ವಿರಳವಾಗಿತ್ತು. ಇದಕ್ಕೆ ಶಾಸನಗಳಲ್ಲಿ ಉಲ್ಲೇಖಗಳಿವೆ ಎಂಬುದು ಚೆನ್ನಕ್ಕ ಎಲಿಗಾರ ಅವರ ಅಭಿಪ್ರಾಯ (ಪೂರ್ವೋಕ್ತ. ಪು. ೨೪), ವಡ್ಡಾರಾಧನೆಯಲ್ಲಿ ಬರುವ ಸುಕೌಶಳಸ್ವಾಮಿ ೩೨ ಮಂದಿ ರಾಜಕುಮಾರಿಯರನ್ನು ಒಂದೇ ಹಸೆಯಲ್ಲಿ ವಿವಾಹವಾದುದು ಇದಕ್ಕೆ ನಿದರ್ಶನವಾಗಿದೆ. ಅದೇ ಕೃತಿಯಲ್ಲಿ ಬರುವ 'ವೃಷಭಸೇನ ಭಟ್ಟಾರರ ಕಥೆ'ಯ ಪ್ರದ್ಯೋತರಾಜನು ಮೊದಲ ಹೆಂಡತಿ ಜ್ಯೋತಿರ್ಮಾಲೆ ಇದ್ದರೂ, ಜಿನದತ್ತೆಯೆಂಬ ಮತ್ತೊಬ್ಬಳನ್ನು ಶಾಸ್ತ್ರೋಕ್ತವಾಗಿಯೇ ಮದುವೆಯಾದನೆಂದು ಉಲ್ಲೇಖಿಸಿದೆ. ಅದೇ ಕೃತಿಯಲ್ಲಿರುವ ಸನತ್ಕುಮಾರನು ಚಂದ್ರವೇಗರಾಣಿ, ಮಣಿದೇವಿಯರೇ ಮುಂತಾದ ನೂರು ಹೆಣ್ಣುಗಳನ್ನು ಪಾಣಿಗ್ರಹಣ ಪುರಸ್ಸರವಾಗಿ ಮದುವೆ ಆದನೆಂದು ಹೇಳಿದೆ. ಕನೇಮಿಯಲ್ಲಿ ಧರ್ಮರಾಜನು ಹದಿನಾರು ಸ್ತ್ರೀಯರನ್ನೂ ವಿಧ್ಯುಕ್ತವಾಗಿ ಮದುವೆ ಆಗಿದ್ದನೆಂದು ಉಲ್ಲೇಖಿಸಿದೆ (೧೦-೧೨). ಅದೇ ಕಾವ್ಯದಲ್ಲಿ ಬರುವ ವಸುದೇವನು

೬೯೦ ಕನ್ಯೆಯರನ್ನು ಪಾಣಿಗ್ರಹಣ, ಗಾಂಧರ್ವವೇ ಮುಂತಾದ ವಿವಿಧ ಪದ್ಧತಿಗಳ ಮೂಲಕ ಮದುವೆ ಆಗಿದ್ದಿದೆ (೫-೩೯-೪೪). ಜಗವಿಯಲ್ಲಿ ಶ್ರೀಕೃಷ್ಣನು ೧೬,೦೦೦ ರೋಹಣಿ ಸ್ತ್ರೀಯರನ್ನು ಸ್ವೀಕರಿಸಿದ್ದಾನೆ. ವ್ಯಕ್ತಿಯ ಮಹಿಮೆ ಹೆಚ್ಚಿದ್ದೆಡೆ ಇಂತಹ ಉತ್ಪ್ರೇಕ್ಷೆಗಳು ಹೆಚ್ಚಿರುತ್ತವೆ. ನೇಜಿಸಂನಲ್ಲಿ ಬರುವ ಚಾರುದತ್ತನ ವಿವಾಹ ಪ್ರಸಂಗಗಳು, ಜ್ಞಾನಚಂನಲ್ಲಿ ಬರುವ ಹರಿಶ್ಚಂದ್ರನ ಮದುವೆ ಪ್ರಸಂಗಗಳಿಂದ ಒಬ್ಬನಿಗೆ ಅನೇಕ ಹೆಂಡತಿಯರಿದ್ದುದನ್ನು ಸಾಬೀತು ಮಾಡುತ್ತವೆ. ಅರ್ಹದ್ದಾಸನು ಮಿತ್ರಶ್ರೀ, ಚಂದನಶ್ರೀ, ವಿಷ್ಣುಶ್ರೀ, ನಾಗಶ್ರೀ, ಪದ್ಮಲತೆ, ಕನಕಲತೆ, ವಿದ್ಯುಲ್ಲತೆ, ಕುಂದಲತೆಯರೆಂಬ ಎಂಟು ಕನ್ನೆಯರನ್ನು ಮದುವೆ ಆಗಿದ್ದಾನೆಂದು ಸಮ್ಯುಕೌದಲ್ಲಿದೆ. ಭರತೇಶ ವೈಭವದಲ್ಲಿ ಬರುವ ನಾಯಕ ಭರತಚಕ್ರಿಗೆ, ೯೬,೦೦೦ ಮಡದಿಯರು ಇದ್ದರೆಂದು ತಿಳಿಯುತ್ತದೆ. ಇದು ಅತಿ ಹೆಚ್ಚಿನ ಹೆಂಡತಿಯರನ್ನು ಹೊಂದಿರಬಹುದಾದ ಕಾವ್ಯೋಲ್ಲೇಖವಾಗಿದೆ. ವಡ್ಡಾರಾಧನೆಯ ಪ್ರದ್ಯೋತರಾಜ ಹೊಂದಿದ್ದ ಇಬ್ಬರು ಹೆಂಡತಿಯರೇ ಕನಿಷ್ಠ ಸಂಖ್ಯೆಯಾಗಿದೆ. ಶ್ರೀಕೃಷ್ಣನ ೧೬,೦೦೦ ಪತ್ನಿಯರಿಗಿಂತ ಹೆಚ್ಚಿರುವುದು ಮಧ್ಯಮ ಪ್ರಮಾಣವಾಗಿದೆ.

ಬಹುಪತಿತ್ವ ಪದ್ಧತಿಗೆ ಪ್ರಾಚೀನ ಒಂದೆರಡು ಕಾವ್ಯಗಳಲ್ಲಿ ಉಲ್ಲೇಖವಿದೆ. ಕನೇಮಿಯ ದ್ರೌಪದಿ ಹಾಗೂ ಕುವ್ಯಾಭಾವ ದ್ರೌಪದಿ ಪಾಂಡವರೈವರನ್ನು ವಿವಾಹವಾಗಿರುವ ಪ್ರಸಂಗ ಈ ಪದ್ಧತಿಗೆ ನಿದರ್ಶನ. ಜೈನ ಕಾವ್ಯವಾಗಿರಲಿ, ವೈದಿಕ ಕಾವ್ಯವಾಗಿರಲಿ ಮಹಾಭಾರತದ ಈ ವೃತ್ತಾಂತದಲ್ಲಿ ಎಲ್ಲ ಕವಿಗಳದೂ ಸಮಾನವಾದ ಅಭಿಪ್ರಾಯವಾಗಿದೆ.

ಭಿನ್ನ ಜಾತಿ, ಮತಧರ್ಮಗಳಿಗೆ ಸೇರಿದ ಹೆಣ್ಣುಗಂಡುಗಳ ಮದುವೆ ಪ್ರಸಂಗಗಳನ್ನು ಪ್ರಾಚೀನ ಕಾವ್ಯಗಳು ವಿರಳವಾಗಿ ಉಲ್ಲೇಖಿಸಿವೆ. ಇಂತಹ ಪದ್ಧತಿ ತಳುವಾಗಿ ಹರಿದುಬಂದಿರುವುದಕ್ಕೆ ಕೆಲವು ಪುರಾವೆಗಳಿವೆ. ಅವುಗಳ ನಿದರ್ಶನಕ್ಕೆ ಕೃತಿಗಳ ಕಥಾಸನ್ನಿವೇಶಗಳ ಮೂಲಕ ಪರಿಶೀಲಿಸಿದೆ. ವಡ್ಡಾರಾಧನೆಯ 'ವೃಷಭಸೇನ ಭಟ್ಟಾರರ ಕಥೆ'ಯಲ್ಲಿ ಬರುವ ಉಜ್ಜಯಿನಿ ಪಟ್ಟಣದ ರಾಜ ಪ್ರದ್ಯೋತನು ಬೀಡದಲ್ಲಿದ್ದ ಗೌಡ ಮನೆತನದ ಜಿನದತ್ತೆಯನ್ನು ಮದುವೆ ಆಗಿರುವುದಿದೆ. ಇದು ಅಂತರ್‌ಜಾತಿ ಮದುವೆ ಎನ್ನುವುದಕ್ಕಿಂತ ಕ್ಷತ್ರಿಯ ರಾಜನೊಬ್ಬ ಕೆಳಸ್ತರದ ಸಾಮಾನ್ಯ ಕನ್ಯೆಯನ್ನು ಮದುವೆ ಆಗಿದ್ದಾನೆಂದು ಭಾವಿಸಬೇಕಾಗಿದೆ. ರಾಜನ ಇಂತಹ ಕ್ರಮಕ್ಕೆ ಸಮಾಜದಲ್ಲಿ ಮನ್ನಣೆಯಿತ್ತು. 'ಗೌಡ' ಎಂಬ ಇಂದಿನಂತೆ ಅಂದು ಜಾತಿ ಸೂಚಕವಾಗಿದ್ದರೆ ಅಂತರ್‌ಜಾತಿ ವಿವಾಹ ಎನ್ನಲು ಅಡ್ಡಿಯಿಲ್ಲ. ಶಂತನು ಮತ್ಸ್ಯಗಂಧಿಯನ್ನು ವಿವಾಹವಾಗುವುದನ್ನು 'ಪಂಪಭಾರತ' ಉಲ್ಲೇಖಿಸುತ್ತದೆ. ಅದನ್ನೂ ಇಲ್ಲಿ ನೆನೆಯಬಹುದು. ರಾಗಮಂಜರಿ ವೇಶ್ಯಕುಲದ ನರ್ತಕಿ. ಅಪಹಾರವರ್ಮನಿಗೆ ಅವಳ ಮೇಲೆ ಮೋಹವುಂಟಾಯಿತು. ವೇಶ್ಯಾಧರ್ಮವನ್ನು ತ್ಯಜಿಸಿ ಕುಲಸ್ತ್ರೀಯಂತೆ ಬಾಳಲು ರಾಗಮಂಜರಿ ಪ್ರತಿಜ್ಞೆ ಮಾಡಿದ್ದವಳು. ಚಂಪಾಪತಿ ಮಹಾರಾಜರಿಗೆ ಇವಳ ಅಕ್ಕ ಕಾಮಮಂಜರಿ ಇವಳ ಪ್ರತಿಜ್ಞೆಯನ್ನು ಭಂಗಪಡಿಸುವಂತೆ ದೂರು ಸಲ್ಲಿಸಿರುತ್ತಾಳೆ. ರಾಜನ ಬಳಿಯೂ ತನ್ನ ಪ್ರತಿಜ್ಞೆಯನ್ನು ರಾಗಮಂಜರಿ ಹೇಳಿಕೊಂಡು ಕುಲಸ್ತ್ರೀಯಾಗಿ ಬಾಳಲು ಅನುಮತಿ ಕೇಳಿರುತ್ತಾಳೆ. ರಾಜ ಅವಳಿಷ್ಟದಂತೆ ತೀರ್ಪು ನೀಡಿರುತ್ತಾನೆ. ಆಗ ಅಪಹಾರವರ್ಮನು ತನ್ನಲ್ಲಿದ್ದ ತೊಗಲಿನ ಚೀಲವನ್ನು ಕಾಮಮಂಜರಿಗೆ ಕೊಟ್ಟು ರಾಗಮಂಜರಿಯನ್ನು ವೇಶ್ಯಾ ಸೆರೆಯಿಂದ ಬಿಡಿಸುತ್ತಾನೆ. ಕಾಮಮಂಜರಿ ರಾಜಮಂಜರಿಯನ್ನು ಕುಲಸ್ತ್ರೀಯಂತೆ ಸಿಂಗರಿಸಿ ಅಪಹಾರವರ್ಮನಿಗೆ ಕೊಡುತ್ತಾಳೆ. ಅವನು ಅವಳ ಕೈಹಿಡಿಯುತ್ತಾನೆ ಎಂಬುದು 'ಅಭಿನವದಶಕುಮಾರ ಚರಿತ'ದಲ್ಲಿ ಉಲ್ಲೇಖವಿದೆ. (೮-೧೬೫). ಇಲ್ಲಿ ರಾಜಕುಲದವನು ವೇಶ್ಯಕುಲದವಳನ್ನು ಮದುವೆ ಆಗಿರುವುದು ಗಮನಾರ್ಹ.

ಮಾತಂಗನೆಂಬ ಬ್ರಾಹ್ಮಣನು ದಶಕುಮಾರರಲ್ಲಿ ಒಬ್ಬನಾದ ರಾಜವಾಹನನ ಸಹಾಯದಿಂದ ಪಾತಾಳಲೋಕದ ನಾಗಕನ್ಯೆಯನ್ನು ಮದುವೆ ಆದನು ಎಂಬುದು ಅಭಿದಚದಲ್ಲಿದೆ (೩-೫೫).

ಬ್ರಾಹ್ಮಣ ದಂಪತಿಗಳಾದ ಸೋಮದತ್ತು ಸೋವಿಲೆಯರ ಮಗಳು ಸೋಮೆ, ಗುಣಪಾಲ ಗುಣವಂತೆಯರಾದ ವೈಶ್ಯದಂಪತಿಗಳ ಸಾಕುಮಗಳಾಗಿ ಬೆಳೆದು ದೊಡ್ಡವಳಾದ ಮೇಲೆ, ಅವಳನ್ನು ರುದ್ರದತ್ತನೆಂಬ ಬ್ರಾಹ್ಮಣ ತರುಣ, ಜಿನನಾದನೆಂದು ಸುಳ್ಳು ಹೇಳಿ ಲಗ್ನವಾಗುವುದು ಸಮ್ಯುಕೌದಲ್ಲಿದೆ (೬-೯-೩೦).

ವಿಮಲದಾಸ ಮತ್ತು ಪದ್ಮೆ ಎಂಬ ವೈಶ್ಯ ದಂಪತಿಗಳ ಮಗಳು ಪದ್ಮಶ್ರೀ. ಇವಳು ಜಿನಬಸದಿಯಲ್ಲಿ ಪೂಜೆ ಮಾಡುತ್ತಿದ್ದಾಗ ಬೌದ್ಧಧರ್ಮದ ಬುದ್ಧಸಂಘನೆಂಬ ತರುಣ ಅವಳ ಸೌಂದರ್ಯಕ್ಕೆ ಮೋಹಿತನಾದನು. ಹೆಣ್ಣಿನ ತಂದೆತಾಯಿಯರು ಒಪ್ಪಲಿಲ್ಲ. ಆಗ ತರುಣನ ತಂದೆ ಜೈನಸನ್ಯಾಸಿಯೆಂದು ಸುಳ್ಳು ಹೇಳಿ ತಾನು ಹೆಣ್ಣು ಕೊಟ್ಟರೆ ಊಟ ಮಾಡುವೆನೆಂದು ಹಠ ಹಿಡಿದನು. ಆದಕ್ಕೆ ವೈಶ್ಯದಂಪತಿಗಳು ಒಪ್ಪಿದರು. ಪದ್ಮಶ್ರೀ ಬುದ್ಧಸಂಘರಿಗೆ ಲಗ್ನವಾಯಿತು. ಕೊನೆಗೆ ನಿಜಸಂಗತಿ ತಿಳಿಯಿತು. ಹೆಣ್ಣಿನ ತಂದೆ ಪಶ್ಚಾತಾಪಪಟ್ಟರು. ಪದ್ಮಶ್ರೀಯನ್ನು ಊರು ಬಿಡಿಸಿದರು. ಬುದ್ಧಸಂಘನು ಅವಳ ಜೊತೆಗೆ ಹೊರಟನು ಎಂಬುದು ಸಮ್ಯುಕೌದಲ್ಲಿ ಉಲ್ಲೇಖವಿದೆ (೯-೧೧-೫೯). ಇಲ್ಲಿ ಎರಡು ಭಿನ್ನ ಧರ್ಮದವರ ನಡುವೆ ಜರುಗಿರುವ ವಿವಾಹ ಪದ್ದತಿಗೆ ನಿದರ್ಶನವಿದೆ.

ಕಲ್ಯಾಣವೆಂಬ ಪಟ್ಟಣದ ಅಧಿಪತಿ ಬಜ್ಜಣನ ಮೊದಲನೆಯ ಹೆಂಡತಿ ಸುಪ್ರಭೆ. ಬಿಜ್ಜಣ (ಜೈನ) ರತ್ನತ್ರಯಗಳನ್ನು ಧರಿಸಿದ್ದವನು. ವೈಹಾಳಿಗೆ ಹೋಗಿ ಹಿಂತಿರುಗುತ್ತಿದ್ದ ಬಿಜ್ಜಣ ನೆಲವಾಡಿನಲ್ಲಿದ್ದ ವಿಪ್ರಕುಲದ ಮಾದಿರಾಜನ ಮಗಳು ಗುಣವತಿಗೆ ಮೋಹಿತನಾದ. ಮಾದಿರಾಜ ಕನಸಿನಲ್ಲಿಯೂ ಜಿನಮತವನ್ನು ಅರಿತವನಲ್ಲ. ಆದರೆ ಮಗಳು ಮಾತ್ರ ಜಿನಧರ್ಮ ಪಾಲಕಿ. ಇವಳನ್ನು ಬಿಜ್ಜಣ ಶಾಸ್ತ್ರೋಕ್ತವಾಗಿ ಮದುವೆಯಾಗುವ ಉಲ್ಲೇಖ 'ವಿಜಯಕುಮಾರ ಚರಿತೆ'ಯಲ್ಲಿದೆ (ಪದ್ಯ ೩೬೪-೪೩೦). ಇಲ್ಲಿ ಜೈನಧರ್ಮದ ರಾಜ ವಿಪ್ರಕುಲದ ಕನ್ಯೆಯನ್ನು ಮದುವೆ ಆಗಿರುವುದಿದೆ. ಇದೇ ಕಾವ್ಯದಲ್ಲಿ, ವೀರಶೈವಳಾದ ವಿಜಯಕುಮಾರಿಯನ್ನು ಅವಳ ಅಣ್ಣ ಬಸವಣ್ಣನ ಮೂಲಕ ಬಿಜ್ಜಣನು ಮದುವೆ ಆಗುವುದೂ ಇದೆ (ವಿಕುಚ ೪೧೬-೪೭೦).

ಬಸವಣ್ಣನವರ ಕಾಲದಲ್ಲಿ ನಡೆದ ಹರಳಯ್ಯ ಮತ್ತು ಮಧುವರಸರ ಮಕ್ಕಳ ನಡುವಣ ವಿವಾಹ ಅಂತರ್‌ಜಾತಿಯ ವಿವಾಹಕ್ಕೆ ಗಟ್ಟಿಯಾದ ನಿದರ್ಶನ. ಇದರಿಂದಲೇ ಬಸವಣ್ಣನವರ ಕ್ರಾಂತಿ ವಿಫಲಗೊಂಡು ಅವರ ಸಾಮಾಜಿಕ ಸಮಾನತೆಯ ಉದ್ಯೋಗ ಈಡೇರಲಿಲ್ಲವೆಂದು ಇತಿಹಾಸಕಾರರು ಹೇಳುತ್ತಾರೆ. ಇದು ಹೇಗೇ ಇರಲಿ. ವಿವಾಹದ ಸ್ವರೂಪ, ಕಲಾಪ, ವಿಧಾನಗಳ ಬಗ್ಗೆ ವೀರಶೈವ ಕಾವ್ಯಗಳು ಏನನ್ನೂ ಉಲ್ಲೇಖಿಸದಿರುವುದು ಮತ್ತು ಈ ಘಟನೆಯನ್ನೇ ಮರೆಮಾಡಿರುವುದು ದುರದೃಷ್ಟ ಸಂಗತಿ. ಇದನ್ನು ಕಾವ್ಯಗಳು ವರ್ಣಿಸಿದ್ದರೆ ಪ್ರಾಚೀನ ಕಾಲದ ಅಂತರ್‌ಜಾತಿ ವಿವಾಹದ ಸ್ವರೂಪ, ವಿಧಾನ ತಿಳಿಯಬಹುದಿತ್ತು. ಆದರೆ ಅದಕ್ಕೆ ಈಗ ಅವಕಾಶವಿಲ್ಲದಂತಾಗಿದೆ.

ಪ್ರಾಚೀನ ಕನ್ನಡ ಕಾವ್ಯಗಳು ಬಾಲ್ಯ ವಿವಾಹವನ್ನಾಗಲೀ, ಪುನರ್ ವಿವಾಹವನ್ನಾಗಲೀ ಅಥವಾ ವಿವಾಹ ವಿಚ್ಛೇದನವನ್ನಾಗಲೀ ಉಲ್ಲೇಖಿಸಿಲ್ಲ. ಪ್ರೌಢ ವಿವಾಹ ಪದ್ಧತಿಯನ್ನೇ ಉಲ್ಲೇಖಿಸಿವೆ.

ಕನ್ಯಾದಾನ ಪದ್ಧತಿಯನ್ನೇ ಮಾನ್ಯಮಾಡಿವೆ. ದಾನ ಕೊಡುವುದು ಕ್ಷತ್ರಿಯ ಧರ್ಮ. ಹಾಗಾಗಿ ಅವರು ಪಾಣಿಗ್ರಹಣ ಪದ್ಧತಿಯನ್ನು ಅನುಸರಿಸಿರುವರು. ದಾನ ಸ್ವೀಕರಿಸುವುದು ಬ್ರಾಹ್ಮಣ ಧರ್ಮ, ಹಾಗಾಗಿ ಕನ್ಯಾದಾನ ಪದ್ಧತಿಯನ್ನು ಅನುಸರಿಸಿರುವರು. ಒಟ್ಟಾರೆ ಅವು ವಿವಾಹ ಪದ್ಧತಿ ಮನುಷ್ಯ ಸಮಾಜದ ಅವಿಭಾಜ್ಯ ಅಂಗವೆನ್ನುವುದನ್ನು ಒಪ್ಪಿಕೊಂಡಿವೆ.

□

ಡಾ. ಎಲ್. ರಾಜಶೇಖರಯ್ಯ
ಮುಖ್ಯಸ್ಥರು, ಕನ್ನಡ ವಿಭಾಗ
ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ
ಮೈಸೂರು - ೫೭೦ ೦೦೬

# ಬಸವಾದಿ ಶರಣರು

ಸತ್ಯಾನಂದ ಪಾತ್ರೋಟ

ಶರಣರು,
ಯಾರಿಗೂ ಅಂಜಲಿಲ್ಲ
ಯಾರಿಗೂ ಅಳುಕಲಿಲ್ಲ
ಒಳಗೆ ಸುಳಿವಾತ್ಮನು
ಎಲ್ಲರೊಳಗೊಂದಿರುವಾಗ
ಯಾವುದಕೂ ಭಯ, ಭೀತರಾಗಲಿಲ್ಲ.

ಶರಣರು,
ಮನಕ್ಕಂಜಿದರು
ಮನದ ಮುಂದಣ ಆಸೆಗಂಜಿದರು
ಮನದಲ್ಲಿಯೇ ಶಿವಾಲಯ ಕಂಡು
ನೆಲವೊಂದೇ
ಜೀವ, ಜೀವಾತ್ಮರಿಗೆಂದರು.

ಶರಣರು,
ಸುಳ್ಳಾಡಲಿಲ್ಲ, ಕದ್ದಾಡಲಿಲ್ಲ
ಭೂತ, ಭವಿಷ್ಯತ್ತ್ತೀಗೆಂದು

ಚಿಂತಿಸಲಿಲ್ಲ
ವರ್ತಮಾನಕೆ ತಲೆ ಕೆಡಿಸಿಕೊಳಲಿಲ್ಲ
ಎದುರಿಗಿದ್ದದ್ದೆಲ್ಲ ಸತ್ಯವೆಂದರು.

ಶರಣರು,
ಮಠ ಕಟ್ಟಲಿಲ್ಲ, ಗುಡಿ ಕಟ್ಟಲಿಲ್ಲ
ಸಿರಿಗರ ಬಡಿದವರ ಎಚ್ಚರಿಸಿ
ಎಲ್ಲರ ಹುಟ್ಟಿನ ಮೂಲ-ಹೊಲೆತನ
ಎಂದುದ್ಧರಿಸಿ
ಮನಸ್ಸುಗಳ ತಟ್ಟಿದರು
ಮನುಷ್ಯರನು ಪ್ರೀತಿಸಿದರು.

ಶರಣರು,
ಮರಣಕ್ಕಂಜಲಿಲ್ಲ, ಮಸಣಕ್ಕಂಜಲಿಲ್ಲ
ಗದ್ದುಗೆ, ಪೀಠ, ಪಾದೋದಕಕ್ಕಂಜಿದರು
ಮರಣದಲಿ
ಮಹಾನವಮಿ ಕಂಡರು.

ಶರಣು ಎಂದವರಿಗೆ
ಶರಣು, ಶರಣು ಎಂದ ಶರಣರು
ತಮ್ಮನ್ನು ತಾವೇ ತಿದ್ದಿಕೊಂಡು
ಲೋಕದೊಳಗೆ ತಾವು ಒಬ್ಬರಾಗಿ
ಲೋಕವನೇ ಗೆದ್ದರು.

'ಇವ ನಿಮ್ಮ ಮನೆಯ ಮಗನೆಂದೆನಿಸಿರಯ್ಯ'
ಎಂದ ಶರಣರ
ಮೂಲ ಹುಡುಕುತ್ತ
ಅವರು ನಡೆದಾಡಿದ ನಾಡಿನಲಿ
ನಿತ್ಯ, ಕಟ್ಟೆ ಹಾಕುತ್ತಿದ್ದೇವೆ
ಜಾತಿಯ ಜಾಲಿಯಲಿ.

□

ಸತ್ಯಾನಂದ ಪಾತ್ರೋಟ
'ಜಾಜಿಮಲ್ಲಿಗೆ' ಸೆಕ್ಟರ ನಂ. ೪೨, ಮನೆ ನಂ. ೪೪
ನವನಗರ, ಬಾಗಲಕೋಟ

# ಸೂರಪ್ಪ : ಶ್ರಮಸಂಸ್ಕೃತಿಯ ಚಾರಿತ್ರಿಕ ಸತ್ಯಾನ್ವೇಷಣೆ

**ಡಾ. ಅಪ್ಪಗೆರೆ ಡಿ. ಸೋಮಶೇಖರ**

"ರಾಜ ನಿನಗೆ ಧಿಕ್ಕಾರ ನಿನ್ನ ಸಿಪಾಯಿಗಳಿಗೆ ಕೋಟಿ ಧಿಕ್ಕಾರ
ಪ್ರೇಮಕೊಂದ ನಿನ್ನ ರಾಜ್ಯದಿ ಬಾಯ್ದೆರೆಯಲಿ ಭೀಕರ ಬರ"

(ಸೂರಪ್ಪ : ಪು-೪೨)

**ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು** ಎಂಬ ಡಾ. ಬಿ.ಆರ್. ಅಂಬೇಡ್ಕರ್ ಅವರ ಮಾತು, ಭಾರತೀಯ ಚಾರಿತ್ರಿಕ ಅಧ್ಯಯನದ ಸಂದರ್ಭದಲ್ಲಿ ಬಹಳ ಗಂಭೀರವಾಗಿ ಅವಲೋಕಿಸಬೇಕಾಗಿರುವ ಮಹತ್ವದ ಹೇಳಿಕೆಯಾಗಿದೆ. ಭಾರತೀಯ ಇತಿಹಾಸವೆಂದರೆ ಅದು, ಎರಡು ವೈರುಧ್ಯಗಳ ಮುಖಾಮುಖಿ ಸಂಘರ್ಷವೇ ಆಗಿದೆ. ಆ ಎರಡು ವೈರುಧ್ಯಗಳನ್ನು ಬಡವ-ಶ್ರೀಮಂತ, ಸ್ಪೃಶ್ಯ-ಅಸ್ಪೃಶ್ಯ, ಆರ್ಯ-ದ್ರಾವಿಡ, ಶ್ರಮಿಕ-ಧನಿಕ, ಸ್ತ್ರೀ-ಪುರುಷ, ಶೋಷಿತ-ಶೋಷಕ-ಹೀಗೆ ಹೋಗಬೇಕಾದರೂ ನಾವು ಅರ್ಥೈಸಿಕೊಳ್ಳಬಹುದು. ಈವರೆಗಿನ ಭಾರತೀಯ ಚರಿತ್ರೆ ಯಾವುದೊ ಒಂದು ಸೀಮಿತ ವರ್ಗದ ಹಿತಾಸಕ್ತಿಯ ವಿಶ್ಲೇಷಣೆ ಮಾತ್ರವಾಗಿದೆ. ಈ ಸೀಮಿತವರ್ಗ ಶತಮಾನಗಳಿಂದ ಬಹುಸಂಖ್ಯಾತ ನೊಂದವರ ಬದುಕನ್ನು ಚರಿತ್ರೆಯ ಕರಾಳ ಗರ್ಭದಲ್ಲಿ ನಿರ್ಬಂಧಿಸುತ್ತಲೇ ಬರುತ್ತಿದೆ. ಅಂತಹ ನಿರ್ಬಂಧಿತ ಅಸಂಖ್ಯಾತ ಬಹುಸಂಸ್ಕೃತಿಯ ಚಾರಿತ್ರಿಕ ಸತ್ಯಗಳನ್ನು ಸಂಶೋಧಿಸುವ ತುರ್ತಿದೆ. ಆಗ ಮಾತ್ರ ಭಾರತದ ನಿಜವಾದ ಮಣ್ಣಿನ ಚರಿತ್ರೆ ಅನಾವರಣಗೊಳ್ಳಲು ಸಾಧ್ಯ; ಜೊತೆಗೆ ಹುಸಿಸಂಸ್ಕೃತಿಯ ಮುಖವಾಡಗಳು ಕಳಚಿ ಕಟುವಾಸ್ತವತೆಗಳು ಗೋಚರಿಸಲು ಸಾಧ್ಯ. ಆ ನಿಟ್ಟಿನಲ್ಲಿ ಪ್ರೊ. ಮನಜ ಅವರ 'ಸೂರಪ್ಪ' ಕಾದಂಬರಿ ಮಹತ್ವಾಕಾಂಕ್ಷೆಯ ಆಕರ ಗ್ರಂಥವಾಗಿ ನಿಲ್ಲುವ ಸತ್ವಪೂರ್ಣ ಕೃತಿಯಾಗಿದೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಪ್ರೊ. ಮ.ಸ. ಜವರಯ್ಯ ಅವರು ತಮ್ಮದೇ ಆದ ಸೃಜನಶೀಲ ದಲಿತ ಪ್ರತಿಭೆಯಿಂದ ಸ್ವಂತಿಕೆಯ ಛಾಪನ್ನು ನಿರ್ಮಿಸಿದವರು. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಚಾರ, ವಿಮರ್ಶೆ, ಸಂಶೋಧನೆ ಹಾಗೂ ಅನುವಾದ ಕ್ಷೇತ್ರದಲ್ಲಿ ಹೆಸರಾಗಿರುವ ಮಸಜ ಅವರ ಒಟ್ಟು ಬರಹದ ಹಿನ್ನೆಲೆಯಲ್ಲಿ ಅಂಬೇಡ್ಕರ್ ಕನಸಿದ ತತ್ವ, ಸಿದ್ಧಾಂತ, ವೈಚಾರಿಕತೆ ಹಾಗು ಸ್ವಾಭಿಮಾನದ ಸ್ಪರ್ಶವಿದೆ. ಅಂಬೇಡ್ಕರ್ ಚಿಂತನೆಯನ್ನು ಆಳವಾಗಿ ಅಧ್ಯಯನ ಮಾಡಿರುವ ಇವರು, ಅಂಬೇಡ್ಕರ್‌ವಾದಿ ಆಲೋಚನೆಯ ಹಿನ್ನೆಲೆಯಲ್ಲಿ ಒಟ್ಟು ಶೋಷಿತ ಸಮಾಜದ ಒಳಸ್ತರಗಳನ್ನು ಪ್ರಾಮಾಣಿಕವಾಗಿ ವ್ಯಾಖ್ಯಾನಿಸಬಲ್ಲವರು. ಈ ನೆಲೆಯಲ್ಲಿ ಇವರೆಲ್ಲ ಸೃಜನಶೀಲ ಕೃತಿಗಳ ಮೌಲ್ಯಗಳನ್ನು ಕಂಡುಕೊಳ್ಳಬಹುದು. ಪ್ರಸ್ತುತ ಸೂರಪ್ಪ ಕಾದಂಬರಿಯ ಉದ್ದಕ್ಕೂ, ಅಂಬೇಡ್ಕರ್ ಪ್ರಣೀತ ಚಾರಿತ್ರಿಕ ದೃಷ್ಟಿಕೋನದ ತಾತ್ವಿಕ ಜಿಜ್ಞಾಸೆಯ ಹೊಳಹನ್ನು ಗುರುತಿಸಬಹುದು.

ಲೇಖಕರೇ ಹೇಳಿರುವ ಹಾಗೆ, ಸುಲ್ತಾನ್ ಟೀಪು ಸೈನ್ಯದಲ್ಲಿ ಸೈನಿಕನಾಗಿದ್ದ ವೀರ ಸೀಪಾಯಿ ಸೂರಪ್ಪನ ವಂಶದ ಕಥೆಯೇ ಕಾದಂಬರಿಯ ವಸ್ತುವಾಗಿದ್ದು ಹಲವು ಮಜಲುಗಳಲ್ಲಿ ತೆರೆದುಕೊಳ್ಳುತ್ತ ನಿರಂತರವಾಗಿ ಪ್ರವಹಿಸುತ್ತದೆ. ವೀರ ಸೇನಾನಿ ಸೂರಪ್ಪನವರ ಮಗ ಚಿಕ್ಕೂರಪ್ಪ, ಮೊಮ್ಮಗ ಯಜಮಾನ್ ಸೂರಪ್ಪ, ಲಾವಣಿಕಾರ ಮರಿಚಾಮಯ್ಯ ಹಾಗು ಹಿರಿಯವ್ವ, ಧರಣವ್ವರ ವ್ಯಕ್ತಿತ್ವ ಮತ್ತು ಕೌಟುಂಬಿಕ ವಿವರದೊಟ್ಟಿಗೆ ಆರಂಭವಾಗುವ  ಕಾದಂಬರಿಯು; ಶೋಷಿತರ ಬಗೆಗೆ ಅಪಾರ ಅಂತಃಕರಣವುಳ್ಳವರಾಗಿದ್ದ ಮೈಸೂರು ಸಂಸ್ಥಾನದ ದೊರೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಅಗಾಧ ಮನುಷ್ಯ-ಪ್ರೇಮ; ಮೈಸೂರಿನ ರಾಜಮನೆತನ ಹಾಗು ಲಕ್ಷ್ಮೀಪುರದ ದಲಿತರ ನಡುವಿನ ಸಂಬಂಧ; ಅರಮನೆಯೊಳಗಿನ ಮನುಷ್ಯ ವಿರೋದಿ ಕುತಂತ್ರ, ಜಾತಿವಾದಿಗಳ ಕುಟಿಲತೆ; ಲಕ್ಷ್ಮೀಪುರದ ದಲಿತರ ಬದುಕಿನಾಳದ ಹಲಬಗೆಯ ಸಾಮಾಜಿಕ ಹಾಗು ಸಾಂಸ್ಕೃತಿಕ ಸ್ತರ-ವಿನ್ಯಾಸ; ಮನುಷ್ಯನ ಸುಪ್ತ ಪ್ರಜ್ಞೆಯಲ್ಲಡಗಿರುವ ವಿವಿಧ ರೀತಿಯ ಸಂಕೀರ್ಣ ವ್ಯಕ್ತಿತ್ವಗಳ ಸಂಘರ್ಷ; ಮನುಷ್ಯಸಂಬಂಧಗಳನ್ನು ಛಿದ್ರಗೊಳಿಸುವ ನಿಟ್ಟಿನಲ್ಲಿ ಕೋಮುವಾದಿ ದುಷ್ಟಶಕ್ತಿಗಳ ಹುನ್ನಾರ; ಮನುಷ್ಯನ ಕ್ರೂರ ಹಾಗೂ ಸ್ವಾರ್ಥತನದ ಸಂಕೇತವಾಗಿ, ಇಡೀ ಸಮಾಜವನ್ನು ಕಾಡುವ ಕಾಲರ ರೋಗದ ಸಾವಿನ ನರ್ತನ ಮತ್ತು ಬರಗಾಲ; ಬ್ರಿಟೀಷರಿಗೆ  ಸಿಂಹಸ್ವಪ್ನವಾಗಿದ್ದ ಪ್ರಜಾಪ್ರಭುತ್ವವಾದಿ ಟೀಪು ಸುಲ್ತಾನನ ಜಾತ್ಯತೀತ, ಧರ್ಮಾತೀತ ಮೌಲ್ಯ; ತಿರುಮಲರಾವ್, ನಾರಾಯಣ್‌ರಾವ್, ಖಿಲ್ಲೇದಾರ್ ನದೀಮ್ ಮತ್ತು ಮೀರ್ ಸಾದಿಕ್‌ರ ಒಡೆದು ಆಳುವ ನೀತಿ ಮತ್ತು ದೇಶದ್ರೋಹಿತನ; ಟೀಪುವಿನ ಪತನ, ಗೂಢಾಚಾರ ಸೂರಪ್ಪನ ಸ್ವಾಮಿನಿಷ್ಠೆ, ಪರಾಕ್ರಮ, ಬಲಿದಾನ— ಈ ಎಲ್ಲಾ ಸಂಗತಿಗಳು ಕಾದಂಬರಿಯ ಕಥೆಯಾಳದಲ್ಲಿ ಪರಸ್ಪರ ಪೂರಕವಾಗಿ ಬೆಳೆಯುತ್ತಲೇ ಬೆರಗುಗೊಳಿಸುತ್ತ ಸಾಗುತ್ತವೆ.

ದಲಿತ ಲೋಕದೊಳಗೆ ಹಿಡಿಕಿರಿದಿರುವ, ಸಂಬಂಧಗಳನ್ನು ಬೆಸೆಯುವ ಜೀವಂತಿಕೆಯ ಗುಣ; ಸಮಾಜವನ್ನು ಮನುಷ್ಯತ್ವದ ನೆಲೆಯಲ್ಲಿ ಕಟ್ಟುವ ಕ್ರಿಯಾಶೀಲತೆ; ಚಲನಶೀಲ ಸಂಸ್ಕೃತಿ ಮೌಲ್ಯದ ಮಹತ್ವ ಹಾಗೂ ಶೋಷಿತರಲ್ಲಿ ರಕ್ತಗತವಾಗಿರುವ ಸ್ವಾಭಿಮಾನ, ಪ್ರಾಮಾಣಿಕತೆ, ಮತ್ತು ನಾಯಕತ್ವದ ಒಲವು-ನಿಲುವುಗಳನ್ನು ಕಾದಂಬರಿ ಪರಿಚಯಿಸುತ್ತದೆ. ಇದು ಯಾವುದೇ ಒಂದು ಶ್ರಮಮೂಲ ಸಂಸ್ಕೃತಿಯ ಅಂತಃಕರಣಪ್ರೇರಿತ ಜೀವನಮೌಲ್ಯವೇ ಆಗಿರುತ್ತದೆ. ಮೈಸೂರು ಪ್ರಾಂತ್ಯವು ದಲಿತರ ಶ್ರೀಮಂತ ಸಾಂಸ್ಕೃತಿಕ ನೆಲೆಯ ಪ್ರಧಾನ ಕೇಂದ್ರವಾಗಿದೆ. ಇದಕ್ಕೆ ಅಧಿಕೃತ ದಾಖಲೆಗಳಾಗಿ, ದಲಿತರ ಪೂರ್ವಿಕರು ಹಾಗೂ ಸಾಮಾಜಿಕ ಕ್ರಾಂತಿಯ ಸಾಂಸ್ಕೃತಿಕ ಶಕ್ತಿಗಳಾಗಿರುವ

ಮಲೆಯ ಮಹದೇಶ್ವರ, ಮಂಟೇಸ್ವಾಮಿ, ರಾಚಪ್ಪಾಜಿ, ಸಿದ್ದಪ್ಪಾಜಿ, ದೊಡ್ಡಮ್ಮತಾಯಿ ಜನಪದ ಮಹಾಕಾವ್ಯಗಳು ಜನಮಾನಸದಲ್ಲಿ ಇಂದಿಗೂ ಜೀವಂತಿಕೆಯ ಸಂಕೇತಗಳಾಗಿರುವುದನ್ನು ಕಾಣಬಹುದು. ಹಾಗೆಯೇ ಇಂತಹುದೇ ಸಾಂಸ್ಕೃತಿಕ ಕೊಂಡಿಯಾಗಿರುವ, ಚಾರಿತ್ರಿಕವಾಗಿ ತಿರುಚಲಾಗಿರುವ ಮಹಿಷಾಸುರನ ನಿಜದ ನೆಲೆಗಳನ್ನು ದ್ರಾವಿಡ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಪುನರ್‌ನಿರ್ಮಿಸುವ ಅಗತ್ಯವಿದೆ.

ದಲಿತರು ಮಾತ್ರ ಅಸ್ಪೃಶ್ಯತೆಯ ಕಳಂಕಕ್ಕೆ ಒಳಗಾದವರಲ್ಲ, ಜೊತೆಗೆ ಅವರು ಬದುಕುವ ಊರು, ಪ್ರದೇಶಗಳು ಕೂಡ ಅಸ್ಪೃಶ್ಯತೆಯ ಕಳಂಕದ ಕೇಂದ್ರಗಳಾಗಿವೆ. ಕಾದಂಬರಿಯ ಕೇಂದ್ರಬಿಂದುವಾಗಿರುವ 'ಲಕ್ಷ್ಮೀಪುರ' ಇಂದಿನ ಅಶೋಕಪುರಂ. ಈ ಊರು ಮೈಸೂರು ಪಟ್ಟಣದೊಳಗಿದ್ದರೂ, ಅಲ್ಲಿ ಕೇವಲ ದಲಿತರು ಮಾತ್ರ ವಾಸಿಸುತ್ತಾರೆಂಬ ಕಾರಣಕ್ಕಾಗಿ 'ದೊಡ್ಡೊಲಗೇರಿ' ಎಂಬುದಾಗಿ ಗುರುತಿಸಲ್ಪಡುತ್ತದೆ. ಈ ಊರಿಗೆ ಸಂಬಂಧಿಸಿದ ಕೆರೆ, ತೋಪುಗಳನ್ನು ಕೂಡ 'ಹೊಲೇರ ಕೆರೆ', 'ಹೊಲೇರ ತೋಪು' ಎಂಬುದಾಗಿ ಕರೆಯಲಾಗುತ್ತದೆ. ಅಸ್ಪೃಶ್ಯತೆಯ ಕಳಂಕದ ಅಪವಾದದ ನಡುವೆಯೂ, ಲಕ್ಷ್ಮೀಪುರದ ದಲಿತ ಪ್ರತಿಭೆಗಳು ಜಾತಿಸಮಾಜಕ್ಕೆ ಹೇಗೆ ಸವಾಲಾಗಿ ನಿಲ್ಲಬಲ್ಲವು ಎಂಬುದನ್ನು ಲೇಖಕರರು ಹಲವು ಪಾತ್ರಗಳ ಮುಖೇನ ಸಾಬೀತುಪಡಿಸಿದ್ದಾರೆ. ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ 'ಲಕ್ಷ್ಮೀಪುರ'ವನ್ನು 'ಆದಿಪುರ' ಎಂಬುದಾಗಿ ಕರೆಯುತ್ತಿದ್ದು, ಆನಂತರದಲ್ಲಿ ಅದು 'ಆದಿಕರ್ನಾಟಕಪುರ' (ಎ.ಕೆ.ಪುರ) ಎಂಬುದಾಗಿ ನಾಮಾಂತರಗೊಂಡದ್ದನ್ನು ಲೇಖಕರು ಸಂಶೋಧನಾತ್ಮಕವಾಗಿ ಗುರುತಿಸಿದ್ದಾರೆ. ಹದಿನೇಳನೆ ಶತಮಾನದ ಪೂರ್ವಾರ್ಧದಲ್ಲಿ ಮೈಸೂರು ಪಟ್ಟಣದ ನಡುವೆ ತಲೆಯೆತ್ತಿದ ಆದಿಕರ್ನಾಟಕಪುರದ ದಲಿತರ ಬದುಕನ್ನು ಸಮಗ್ರವಾಗಿ ಕಟ್ಟಿಕೊಡುವ 'ಸೂರಪ್ಪ' ಕಾದಂಬರಿಯು ಒಟ್ಟಂದದಲ್ಲಿ 'ಆದಿಕರ್ನಾಟಕ ಪುರದ ಆತ್ಮಕಥೆ' ಎಂಬಂತೆ ವ್ಯಕ್ತಗೊಂಡಿದೆ.

"ಶಕ್ತಿ ಭಾರತ ನಾಡಿದು  
ಮುಕ್ತಿ ಸಂಪದ ಕನ್ನಡ ಬೀಡಿದು  
ದೀನ ದಲಿತರ ಸ್ವಾತಂತ್ರ್ಯ ಸಾರಿದ ಪ್ರಥಮ ನಾಡಿದು  
ಯಾರಿಹರು ಸರಿಸಮರು ತೋರು  
ಅವರೇ ನಾಲ್ವಡಿ ಕೃಷ್ಣರಾಜ ಒಡೆಯರು  
ಜಗಮೆಚ್ಚಿದ ವೀರಕಂಠೀರವ ಮೈಸೂರರಸರು"

(ಸೂರಪ್ಪ : ಪು. ೪೫)

'ಮಾರ್ಲಮ್ಮಿರಂಗ'ದ ವೇದಿಕೆಯಲ್ಲಿ ಹಿರಿಯವ್ವ ಹಾಡುವ ಈ ಲಾವಣಿ ಮೈಸೂರು ದೊರೆ ನಾಲ್ವಡಿ ಕೃಷ್ಣರಾಜ ಒಡೆಯರ ಹಿರಿಮೆಯನ್ನು ಸಾರುತ್ತದೆ. ಸ್ವತಂತ್ರ್ಯಪೂರ್ವದಲ್ಲೇ, ಎಲ್ಲ ಸಂಪ್ರದಾಯವಾದಿಗಳ ಪ್ರಬಲ ವಿರೋಧದ ನಡುವೆಯೂ ದೀನದಲಿತರಿಗೆ, ಹಿಂದುಳಿದವರಿಗೆ ಆಡಳಿತ, ಅಧಿಕಾರ, ಉದ್ಯೋಗದಲ್ಲಿ ಮೀಸಲಾತಿ ಕಲ್ಪಿಸಿಕೊಟ್ಟ ಕರ್ನಾಟಕದ ಏಕೈಕ ದೊರೆ ಶ್ರೀ ನಾಲ್ವಡಿಯವರು. ಶೋಷಿತರ ಪರವಾದ ಜಸ್ಟೀಸ್ ಮಿಲ್ಲರ್ ಕಮಿಟಿಯ ವರದಿಯನ್ನು ಜಾರಿಗೊಳಿಸಿದ ಕಾರಣಕ್ಕಾಗಿ ನಾಲ್ವಡಿಯವರನ್ನು ವಿರೋಧಿಸಿ, ವಿಶ್ವೇಶ್ವರಯ್ಯನವರು ತಮ್ಮ ದಿವಾನ ಹುದ್ದೆಗೆ ರಾಜೀನಾಮೆ ನೀಡಿದ್ದು ಈಗ ಇತಿಹಾಸ. "... ಅಧಿಕಾರ ಜಾತೀಬಲ ಇರ್ತಕ್ಕವರು ಏನ್

ಬೇಕಾದ್ರೂ ಮಾಡಿ ಜಯಿಸ್ಕೋಬೋದು ಅಂತ ತಿಳ್ಕಂಡವ್ರೆ... ಆದ್ರೆ ಎಲ್ಲಾ ಕಾಲ್‌ಕೂ ಅದು ನಡೆಯಾಕಿಲ್ಲ..." (ಪು.-೨೭೮) ಎಂಬ ದ್ಯಾವಪ್ಪನ ಮಾತು ಈ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ.

ನಾಲ್ವಡಿಯವರಿಗೆ ಲಕ್ಷ್ಮೀಪುರದ ಜನರೊಟ್ಟಿಗೆ ಒಂದು ರೀತಿಯ ಭಾವನಾತ್ಮಕ ಸಂಬಂಧ. ಯಜಮಾನ್ ಸೂರಪ್ಪನವರ ಸ್ನೇಹಿತರಾಗಿದ್ದ ಮಹಾರಾಜರು, ಆಗಾಗ ವೇಷ ಮರೆಸಿಕೊಂಡು ಲಕ್ಷ್ಮೀಪುರಕ್ಕೆ ಬಂದು ಸೂರಪ್ಪನವರೊಟ್ಟಿಗೆ, ಊರಿನ ಜನರ ಬದುಕಿನ ಸಂಕಷ್ಟಗಳ ಕುರಿತು, ಆಡಳಿತ, ಸುಧಾರಣೆಗಳ ಬಗೆಗೆ ಚರ್ಚಿಸಿ ಸಲಹೆ-ಸೂಚನೆಗಳನ್ನು ಪಡೆಯುತ್ತಿದ್ದದ್ದೂ ಉಂಟು. ದಲಿತರ ಸಮಸ್ಯೆ-ಸವಾಲುಗಳನ್ನು ಪ್ರತ್ಯಕ್ಷವಾಗಿ ಕಂಡವರಾಗಿದ್ದ ನಾಲ್ವಡಿಯವರು, ಅವರಿಗೆ ಉದ್ಯೋಗಾವಕಾಶ ಕಲ್ಪಿಸುವ ಕಾರಣಕ್ಕಾಗಿ ಲಕ್ಷ್ಮೀಪುರದ ಅಕ್ಕಪಕ್ಕ ರೈಲ್ವೆ ವರ್ಕ್‌ಷಾಪ್, ಸಿಲ್ಕ್ ಫ್ಯಾಕ್ಟರಿ, ಗಂಧದೆಣ್ಣೆ ಕಾರ್ಖಾನೆಗಳನ್ನು ಸ್ಥಾಪಿಸಿದರು. ಜೊತೆಗೆ ಲಕ್ಷ್ಮೀಪುರದ ನಿವಾಸಿಗಳು ವೀಳ್ಯದೆಲೆ ಸಾಗುವಳಿ ಮಾಡಲು ನಾನೂರು ಎಕರೆ ಜಮೀನು ನೀಡಿ ಸಹಕರಿಸಿದರು. ಮುಂದೆ ಇದು 'ಅರಮನೆ ತೋಟ' ಎಂದೇ ಹೆಸರಾಯಿತು. ನಾಲ್ವಡಿಯವರ ಆಡಳಿತದ ಕಾಲದಲ್ಲಿ ಮೈಸೂರು ಸಂಸ್ಥಾನಕ್ಕೆ ಭೇಟಿನೀಡಿದ್ದ, ನಾಲ್ವಡಿಯವರ ಆಪ್ತ ಮಿತ್ರರೂ ಆಗಿದ್ದ ಬರೋಡಾ ಸಾಮ್ರಾಜ್ಯದ ದೊರೆ ಸಯ್ಯಾಜಿರಾವ್ ಗಾಯಕವಾಡರ ದಲಿತಪರ ಕಾರ್ಯಯೋಜನೆಗಳ ಪ್ರಭಾವದ ಹಿನ್ನೆಲೆಯಲ್ಲಿ ನಾಲ್ವಡಿಯವರು ಸಹಾ ಈ ಬಗೆಯ ಶೋಷಿತಪರ ಸುಧಾರಣೆಗಳನ್ನು ಕೈಗೊಳ್ಳಲು ಸಾಧ್ಯವಾಯಿತು. ಜಾತಿ ವ್ಯವಸ್ಥೆಯನ್ನು ಪ್ರಬಲವಾಗಿ ಖಂಡಿಸುತ್ತಿದ್ದ ನಾಲ್ವಡಿಯವರು, 'ಹೊಲೆಯರು' ಅಥವಾ 'ಅಸ್ಪೃಶ್ಯರು' ಎಂಬ ಹೆಸರನ್ನು ಬಹಿರಂಗವಾಗಿ ಬಳಸುವುದು ಶಿಕ್ಷಾರ್ಹ ಎಂಬುದಾಗಿ ದರ್ಬಾರ್‌ನಿಂದ ಆದೇಶ ಹೊರಡಿಸಿದರು. ಜೊತೆಗೆ 'ಆದಿಕರ್ನಾಟಕ' ಎಂಬ ಪದವನ್ನು ಚಾಲ್ತಿಗೆ ತಂದರು. ೨೦ನೇ ಶತಮಾನದ ಆರಂಭದಲ್ಲಿ ಮೈಸೂರಿನಲ್ಲಿ ಪ್ರಾರಂಭವಾದ 'ಪೌರಸಂಸ್ಥೆ'ಗೆ ಲಕ್ಷ್ಮೀಪುರದ ದಲಿತರನ್ನು ಮಾತ್ರ ಪೌರಕಾರ್ಮಿಕರನ್ನಾಗಿ ನೇಮಿಸಿಕೊಳ್ಳಬೇಕೆಂದು ಮೈಸೂರು ನಗರಸಭೆ ತೀರ್ಮಾನಿಸಿದಾಗ ಪ್ರಬಲವಾಗಿ ವಿರೋಧಿಸಿದವರು ನಾಲ್ವಡಿಯವರು. ಟೀಪುವಿನ ಫೌಜಿನಲ್ಲಿ ಕಮಾಂಡರ್ ಆಗಿದ್ದ ದೇವನಹಳ್ಳಿ ಬೆಂಕಿನವಾಬನ ಮೊಮ್ಮಗಳು, ಉತ್ತರಭಾರತದ ವಿಖ್ಯಾತ ಗಜಲ್ ಹಾಡುಗಾರ್ತಿಯಾಗಿದ್ದ ಪರ್ವಿನ್ ಬೇಗಂ ಅವರನ್ನು, ನಾಲ್ವಡಿಯವರು ದಸರಾ ಕಾಲದಲ್ಲಿ ಮೈಸೂರು ಅರಮನೆಯ ದರ್ಬಾರ್ ಸಭಾಂಗಣದಲ್ಲಿ ಜರುಗುತ್ತಿದ್ದ ನವರಾತ್ರಿಯ ಸಂಗೀತ ಸಮಾರಂಭಕ್ಕೆ ಪ್ರತಿವರ್ಷ ಕರೆಸಿ ಹಾಡಿಸುತ್ತಿದ್ದರು. ಇದು ನಾಲ್ವಡಿಯವರ ಜಾತ್ಯತೀತ-ಧರ್ಮಾತೀತ ವಿಶಾಲ ಮನೋಭಾವಕ್ಕೆ ಸಾಕ್ಷಿಯಾಗಿದೆ.

ನಾಲ್ವಡಿಯವರು ಅಧಿಕಾರಕ್ಕೆ ಬರುವ ಮುನ್ನ ದಲಿತರಿಗೆ ಅರಮನೆ ಪ್ರವೇಶ ಹಾಗೂ ಸವರ್ಣೀಯರ ಸ್ಪರ್ಶವನ್ನು ನಿಷೇಧಿಸಲಾಗಿತ್ತು. ನಿಯಮ ಮೀರಿದವರಿಗೆ ಘೋರ ಶಿಕ್ಷೆ ವಿಧಿಸಲಾಗುತ್ತಿತ್ತು. ಆದರೆ ನಾಲ್ವಡಿಯವರು ಅಧಿಕಾರಕ್ಕೆ ಬಂದು ಈ ಬಗೆಯ ಕಟ್ಟುಪಾಡುಗಳನ್ನು ಮುರಿಯುವುದರ ಜೊತೆಗೆ, ದಲಿತರಿಗೆ ಅರಮನೆ ಪ್ರವೇಶ ಹಾಗು ಸೈನಿಕ ಹುದ್ದೆಯಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸಿದರು. ಒಮ್ಮೆ ಯುವರಾಜ ಜಯಚಾಮರಾಜ ಒಡೆಯರ್ ಬಹದ್ದೂರ್ ಮೈಸೂರಿನ ದೊಡ್ಡಕೆರೆಯ ನೀರಿನಲ್ಲಿ ಮುಳುಗಿ ಸಾವಿನೊಟ್ಟಿಗೆ ಸೆಣಸಾಡುತ್ತಿರುವಾಗ ಲಕ್ಷ್ಮೀಪುರದ ಸತ್ಯಪ್ಪ ಸಮಯಕ್ಕೆ ಸರಿಯಾಗಿ ಬಂದು ಕಾಪಾಡುತ್ತಾನೆ. ಈ ವಿಷಯ 'ಅಯ್ಯಯ್ಯೋ... ಹೊಲೇರವ್ನು ರಾಜ್‌ಕುಮಾರನ್ ಮುಟ್‌ಬಿಟ್ಟ' ಇನ್ನು ಸತ್ಯಪ್ಪನಿಗೆ ಮರಣದಂಡನೆಯೆ ಗತಿ

ಎಂಬುದಾಗಿ ಇಡೀ ಮೈಸೂರು ಸಂಸ್ಥಾನವನ್ನೆ ವ್ಯಾಪಿಸುತ್ತದೆ. ಆದರೆ ನಾಲ್ವಡಿಯವರು ತಮ್ಮ ಪರಿವಾರದೊಡನೆ ಲಕ್ಷ್ಮೀಪುರಕ್ಕೆ ಬಂದು, ಯುವರಾಜರ ಪ್ರಾಣ ಕಾಪಾಡಿದ ಸತ್ಯಪ್ಪನಿಗೆ ಮೈಸೂರು ಪೇಟ ತೊಡಿಸಿ, ಅರಮನೆಯ ಇನಾಮು ರೂಪದಲ್ಲಿ ಜಮೀನು ನೀಡಿ ಸತ್ಕರಿಸಿ ತಮ್ಮ ಔದಾರ್ಯವನ್ನು ಮರೆಯುತ್ತಾರೆ.

ಸೋದರಿ ಕೃಷ್ಣ ರಾಜಮ್ಮಣ್ಣಿಯವರು ಕ್ಷಯರೋಗದಿಂದ ತೀರಿಕೊಂಡಾಗ ಬಹಳವಾಗಿ ನೊಂದುಕೊಂಡ ನಾಲ್ವಡಿಯವರು, ಜನಸಾಮಾನ್ಯರಿಗೆ ಈ ಬಗೆಯ ನೋವು ಬರಬಾರದೆಂದು, ತಮ್ಮ ಸೋದರಿಯ ನೆನಪಿನಲ್ಲಿ ಪ್ರಿನ್ಸಸ್ ಕೃಷ್ಣರಾಜಮ್ಮಣ್ಣಿ ಕ್ಷಯರೋಗ ಆಸ್ಪತ್ರೆ ಅಥವಾ ಪಿ.ಕೆ. ಸ್ಯಾನಿಟೋರಿಯಂ ಸ್ಥಾಪಿಸಿದರು. ಹೀಗೆ ನಾಲ್ವಡಿಯವರು ಪ್ರಜೆಗಳ ಹಿತದೃಷ್ಟಿಯಿಂದ ಊರ್ಜಿತಗೊಳಿಸಿದ ಕೃಷ್ಣರಾಜ ಆಸ್ಪತ್ರೆ (ದೊಡ್ಡಾಸ್ಪತ್ರೆ- ಕೆ.ಆರ್. ಆಸ್ಪತ್ರೆ), ಕೃಷ್ಣರಾಜಸಾಗರ ಅಣೆಕಟ್ಟು, ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು ವಿಶವವಿದ್ಯಾನಿಲಯ - ಈ ಎಲ್ಲ ಪ್ರಗತಿಪರ ಕಾರ್ಯಸಾಧನೆಗಳು ಅವರೊಬ್ಬ ಜನಮುಖಿ ಮತ್ತು ಸಮಾಜಪರ ರಾಜರಾಗಿದ್ದರು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಸ್ವಾತಂತ್ರ್ಯಪೂರ್ವದಲ್ಲೆ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಅನುಷ್ಠಾನಗೊಳಿಸಿದ ಅಪರೂಪದ ಮಹಾರಾಜ ನಾಲ್ವಡಿಯವರು ಎಂಬುದನ್ನು ಲೇಖಕರು ಹಲವು ನಿದರ್ಶನಗಳ ಮೂಲಕ ಪ್ರಾಮಾಣಿಕವಾಗಿ ದಾಖಲಿಸಿದ್ದಾರೆ. ಈ ಮೌಲ್ಯಗಳು ಇಂದಿನ ರಾಜಕಾರಣಿಗಳಿಗೆ ಆದರ್ಶವಾಗಬೇಕಿದೆ. ಅಂದರೆ ವರ್ತಮಾನವು ಭೂತದಿಂದ ಪಾಠ ಕಲಿಯುತ್ತಲೇ ಭವಿಷ್ಯವನ್ನು ರೂಪಿಸಿಕೊಳ್ಳಬೇಕಿದೆ.

ಇತಿಹಾಸವನ್ನು ತಿರುಚಿ ಬರೆಯುವ ಮನುವಾದಿ ಪ್ರವೃತ್ತಿ ನೆನ್ನೆ-ಮೊನ್ನೆಯದಲ್ಲ. ಆರ್ಯ ಸಂಸ್ಕೃತಿಯ ಮೂಲಗುಣವಾಗಿರುವ ಇದಕ್ಕೆ ಬಹುದೊಡ್ಡ ಇತಿಹಾಸವೇ ಇದೆ. ಹಾಗೆಯೇ ಒಡೆದು ಆಳುವ ನೀತಿ ಸಂಹಿತೆಯನ್ನು ಬ್ರಿಟೀಷರಿಗೆ ಪರಿಚಯಿಸಿದವರು; ಇಡೀ ಭಾರತವನ್ನು ಬ್ರಿಟೀಷರ ಗುಲಾಮದೇಶವನ್ನಾಗಿ ರೂಪಿಸಿದವರು ಕೂಡ ಮನುವಾದಿಗಳೆ. ಇಂದಿಗೂ ಟೀಪು ಸುಲ್ತಾನನನ್ನು ಧರ್ಮಾಂಧನನ್ನಾಗಿ, ಮತಾಂಧನನ್ನಾಗಿ, ಕೋಮುವಾದಿಯನ್ನಾಗಿ ಜನರಲ್ಲಿ ನಂಬಿಕೆ ಹುಟ್ಟಿಸಲು ಹೆಣಗುತ್ತಿರುವ ಮನುವಾದಿಗಳಿಗೆ ಲೇಖಕರು, ಟೀಪುವಿಗೆ ಸಂಬಂಧಿಸಿದ ಕೆಲವು ಚಾರಿತ್ರಿಕ ದಾಖಲೆಗಳ ಮುಖೇನ ಈ ಕಾದಂಬರಿಯಲ್ಲಿ ಸೂಕ್ತ ಉತ್ತರ ನೀಡಿದ್ದಾರೆ. ಜೊತೆಗೆ ಟೀಪುವಿನ ಜಾತ್ಯತೀತ ವ್ಯಕ್ತಿತ್ವವನ್ನು ಸಕಾರಣವಾಗಿ ದಾಖಲಿಸಿದ್ದಾರೆ. ಟೀಪು, ಸಂಪ್ರದಾಯವಾದಿಗಳು ಹೇಳುವ ಹಾಗೆ ಮತಾಂಧನೆ ಆಗಿದ್ದ ಪಕ್ಷದಲ್ಲಿ, ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯ ನಾಶವಾಗದೆ ಉಳಿದಿದ್ದಾದರು ಹೇಗೆ? ಇದೇ ಪುರೋಹಿತಶಾಹಿವರ್ಗ ಟೀಪುವನ್ನು ರಂಗನಾಥ ಸ್ವಾಮಿಯ ಅವತಾರ ಎಂದು ಕರೆದದ್ದರ ಮೂಲ ಉದ್ದೇಶವೇನು? ಈ ಪ್ರಶ್ನೆಗಳಿಗೆ ಯತಾಸ್ಥಿತಿವಾದಿಗಳು ಉತ್ತರಿಸಬೇಕಿದೆ. ಜೊತೆಗೆ ಟೀಪು ಧರ್ಮಾಂಧನೆ ಆಗಿದ್ದರೆ, ಮರಾಠಿ ಶತ್ರುಗಳ ದಾಳಿಯಿಂದ ಶೃಂಗೇರಿಯ ಬ್ರಾಹ್ಮಣ ಮಠವನ್ನು ರಕ್ಷಿಸುತ್ತಿರಲಿಲ್ಲ. ತನ್ನ ಆಸ್ಥಾನದಲ್ಲಿ ಉನ್ನತ ಅಧಿಕಾರದಲ್ಲಿದ್ದ, ಅನ್ಯಜಾತಿಯವರಾದ ದೀವಾನ್ ಪೂರ್ಣಯ್ಯ, ತಿರುಮಲರಾವ್, ನಾರಾಯಣರಾವ್, ಲಿಂಗಣ್ಣಯ್ಯ ಮತ್ತು ಗೂಢಾಚಾರಿ ಸೂರಪ್ಪರನ್ನು ಕಿತ್ತುಹಾಕಿ ಆ ಸ್ಥಾನಕ್ಕೆ ಮುಸಲ್ಮಾನರನ್ನು ನೇಮಿಸಬಹುದಿತ್ತು. ಆದರೆ ಟೀಪು ಹಾಗೆ ನಡೆದುಕೊಳ್ಳದಿರುವುದು ಆತನ ಜಾತ್ಯಾತೀತ ಹಾಗು ಧರ್ಮಾತೀತ ಮನೋಧರ್ಮಕ್ಕೆ ನಿದರ್ಶನವಾಗಿದೆ. ಟೀಪು ತನ್ನ ಅಧಿಕಾರವಧಿಯಲ್ಲಿ ಜಾರಿಗೆ ತಂದ ಜಮೀನ್ದಾರಿ

ಪದ್ಧತಿಯ ರದ್ಧತಿ, ಜೀತಪದ್ಧತಿಯ ನಿಷೇಧ, ಮಧ್ಯಪಾನ ನಿರೋಧ ಮುಂತಾದ ಪ್ರಗತಿಪರ ಜನಾನುರಾಗಿ ಸುಧಾರಣೆಗಳನ್ನು ಜಾರಿಗೊಳಿಸಿದ್ದನ್ನು ಲೇಖಕರು ದಾಖಲಿಸಿದ್ದಾರೆ.

ಒಮ್ಮೆ ಭದ್ರಕೋಟೆಯ ಪಕ್ಕದ 'ಚಂದ್ರೋದ್ಯಾನ' ವನದಲ್ಲಿ ಟೀಪು ಮತ್ತು ಸಿಪಾಯಿ ಸೂರಪ್ಪ ಗಾಢವಾಗಿ ಚರ್ಚಿಸುತ್ತ ನಡೆಯುತ್ತಿರುವಾಗ, ಟೀಪುವಿನ ಮೇಲೆ ಹಾರಿಬಂದ ಚಿರತೆಯನ್ನು, ಸೂರಪ್ಪ ಚಾಣಾಕ್ಷತನದಿಂದ ಕೊಂದುಹಾಕಿದ. ತನ್ನನ್ನು ಪ್ರಾಣಾಪಾಯದಿಂದ ಪಾರುಮಾಡಿದ ಹಾಗು ಬ್ರಿಟೀಷರ ವಿರುದ್ಧ ಮಂಗಳೂರು ಯುದ್ಧದಲ್ಲಿ ಸೂರಪ್ಪ ತೋರಿದ ಪರಾಕ್ರಮವನ್ನು ಮೆಚ್ಚಿದ ಟೀಪು, ಶ್ರೀರಂಗಪಟ್ಟಣದ ಪಶ್ಚಿಮವಾಹಿನಿ ಮೇಲ್ದಂಡೆಯ ಬಲಭಾಗದ ನೂರು ಎಕರೆ ಗದ್ದೆಯನ್ನು ಸೂರಪ್ಪನಿಗೆ ಇನಾಮತಿಯಾಗಿ ನೀಡಿದ. ಬ್ರಿಟೀಷರನ್ನು ಭಾರತ ಬಿಟ್ಟು ತೊಲಗಿಸಲು ಪಣತೊಟ್ಟು ಹೋರಾಡುತ್ತಲೇ ತನ್ನ ಪ್ರಾಣವನ್ನೆ ಬಲಿಕೊಟ್ಟ ಏಕೈಕ ಮುಸಲ್ಮಾನ ದೊರೆ ಟೀಪು. ಬ್ರಿಟೀಷರೊಟ್ಟಿಗೆ ಸಖ್ಯ ಬೆಳೆಸಿದ್ದ ಮೈಸೂರು ಸಂಸ್ಥಾನದ ಮಹಾರಾಜನ್ನೆ ಟೀಕಿಸುತ್ತಿದ್ದ ಟೀಪು, ಬ್ರಿಟಿಷರನ್ನು ಹೊಡೆದೋಡಿಸುವ ಸಲುವಾಗಿ ಫ್ರಾನ್ಸ್ ದೇಶದ ಕ್ರಾಂತಿಕಾರಿ ನೆಪೋಲಿಯನ್ ಬೋನಪಾರ್ಟೆಯೊಟ್ಟಿಗೆ ಸೇನಾ ಒಪ್ಪಂದ ಮಾಡಿಕೊಂಡದ್ದು ಉಂಟು. ಆದರೆ ಟೀಪುವಿನ ಆಸ್ಥಾನದವರೆ ಆದ ತಿರುಮಲರಾವ್, ನಾರಾಯಣರಾವ್, ಮೀರ್‌ಸಾದಿಕ್ ಹಾಗು ಕಾದಿರ್‌ಖಾನ್ ಅವರುಗಳು ಬ್ರಿಟೀಷರೊಟ್ಟಿಗೆ ಸೇರಿ ಎಸಗಿದ ರಾಜದ್ರೋಹದ ಪರಿಣಾಮ ಟೀಪುವಿನ ಸಾಮ್ರಾಜ್ಯ ಪತನಗೊಂಡಿತು. ಮರಿಚಾಮಯ್ಯನವರು ಹೇಳುವ ಹಾಗೆ : "... ಅವರವರ ಜಾತಿ ಮತುವರ್ಜಿಗಳು ದೇಶದ ಸ್ವಾತಂತ್ರ್ಯಕ್ಕಿಂತ್ಲೂ ಇಲ್ಲಿ ಮುಖ್ಯ ಆಗಿದೆ." (ಪು.-೨೭೬) ಎಂಬ ಮಾತು ಭಾರತದಂತಹ ಜಾತಿ ಸಮಾಜದಲ್ಲಿ ಕಟುವಾಸ್ತವದಿಂದ ಕೂಡಿದ ಸಾರ್ವಕಾಲಿಕ ಸತ್ಯವಾಗಿದೆ. ಈ ಎಲ್ಲಾ ಚಾರಿತ್ರಿಕ ಘಟನೆಗಳನ್ನು ಕಾದಂಬರಿ ಸವಿವರವಾಗಿ ಪರಿಚಯಿಸುತ್ತದೆ.

ಹಿಂದೂ-ಮುಸ್ಲಿಂ ರಾಜಮನೆತನದವರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗು ಟೀಪು ಸುಲ್ತಾನರ ಶೋಷಿತ-ಸಮಾಜಪರವಾದ ಮನುಷ್ಯ ಸಂಬಂಧದ ಆಸ್ಥೆಯನ್ನು ಮನೋಜ್ಞವಾಗಿ ಚಿತ್ರಿಸುವ ಕಾದಂಬರಿಯು, ಮೂರು ತಲೆಮಾರಿನ ದಲಿತ ಬದುಕನ್ನು ಸಮರ್ಥವಾಗಿ ನಿರೂಪಿಸುತ್ತದೆ. ಕಾದಂಬರಿಯ ನಾಯಕನಾದ ಸೂರಪ್ಪನ ಪಾತ್ರ, ವ್ಯಕ್ತಿತ್ವ ವಿಕಸನದ ಮಾದರಿಯಾಗಿ ಅಭಿವ್ಯಕ್ತಗೊಂಡಿದೆ. ಟೀಪುವಿನ ಆಪ್ತವಲಯದ ಗೂಢಾಚಾರಿಯಾಗಿದ್ದ ವೀರಸಿಪಾಯಿ ಸೂರಪ್ಪ, ತ್ಯಾಗ, ಪ್ರಾಮಾಣಿಕತೆ, ಸ್ವಾಭಿಮಾನದ ಸಂಕೇತವಾಗಿ; ಶತ್ರುಗಳ ಕೊಲೆಯ ಸಂಚಿನಿಂದ ಮೈಸೂರಿನ ಮಹಾರಾಣಿ ಲಕ್ಷ್ಮಮ್ಮಣ್ಣಿಯವರನ್ನು ಪಾರುಮಾಡಿದ ಪರಿಣಾಮ ಟೀಪುವಿನ ತೋಪಿಗೆ ಬಲಿಯಾಗುತ್ತಾನೆ. ಹೆಣ್ಣಿನ ಬಗೆಗೆ ಅಪಾರ ಗೌರವ ಇರಿಸಿಕೊಂಡಿದ್ದ ಸಿಪಾಯಿ ಸೂರಪ್ಪ ಒಮ್ಮೆ, ದಿವಾನ್-ಪೂರ್ಣಯ್ಯನವರ ಮಗಳಾದ ಕಾವೇರಿಯನ್ನು ಖಾದಿರ್‌ಖಾನ್‌ನ ಬಲತ್ಕಾರದಿಂದ ಪಾರುಮಾಡಿ ಟೀಪುವಿನ ಸಹಬಾಷ್‌ಗಿರಿಗೆ ಪಾತ್ರನಾದದ್ದುಂಟು.

ನಾಲ್ವಡಿಯವರ ಆಪ್ತ ಸ್ನೇಹಿತನೂ, ಸಿಪಾಯಿ ಸೂರಪ್ಪನ ಮೊಮ್ಮಗನೂ ಆದ ಯಜಮಾನ್ ಸೂರಪ್ಪನ ಪಾತ್ರ, ಮನುಷ್ಯಸಹಜ ದೌರ್ಬಲ್ಯಗಳನ್ನು ಮೀರಿ ಪರಿಪೂರ್ಣ ವ್ಯಕ್ತಿತ್ವವಾಗಿ ಬೆಳೆಯುವ; ಸದಾ ಸಮುದಾಯದ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವ; ಕೌಟುಂಬಿಕ ಹಾಗೂ ಸಮುದಾಯದ ಪ್ರಶ್ನೆ ಎದುರಾದಾಗ ಸಮುದಾಯದ ಪರವಾಗಿಯೇ ನಿಲ್ಲುವ ಜವಾಬ್ದಾರಿಯುತ ಪಾತ್ರವಾಗಿ ಅನಾವರಣಗೊಂಡಿದೆ. ನಾಲ್ವಡಿಯವರು ಸೂರಪ್ಪನನ್ನು ತಮ್ಮ ಸೈನ್ಯದ ಸಿಪಾಯಿ ನೌಕರಿಗೆ

ಆಹ್ವಾನಿಸಿದಾಗ: "ಮಾಸ್ವಾಮಿ.... ನಾನಿನ್ನೂ ಮನಸ್‌ನೇ ಆಗಿಲ್ಲ. ನಾ ಮನಸ್‌ನಾದ್ ಮ್ಯಾಲೆ ನಮ್ ಸಂಸ್ತಾನ್‌ಕೆ ನಾನು ಏನ್ ತ್ಯಾಗ ಮಾಡ್‌ಬೇಕೊ ಮಾಡ್ತಿನಿ ಮಾಸ್ವಾಮಿ..." (ಪು-೧೦೭) ಎಂದು ಹೇಳುವ ಸೂರಪ್ಪನ ಮಾತಿನಲ್ಲಿ, ತನ್ನನ್ನು ತಾನೇ ಆತ್ಮವಿಮರ್ಶೆಗೊಡ್ಡಿಕೊಳ್ಳುವ ಪ್ರಾಮಾಣಿಕತೆ ಇದೆ. ಲಕ್ಷ್ಮೀಪುರದ ಜನ ಕಾಲರ ಹಾಗೂ ಬರಗಾಲದ ತೀವ್ರತೆಯಲ್ಲಿ ತತ್ತರಿಸಿ ಹೋಗಿದ್ದಾಗ, ಊರೊಟ್ಟಿನ ಯಜಮಾನ ಸ್ಥಾನದಲ್ಲಿ ನಿಂತು ಸೂರಪ್ಪ ಹೇಳುವ: "ನೋಡ್ರಪ್ಪ, ವುಟ್ಟು ನಮ್ ಕೈಲಿಲ್ಲ, ಸಾವೂ ನಮ್ ಕೈಲಿಲ್ಲ. ಆದ್ರೆ ಬದುಕ್ ಮಾತ್ರ ನಮ್ ಕೈಲಿದೆ. ಬರಿ ಕಾಲ್‌ರಾ, ಬರ್ಗಾಲ ಮಾತ್ರ ನಮ್ ವೈರಿಗಳಲ್ಲ, ನಮ್ ಸುತ್ತಮುತ್ತ ಇರ್ತಕ್ಕಂತ ಕಪಟ, ತಟವಟಗಳು ನಮ್ ವೈರಿಗಳೆ. ಆದ್ರೆ, ಕಸ್ಟ್ ಕಾಲ್ದಲ್ಲಿ ಎಲ್ಲಾ ಸಾರಸ್ಕಂಡ್ ಬದುಕ್‌ಬೇಕು ಕಣ್ರಪ್ಪsss..." (ಪು-೨೨೫) —ಎಂಬ ಮಾತು, ಬದುಕಿನಲ್ಲಿ ಸೋತು ಹೋದವರಿಗೆ ಆತ್ಮಸ್ಥೈರ್ಯವನ್ನು ತುಂಬುವ; ಅವರ ಬದುಕನ್ನು ಪರಿಪೂರ್ಣಗೊಳಿಸುವ ಜೀವಚೈತನ್ಯವುಳ್ಳದ್ದಾಗಿದೆ.

ಯಜಮಾನ್ ಸೂರಪ್ಪ ಸದಾ ಮನುಷ್ಯರ ನಡುವೆ ಸಾಮರಸ್ಯದ ಬದುಕಿಗಾಗಿ ಹಪಹಪಿಸುತ್ತಿದ್ದವನು. ಹಿಂದೂ-ಮುಸಲ್ಮಾನರ ಸೌಹಾರ್ದ ಸಂಬಂಧವನ್ನು ಮುರಿದು ಅವರಲ್ಲಿ ಕೋಮುವಾದಿ ಸಂಘರ್ಷವನ್ನು ಸೃಷ್ಟಿಸುವ ಸಲುವಾಗಿ, ಆದಂಖಾನ ಮಸೀದಿಯೊಳಗೆ ಸತ್ತ ಹಂದಿಯನ್ನು ಹಾಕಿಸಿದ ಜಾತಿವಾದಿ ಲಾಯರ್ ನೀಲಕಂಠಶಾಸ್ತ್ರಿ, ಕೊಪ್ಪಲೂರ್ ಕೆಂಚೇಗೌಡ ಹಾಗೂ ಶಿವಪುರದ ಚಿಕ್ ಬಸವಾರಾಧ್ಯರ ಷಡ್ಯಂತ್ರವನ್ನು ಸೂರಪ್ಪ ಜಾಣತನದಿಂದ ಬಗ್ಗುಬಡಿಯುತ್ತಾನೆ. ಮುಂದೆ ಆಗಬಹುದಾಗಿದ್ದ ರಕ್ತಪಾತವನ್ನು ತಡೆಯುತ್ತಾನೆ. ಜಾತಿವಾದಿಗಳ ಕುಟಿಲತೆಯನ್ನು ಬೆಂಬಲಿಸುತ್ತ ಕೊನೆಗೆ ಅವರಿಂದಲೇ ಕೊಲೆಯಾದ ಸಹೋದರ ಗಂಗಾಧರಯ್ಯನ ಬಗೆಗೆ ಸ್ವಲ್ಪವೂ ಮರುಗುವುದಿಲ್ಲ. ಜನವಿರೋಧಿ ಚಟುವಟಿಕೆಯಲ್ಲಿ ಭಾಗಿಯಾದವ ಒಡಹುಟ್ಟಿದವನಾದರು ಅಪರಾಧಿಯೆ ಎಂಬುದು ಸೂರಪ್ಪನ ಸ್ಪಷ್ಟ ತಿಳುವಳಿಕೆ. ವರದಕ್ಷಿಣೆ ಹಾಗೂ ಬಂಜೆತನದ ಕಾರಣಕ್ಕಾಗಿ ಗಂಡನ ಮನೆಯವರ ಕಿರುಕುಳ ತಾಳಲಾರದೆ ಶ್ರೀರಂಗಪಟ್ಟಣದ ಹೊಳೆಯಲ್ಲಿ ಬಿದ್ದು ಆತ್ಮಹತ್ಯೆಗೆ ಪ್ರಯತ್ನಿಸಿದ ಗೌರಮ್ಮನನ್ನು ಸಾವಿನಿಂದ ಪಾರುಮಾಡಿದ ಹೊಸಬದುಕನ್ನೆ ಕಲ್ಪಿಸಿಕೊಡುತ್ತಾನೆ. ಆದರೆ ಕೊನೆಗೆ ಗೌರಮ್ಮ ತನಗೆ ಬದುಕು ಕೊಟ್ಟ ಸೂರಪ್ಪನ ಬದುಕನ್ನೆ ಕೊಲ್ಲಲು ಗಂಗಾಧರಯ್ಯನೊಟ್ಟಿಗೆ ಸಂಚುಹೂಡಿ ತಾನೇ ಕಾಲರಬೇನೆಗೆ ಬಲಿಯಾಗುತ್ತಾಳೆ. ಗೌರಮ್ಮನ ಈ ಬಗೆಯ ಮನಃಪರಿವರ್ತನೆಯ ಹಿಂದಿರುವ ಕ್ರೌರ್ಯದ ನಿಗೂಢತೆ ಕಾದಂಬರಿಯಲ್ಲಿ ಯಕ್ಷಪ್ರಶ್ನೆಯಾಗಿಯೇ ಉಳಿಯುತ್ತದೆ. ಹೀಗೆ ತನ್ನವರಿಂದಲೇ ನೋವನ್ನುಭವಿಸಿದರೂ ಅವರಿಗೆ ಯಾವುದೇ ಕೇಡು ಬಯಸದ ಸೂರಪ್ಪ ದಿವ್ಯ ಮೌನದಿಂದಲೇ ಆ ಎಲ್ಲ ಸಂಕಟಗಳನ್ನು ನುಂಗಿಕೊಳ್ಳುತ್ತಾನೆ. 'ದ್ವೇಷಿಸುವವರನ್ನು ಪ್ರೀತಿಸುವ ಉದಾತ್ತ ಗುಣದ ವ್ಯಕ್ತಿತ್ವದವನಾಗಿ ಸೂರಪ್ಪ ಉಳಿಯುತ್ತಾನೆ.

ಬರಗಾಲದ ಪರಿಣಾಮ ಹಸಿವಿನಿಂದ ಕಂಗಾಲಾಗಿದ್ದ ಲಕ್ಷ್ಮೀಪುರದ ಜನರಿಗೆ ಕೊಡಗಿನ ಕಮ್ಯೂನಿಸ್ಟ್ ಕಾವೇರಪ್ಪ ತಾವು ಬೆಳೆದ ಇನ್ನೂರು ಮೂಟೆ ಕೆಂಪು ಜೋಳವನ್ನು ತಂದು ಹಂಚಿ ಆಸರೆಯಾಗುತ್ತಾರೆ. ಸ್ವಲ್ಪ ದಿನ ಕಳೆದ ನಂತರವೂ ಕಾವೇರಪ್ಪ ಜೋಳ ಹಂಚಲು ಮುಂದಾಗುತ್ತಾರೆ. ಆಗ ಸೂರಪ್ಪನವರು: "ಕಾವೇರಪ್ಪನೋರೇ, ಕೊಪ್‌ಲೂರ್ ಕೆಂಚೇಗೌಡ ಒಬ್ನೇ ಒಂದ್ ಜಾತಿಯಲ್ಲ... ಅವರಲ್ಲೂ ಬಡವ್‌ರುಂಟು. ಅತ್ವ ಸಿವ್‌ಪುರದ್ ಚಿಕ್ಕಬಸವಾರಾಧ್ಯ ಒಬ್ನೇ ಒಂದು ಜಾತಿಯಲ್ಲ. ಅಲ್ಲೂ ಬಡವರುಂಟುsss... ಯಾರ್ದೋ ಮ್ಯಾಲಿನ್ ಸೇಡನ್ನ ಇನ್ಯಾರ್ದೋ

ಪ್ಯಾಲಿ ತೀರಿಸ್ಗಳದು ನ್ಯಾಯವೇ ಅಲ್ಲ. ಬಡತನಕ್ಕೂ ಜಾತಿ ಇಲ್ಲ. ಸಿರಿತನಕ್ಕೂ ಜಾತಿ ಇಲ್ಲ. ಅದ್ರಿಂದ ಈ ನೂರ್ ಮೂಟೆ ಜ್ವಾಳಾನ ಒಕ್ಕಲಗೇರಿ; ಸಾಬರ್‌ಕೇರಿ ಮುಂತಾದ ಬಡಬಗ್ಗರ್‌ಗೆಲ್ಲ ದಯ್‌ಬಿಟ್ಟು ಹಂಚಿಸ್‌ಬಿಡಿ. ಯಾಕೆ ಅಂದ್ರೆ, ಬಂದಿರಾದು ಬರ್ಗಾಲ, ಹಸಿದ ಹೊಟ್ಟೆ." (ಪು: ೨೩೦-೨೩೧) ಎಂದು ಹೇಳುತ್ತಾನೆ. ಈ ಪ್ರಸಂಗವು ಯಜಮಾನ್ ಸೂರಪ್ಪನವರ ಜಾತಿಮೀರಿದ ಮಾನವೀಯ ಮೌಲ್ಯವನ್ನು; ಕಾವೇರಪ್ಪನವರಿಗಿದ್ದ ಬಡವರ ಬಗೆಗಿನ ಕನಿಕರವನ್ನು ಬಿಂಬಿಸುತ್ತದೆ.

"ಸಾವಿಗೆದರದಿರು ನೋವಿಗೆದರದಿರು ಲೋಕಕಿದ ತೋರು
ಸಾವನೆದುರಿಸಿ ನಿಲ್ಲಲು ಮತ್ತೆ ನೀನೆಂದೂ ಮರೆಯದಿರು
ಹೆದರಿ ಓಡಿದರೆ ಸಾವಿರ ದಿನದ ನಿನ ಬಾಳು, ಬರೀ ಮೂರು ಹೋಳು
ಅತ್ತೇನು ಫಲ ಮತ್ತೇನು ಫಲ ಬದುಕಿನೊಡನೆ ನಡೆವುದೇ ಸಾವು
ಹೊತ್ತು ಮರೆದರೂ ಇಲ್ಲ ಫಲ ಬದುಕು ಸಾವು ಸಮನೆಂದರೆ ಇಲ್ಲ ನೋವು
ನಿತ್ಯ ಸಾವಿಗೆ ಅತ್ತು ಕರೆದರೆ ಕರಗಿ ಬರೀ ಕಣ್ಣೀರು ನಿನ್ನಾತ್ಮಬಲವು
ಹೆದರಬೇಡ ನೀನು ಬೆದರಬೇಡ ನೀನು
ಚದರದಿರು ಆತ್ಮವೊಂದೆ ಕೊನೆ ಸತ್ಯ ತಾನು
ಜೀವ ಪ್ರೀತಿಯಲ್ಲಿ ಸ್ವರ್ಗವದು ನಿನ ಕಾಲ ಬಳಿ ತಾನು" (ಪು -೨೪೩)

ಲಾವಣಿ ವಿದ್ವಾನ್ ಕವಿ ಮರಿಚಾಮಯ್ಯನವರು ಹೇಳುವ ಈ ಲಾವಣಿಯು ಕಾಲರ ತಂದೊಡ್ಡಿದ ಸಾವು-ನೋವಿಗೆ ನಲುಗಿ ಹೋಗಿದ್ದ ಲಕ್ಷ್ಮೀಪುರದ ಜನರಿಗೆ ಆಶಾಕಿರಣವೂ, ಭರವಸೆಯ ಬದುಕಿನ ತತ್ವಸಿದ್ಧಾಂತವೂ ಆಗಿದೆ. ಕವಿ ಮರಿಚಾಮಯ್ಯ, ಸೋಸಲೆ ಸಿದ್ದಪ್ಪ, ಜನಪದ ಗಾಯಕ ಓರಿಯಪ್ಪ, ರಂಗನಟ ಕೆಂಪಸಿದ್ದಯ್ಯ ಅವರು ಶೋಷಿತ ಸಮುದಾಯದ ಸಾಂಸ್ಕೃತಿಕ ಪ್ರತಿಮೆಗಳಾಗಿ ಕಾದಂಬರಿಯಲ್ಲಿ ಚಿತ್ರಿತಗೊಂಡಿದ್ದಾರೆ. ನಾಲ್ವಡಿಯವರು ಇವರ ಕಲೆಗೆ ತಲೆದೂಗಿ ದಸರಾ ಉತ್ಸವದ ಸಂದರ್ಭದಲ್ಲಿ ಪ್ರಶಸ್ತಿ ಪತ್ರ ನೀಡಿ ಗೌರವಿಸಿದ್ದಾರೆ. ಇಂತಹ ಅಸಂಖ್ಯಾತ ಅಜ್ಞಾತ ಪ್ರತಿಭೆಗಳು ಶೋಷಿತ ಸಮುದಾಯದಲ್ಲಿ ಹುದುಗಿರುವುದನ್ನು ಕಾಣಬಹುದು.

ಕಲ್ಯಾಣಪ್ಪನ ಕಥೆ, ವೀರಸಿಪಾಯಿ ಸೂರಪ್ಪ, ನಾಲ್ವಡಿ ಕೃಷ್ಣರಾಜ ಒಡೆಯ-ಮುಂತಾದ ಲಾವಣಿಗಳನ್ನು ಸ್ವತಃ ತಾವೇ ಕಟ್ಟಿ ಹಾಡುತ್ತಿದ್ದ ಮರಿಚಾಮಯ್ಯನವರು ವೃತ್ತಿಯಲ್ಲಿ ನಾಟಿವೈದ್ಯರು. ಲಕ್ಷ್ಮೀಪುರದ ಜನ ಕಾಲರ ಬೇನೆಯಿಂದ ನರಳುವಾಗ ಇವರು ಬಿಳಿಗಿರಿರಂಗನ ಬೆಟ್ಟಕ್ಕೆ ನಡೆದುಕೊಂಡೆ ಹೋಗಿ ಕಾಡು-ಮೇಡು ಅಲೆದು ಸಂಜೀವಿನಿ ಬೇರನ್ನು ಹುಡುಕಿ ತಂದು ಜನರಿಗೆ ಕೊಟ್ಟು ಹಲವು ಜೀವಗಳನ್ನು ಕಾಪಾಡುತ್ತಾರೆ. ಕಾಲರ ರೋಗದ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಚರ್ಚಿಸಲು ನಾಲ್ವಡಿಯವರು ಅರಮನೆಯ ದರ್ಬಾರ್ ಸಭಾಂಗಣದಲ್ಲಿ ಕರೆದಿದ್ದ ಸಭೆಯಲ್ಲಿ ಮರಿಚಾಮಯ್ಯನವರು ಮಾತನಾಡುತ್ತ: "ನಮ್ಮ ತಲೆಮಾರಿನ ನಂತರದ ನಮ್ಮ ಮಕ್ಕಳಿಗೆ ಶಿಕ್ಷಣವೆಂಬುದು ಈಗ ಅತ್ಯವಶ್ಯಕವಾಗಿದೆ. ಆದ್ದರಿಂದ ನಮ್ಮೂರಿಗೊಂದು ಪ್ರೌಢಶಾಲೆಯನ್ನು ಮಂಜೂರುಮಾಡಬೇಕೆಂದು" (ಪು. ೬೪೮) ನಾಲ್ವಡಿಯವರಿಗೆ ಮನವಿ ಸಲ್ಲಿಸುತ್ತಾರೆ. ಮರಿಚಾಮಯ್ಯನವರು ಕಾಲರದ ಸಾವು-ನೋವುಗಳನ್ನು ಕಣ್ಣಾರೆ ಕಂಡವರಾಗಿದ್ದರೂ ಅದರ ನಿಯಂತ್ರಣದ ವಿಷಯಕ್ಕೆ ಬದಲಾಗಿ, ಶಿಕ್ಷಣದ ವಿಚಾರಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಾರೆ. ಅಂದರೆ, ಕಾಲರದಂತಹ ಪ್ರಕೃತಿ ವಿಕೋಪಗಳಿಗಿಂತ ಮನುಷ್ಯನೊಳಗಿನ ಅಜ್ಞಾನ-ಅಂಧಕಾರದ ದುಷ್ಪರಿಣಾಮ ತುಂಬಾ ಭೀಕರವಾದದ್ದು

ಎಂಬುದನ್ನು ಬಲ್ಲವರಾಗಿದ್ದ ಮರಿಚಾಮಯ್ಯನವರು, ಶಿಕ್ಷಣಕ್ಕೆ ಕಾಲರವನ್ನೂ ಒಳಗೊಂಡ ದೈಹಿಕ ಹಾಗೂ ಮಾನಸಿಕ ರೋಗವನ್ನು ತಡೆಯಬಲ್ಲ ಶಕ್ತಿ ಇದೆ ಎಂಬುದನ್ನರಿತ ತತ್ವಜ್ಞಾನಿಯಾಗಿ ಕಾಣುತ್ತಾರೆ. ಒಮ್ಮೆ ನಾಲ್ವಡಿಯವರು: "ಬರೋಡ ಸಂಸ್ಥಾನದ ಶ್ರೀಮಾನ್ ಮಹಾರಾಜರಾದ ಸಯ್ಯಾಜಿರಾವ್ ಗಾಯಕ್‌ವಾಡ್‌ರವರು, ಮಹಾರಾಷ್ಟ್ರದ ಮಹರ್ ಸೈನಿಕರೊಬ್ಬರ ಮಗನಾದ ಅಂಬೇಡ್ಕರ್ ಎಂಬ ಯುವಕನನ್ನು ಉನ್ನತ ಶಿಕ್ಷಣಕ್ಕಾಗಿ ಅಮೆರಿಕಾ ದೇಶಕ್ಕೆ ಕಳುಹಿಸಿರುವಂತೆ, ಲಕ್ಷ್ಮೀಪುರದಲ್ಲೂ ಅಂತಹ ಒಬ್ಬ ಯುವಕನನ್ನು ಸಂಸ್ಥಾನದ ವೆಚ್ಚದಲ್ಲಿ ಉನ್ನತ ಶಿಕ್ಷಣಕ್ಕಾಗಿ ಅಮೆರಿಕಾ ದೇಶಕ್ಕೆ ಕಳುಹಿಸಲು ಸಿದ್ಧರಿರುವುದಾಗಿ..." (ಪು-೪೮೩) ಹೇಳುತ್ತಾರೆ. ಆಗ ಮರಿಚಾಮಯ್ಯನವರು: "ಮಹಾಸ್ವಾಮ್‌ಗಳೆ, ನಮ್ಮ ಮೈಸೂರ್ ದೇಶದ್ ಎಲ್ಲಾ ಮಕ್ಕಳ ವಿದ್ಯೆಗಾಗಿ ಆ ಕೊಲಂಬಿಯ ಯುನಿವರ್‌ಸಿಟಿಯಂತ ಒಂದ್ ಸಂಸ್ಥೇನ ನಮ್ಮ ಮೈಸೂರ್ ದೇಶದಲ್ಲೇ ತಾವು ಕಟ್ಟಿಸ್‌ಕೊಡ್‌ಬೇಕು." (ಪು-೪೮೪) ಎಂಬುದಾಗಿ ಕೇಳಿಕೊಳ್ಳುತ್ತಾರೆ. ಆ ಮೂಲಕ ಪರೋಕ್ಷವಾಗಿ ಮೈಸೂರು ವಿಶ್ವವಿದ್ಯಾಲನಿಲಯದ ಅಸ್ತಿತ್ವಕ್ಕೆ ಕಾರಣರಾಗುತ್ತಾರೆ. ಇದು ಮರಿಚಾಮಯ್ಯನವರಿಗಿದ್ದ ದೂರಾಲೋಚನೆಯನ್ನು; ವ್ಯಷ್ಟಿಗಿಂತ ಸಮಷ್ಟಿಯ ಹಿತ ಮುಖ್ಯ ಎಂಬ ತಿಳುವಳಿಕೆಯನ್ನು ಸ್ಪಷ್ಟಪಡಿಸುತ್ತದೆ.

ಮಂಟೇಸ್ವಾಮಿ, ಮಲೆಯಮಹದೇಶ್ವರ, ನಂಜುಂಡೇಶ್ವರ ಮುಂತಾದ ಜನಪದ ಕಾವ್ಯಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದ ಯಜಮಾನ್ ಸೂರಪ್ಪನ ಅಕ್ಕ ಹಿರಿಯವ್ವ ಮೈಸೂರಿನ ಹಲವು ಯುದ್ಧಗಳನ್ನು ಕಣ್ಣಾರೆ ಕಂಡವಳು, ಆ ಸಂದರ್ಭದಲ್ಲಿ ಅನೇಕ ಗಾಯಾಳುಗಳನ್ನು ಉಪಚರಿಸಿದವಳು; ಅನಾಥ ಹಸುಳೆಗಳನ್ನು ಕಾಪಾಡಿದವಳು. ಗೌರಮ್ಮ ಯಜಮಾನ್ ಸೂರಪ್ಪನ ಎರಡನೆ ಹೆಂಡತಿಯಾಗಿ ಮನೆಗೆ ಬಂದಾಗ, ಮೊದಲನೆ ಹೆಂಡತಿ ಧರಣವ್ವ ಸವತಿ ಮತ್ಸರವನ್ನು ಬೆಳೆಸದೆ ತನ್ನ ಉದಾರತೆ ಹಾಗೂ ಸಹನಶೀಲ ಗುಣದಿಂದ ಕೌಟುಂಬಿಕ ಸಾಮರಸ್ಯವನ್ನು ಕಾಯ್ದುಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ.

ಜಾತಿವಾದಿ ವ್ಯವಸ್ಥೆ ರೂಪಿಸಿದ ಕೋಮುವಾದಿ ಸಂಚಿಗೆ ಬಲಿಯಾಗುವ ಮುಗ್ಧ ನಿರಪರಾಧಿಗಳಾದ ನಾತಾರಾಮ ಮತ್ತು ಆತನ ಹೆಂಡತಿ ಸೀತೆ; ಸೊಸೆ-ಮಕ್ಕಳ ಅನಾದರ, ನಿರ್ಲಕ್ಷ್ಯಕ್ಕೆ ಬೇಸತ್ತು ಸ್ವ-ಇಚ್ಛೆಯಿಂದ ಸಾವು ತಂದುಕೊಳ್ಳುವ ಸಿದ್ದಗಂಗಪ್ಪ; ಸ್ಮಶಾನದಲ್ಲಿ ಹೆಣಸುಡುವ ಕಾಯಕದಿಂದಲೇ ಬದುಕಿನ ಅಸ್ತಿತ್ವವನ್ನು ಕಂಡುಕೊಳ್ಳುವ ಮಸಣದಕಟ್ಟೆ ಚೆನ್‌ಗುಡ್ಡಯ್ಯ; ಯುವರಾಜರನ್ನು ಕಾಪಾಡಿದ್ದು ನಾನೇ ಎಂದು ಸುಳ್ಳು ಹೇಳಿ, ನಿಜವಾಗಿ ಸತ್ಯಪ್ಪನಿಗೆ ಸಲ್ಲಬೇಕಾದ ಸತ್ಕಾರವನ್ನು ತಾನೇ ಪಡೆಯುವ ಬೆಸ್ತರಕಾಳ; ಪತಿಯ ಮೋಸದ ನಡವಳಿಕೆಯನ್ನು ಖಂಡಿಸಿ, ಆತನನ್ನು ಪರಿವರ್ತಿಸಿ, ಬಡತನದ ನಡುವೆಯೂ ಸತ್ಯ-ಪ್ರಾಮಾಣಿಕತೆಯನ್ನು ಮೆರೆಯುವ ಕಾಳನ ಹೆಂಡತಿ ಕೆಂಪಿ; ಲೇವಾದೇವಿಗಾರನಾಗಿದ್ದರೂ, ಜಾತಿಭೇದ ಮಾಡದೆ ಕಷ್ಟದಲ್ಲಿದ್ದವರಿಗೆ ನೆರವಾಗುವ ಬಂಗಲೆ ಜವರಯ್ಯ; ಜಾತಿವಾದಿಗಳ ಸಾಮೂಹಿಕ ಅತ್ಯಾಚಾರಕ್ಕೆ ಒಳಗಾಗಿ ಕೊಲೆಯಾಗುವ ಸಿದ್ಧಂಜಿ ಮತ್ತು ಜಯ. ಕಾದಂಬರಿಯಲ್ಲಿ ಬರುವ ಈ ಎಲ್ಲಾ ಪಾತ್ರಗಳು ಓದುಗರ ನೆನಪಿನಾಳದಲ್ಲಿ ಉಳಿಯುತ್ತಲೇ ಚಿಂತಲನೆಗೊಳಪಡಿಸುತ್ತವೆ.

ಸಿಂಹಾವಲೋಕನ ತಂತ್ರದ ಮುಖೇನ ಕಾದಂಬರಿಯ ಕಥಾವಸ್ತುವನ್ನು ನಿರೂಪಿಸುವ ಲೇಖಕರು, ಭಾಷಾಭಿವ್ಯಕ್ತಿಯಲ್ಲಿ ಸರಳತೆಯನ್ನು ಕಾಯ್ದುಕೊಂಡಿದ್ದಾರೆ. ಒಟ್ಟು ೬೭೩ ಪುಟಗಳುಳ್ಳ

ಈ ಬೃಹತ್ ಕಾದಂಬರಿಯು ಓದುಗನಲ್ಲಿ ಕುತೂಹಲವನ್ನು ಸೃಷ್ಟಿಸುತ್ತಲೇ ಸಾಗುತ್ತದೆ. ವಿಷಯ ಪುನರಾವರ್ತನೆ ಹಾಗೂ ಅಲ್ಲಲ್ಲಿ ಬರುವ ಅನಾವಶ್ಯಕ ವಿವರಗಳ ಕಾದಂಬರಿಯ ಲೋಪವೆನಿಸಿದರೂ, ಒಟ್ಟು ಕಾದಂಬರಿಯ ಯಶಸ್ಸಿನಲ್ಲಿ ಇವು ಮರೆತು ಹೋಗುತ್ತವೆ. ಕಾದಂಬರಿಕಾರರು ಕಥೆಯ ನಡಿಗೆಗೆ ವೈಚಾರಿಕತೆಯ ಸ್ಪರ್ಶ ತಂದು, ಸಂದರ್ಭೋಚಿತವಾಗಿ ಕಾದಂಬರಿಯ ಉದ್ದಕ್ಕೂ ಬಳಸಲಾಗಿರುವ:

"ಗುಣ ತಿಳಿದು ಮಾಡಿದ ಗೆಳೆತನ ಋಣಾಸಂಬಂಧಕ್ಕಿಂತ ಶ್ರೇಷ್ಠ.
ಅಂಕಾರ ತುಂಬಿರೋ ಆತುಮ್‌ದಲ್ಲಿ ಓಂಕಾರ ಇರಾದುಂಟೆ?
ಪಾಪಕ್ಕೆ ಪತ್ನಿಯಾದ ಪಾಂಚಾಲರಾಯನ ಮಗಳೂ ಪರದೇಸಿಯಾದಂತೆ.
ಮಡಮುಣ್ಣಾವ್‌ನಿಗೆ ದುರುಳರ ಕಾಟ, ತಿರಿದುಣ್ಣಾವ್‌ನಿಗೆ ನಾಯಿಗಳ ಕಾಟ.
ಪಾಪದ ಸೂಳೆ ಸುಲಿದುಂಡರೆ, ಪುಣ್ಯದ ಪತ್ನಿ ತಿರಿದು ಜೀವ ಹರಿದಳಂತೆ.
ನೆಲೆ ಇಲ್ಲವ್‌ನ್ಗೆ ಬೆಲೆ ಕೊಟ್ರೆ, ನಿನ್ನೇ ಖರೀದಿ ಮಾಡ್ತೀನಿ ನಿನ್ ಬೆಲೆ
ಎಷ್ಟು? ಅಂದ್ನಂತೆ.
ನೆಲ ನೋಡಿ ನಡೆವರೆ ನೂರು ಮಾರು ನಡೀಬೌದು
ಆಕಾಶ ನೋಡಿ ನಡೆದರೆ ಮೂರು ಮಾರೂ ನಡೀಲಾರೆSS.
ಮ್ಯಾಣದಂಟು ಬದುಕುಸ್ತು, ಕ್ಯಾಣದ್ ನಂಟು ಕೆಡುಸ್ತು.
ಅರುವೇ ಮುಳ್ಳನ್ ಮ್ಯಾಲ್ ಬಿದ್ದಂಗಾಗದಾ.
ಬದುಕುವವರನ್ನು ಕಂಡು ಬಾಯಿ ಬಡಿದುಕೊಳ್ಳುತ್ತಾರೆ
ಬದುಕಿಲ್ಲದವರನ್ನು ಕಂಡು ತಿಕ ಬಡಿದುಕೊಳ್ಳುತ್ತಾರೆ.
ನಡೆಯೋ ಕಾಲ್ ಎಡವ್‌ದೇ ಇರಾದುಂಟಾ.
ಗಂಡನ್ ಜೋನ ಉಂಡು, ಮಿಂಡನ್‌ಗಾನ ಹಾಡ್ತವಳ್ಗೆ
ಮಂಡೆ ಕುಂಡಿಯೆಲ್ಲ ಬರೀ ರೋಗ್‌ವಂತೆ.

ಈ ಗಾದೆ ಮತ್ತು ನುಡಿಗಟ್ಟುಗಳು, ಕಾದಂಬರಿಕಾರರ ಬದುಕಿನಾಳದ ಅನುಭವವನ್ನು ಕಟ್ಟಿಕೊಡುತ್ತಲೇ, ಮನುಷ್ಯ ಬದುಕನ್ನು ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿ ಇನ್ನಷ್ಟು ಸಹಕಾರಿಯಾಗಬಲ್ಲವು.

'ಆ ಕಡೆ ಸೂರ್ಯೋದಯವಾಗುತ್ತಿದ್ದಂತೆಯೇ...' ಎಂಬ ವಾಕ್ಯದಿಂದ ಆರಂಭವಾಗುವ ಸೂರಪ್ಪ ಕಾದಂಬರಿಯು, '...ಅವರ ಮುಖಗಳೆಲ್ಲ ಅರಳಿ, ನೂತನ ಜೀವಕಳೆಯನ್ನೇ ಪಡೆದಂತೆ ಥಳಗುಟ್ಟುತೊಡಗಿದ್ದುವು.' ಎಂಬ ಮಾತುಗಳ ಮೂಲಕ ಮುಕ್ತಾಯವಾಗುತ್ತದೆ. ಅಂದರೆ, ಚರಿತ್ರೆಯ ಅಂತರಾಳದಲ್ಲಿ ಕರಗಿ ಹೋಗಿದ್ದ ಶೋಷಿತ ಸಮುದಾಯದ ಬದುಕು ಬೆಳಕು ಕಂಡ ಬಗೆಯನ್ನು ಇದು ಪ್ರತಿಮೀಕರಿಸುತ್ತದೆ. ಆದಿ ಮತ್ತು ಅಂತ್ಯದ ಈ ಎರಡು ಸಾಲುಗಳೇ ಸೂಕ್ಷ್ಮವಾಗಿ ಕಾದಂಬರಿಯ ಒಟ್ಟು ಆಶಯವನ್ನು ನಿರ್ಮಿಸಬಲ್ಲವುಗಳಾಗಿವೆ. □

---

ಡಾ. ಅಪ್ಪಗೆರೆ ಡಿ. ಸೋಮಶೇಖರ
ಕನ್ನಡ ಉಪನ್ಯಾಸಕ, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಗೋವುಗಳ ಗೋಳಾಟ

ಸೋಪಲೆ ಸಿದ್ದಪ್ಪ

ಕಂದ ॥ ಶ್ರೀವರಶಂಭುವಿನಣುಗನೆ।
ಪಾವನವಿದ್ಯೆಗಳಧೀಶ ವಿಘ್ನೇಶ್ವರ ನೀಂ ॥
ಕಾವುದು ನಿರತಂ ನನ್ನಯ
ಭಾವವು ವಿಶ್ವೇಶನಡಿಯ ಬೆರೆವಾತೆರದಿಂ ॥೧॥

ಭಾಮಿನಿ ಷಟ್ಪದಿ

ಕರಿಮುಖನೆ ಶಿರಬಾಗಿ ಬೇಡುವೆ।
ಸರಸದಿಂದೀಕೃತಿಯ ವಿರಚಿಸೆ।
ವರಮತಿಯ ನೆನಗಿತ್ತು ಪಾಲಿಸು ದುರಿತಗಳ ತರಿದು॥
ಹರಣವಸ್ಥಿರವೆಂದು ನಂಬುತೆ।
ಧರಣೆಗುಪಕೃತಿ ಮಾಡಲೆಳಸುವ।
ಸರಸತರ ನುಡಿಗಳನು ಪೊರಡಿಸು ನನ್ನ ರಸನೆಯಲಿ ॥೨॥

ಭಿಕ್ಷೆ ಬೇಡುವುದೇಕೆ ಜಗದ।
ಧ್ಯಕ್ಷ ನೀನಾಗಿರಲು ಸಕಲರ।
ರಕ್ಷಿಸುವ ಫಾಲಾಕ್ಷ ನಗೆಗೇಡೆನಿಸದೇ ನಿನಗೆ॥
ಇಕ್ಷು ಚಾಪನ ದಹಿಸಿದಾತನೆ।

ದಕ್ಷ ಗರ್ವವ ಮೆಟ್ಟಿದಾತನೆ।
ರಕ್ಷಿಸೆನ್ನ ಮನಕ್ಷಿ ಗೆಪೆಯೊಲು ಕುಕ್ಷಿಯೊಳಗಿಟ್ಟು ॥೩॥

ಮಾರಪಿತ ತವ ಚಾರುಚರಣಕೆ।
ಸಾರಿನಮಿಸುವೆ ಪರಮ ಕರುಣಾ।
ವಾರಿಧಿಯೆ ಮುನಿವಾರವಂದಿತ ಭಕ್ತ ಜನಪಾಪಲ॥
ಯಾರು ನಿನಗೆ ಸಮಾನರಿಹರೀ।
ಧಾರಿಣೀತಳದೊಳು ವಿಚಾರಿಸೆ।
ಕ್ಷೀರವಾರಿಧಿಶಯನ ನೀನೀಡೆನಗೆ ಸನ್ಮತಿಯ ॥೪॥

ಸ್ಮರಿಸಿ ಹಿರಿಯರ ಚರಣಕಮಲವ।
ನೆರಗಿ ವರಕವಿನಿಕರಕೆಲ್ಲವ।
ಗುರುಗಳಡಿದಾವರೆಗೆ ಶಿರವನು ಬಾಗುತನುನಯದಿ॥
ಪರಮ ಮಂಗಳವಾದ ಚರಿತೆಯ।
ವಿರಚಿಸುವೆನಾಂ ಭಕ್ತಿಯಿಂದಲಿ।
ಕರುಣೆಯಿಂದವಲೋಕಿಸುವುದಿದನೆನುತ ಬೇಡುವೆನು ॥೫॥

ಇದುವೆ ಪಾವನವಾದ ಚರಿತೆಯು।
ಇದುವೆ ಗೋಮಾತೆಯ ಚರಿತ್ರೆಯು।
ಇದನು ಪಠಿಸಿದ ಸದಯಹೃದಯರು ಸಕಲ ಸಂಪದವ॥
ಪದುಮನಾಭನ ದಿವ್ಯಲೋಕದಿ।
ಮುದದಿ ಪೊಂದುವರೆಂಬುದಕೆ ನಾಂ।
ಮದದಿ ಘೋರ್ಗರವಹಿಯ ಪಿಡಿಯುತ ಶಪಥಗೈವಪೆನು ॥೬॥

ಸಣ್ಣ ಕುಲದವ ದೊಡ್ಡ ಕುಲದವ।
ನೆನ್ನುವಂತಹ ಭಾವನೆಯ ನೀ।
ನಿನ್ನು ಮನದೊಳು ತಂದುಕೊಳ್ಳದೆ ಮನ್ನಿಸುವುದೆನ್ನ॥
ಸಣ್ಣ ಮಳಲೊಳಗಿಪ್ಪ ವಜ್ರವು।
ತನ್ನ ಪ್ರಭೆಯನು ತೋರದಿರುವುದೆ।
ಸಣ್ಣ ದೊಡ್ಡವನೆಂಬ ಭಾವನೆ ಸಣ್ಣವಗೆ ಮಾತ್ರ ॥೭॥

ಕೀಳು ಕುಲದೊಳು ಜನಿಸಿದಂತಹ।
ವಾಲಮಿಕಿಕರು ಪೇಳ್ದ ರಾಮನ।
ಲೀಲೆಯಮ ಜಗಕೆಲ್ಲ ಸಮ್ಮತವಾಗಲಿಲ್ಲೇನು॥
ತಾಳಿ ವಿಧವಿಧದಾಪದಂಗಳ।
ನಾಳಿನಂದದಿ ಗೆದ್ದು ನರಳುವ।
ಶ್ರೀಲತಾಂಗಿಯ ಪರಿಯ ಪೇಳುವೆನಲ್ಲದಿನ್ನೇನು ॥೮॥

ಭಾರತಾವನಿ ಯಿಾಯುವನ್ನದ।
ಸಾರದಿಂ ಬಲಗೊಂಡ ತರುಣರೆ।
ಸಾರಿ ಬೇಡುವೆನಿದನು ಯೋಚಿಸಿ ನಿಮ್ಮ ಮನದೊಳಗೆ॥
ಆರ ರಕ್ತದಿ ಪುಟ್ಟಿದಿರಿ ನೀ।
ವಾರ ಸಾರವ ಹೀರುತಿರುವಿರಿ।
ಧೀರರೇ ನೀವಾದರವುಗಳ ಸಲಹಿ ಮನಮೊಲಿದು ॥೯॥

ಪರಹಿತಕೆ ಸರಿಯಾದ ಧರ್ಮವು।
ಧರಣಿಯೊಳಗಿನ್ನಾವುದಿರುವುದು।
ಭರತಖಂಡದ ಪಿರಿಯ ಧರ್ಮವಿದಲ್ಲವೇ ನರರೆ॥
ಸಿರಿಯರಮಣನೆ ಹತ್ತು ರೂಪವ।
ಪರಮ ತೋಷದೊಳೆತ್ತಿದುದುತಾಂ।
ಧರಣೆಗುಪಕೃತಿಗಯ್ವ ಕಾರ್ಯಕ್ಕಲ್ಲದಿನ್ನೇಕೆ ॥೧೦॥

ರ್ಧ್ವಣ್ಣಳಾಗುವ ತೆರದಿ ಗೈವುದು।
ಮಾನ್ಯರೆನಿಸಿದ ಭಾರತೇಯರಿಗಲ್ಲ ವಿದುವಿಹಿತ॥
ಮನ್ನಿಸಿರಿ ಮಾತೆಯನು ಮೊದಲೊಳು।
ಬನ್ನ ಬಡುತಿನಹಳಕಟ ದುಃಖಿಸಿ।
ತನ್ನ ಹೊಟ್ಟೆಯೊಳಿಂತು ದುರ್ಜನರುದಯಿಸಿದರೆಂದು ॥೧೧॥

ಭೂಮಿದೇವಿಯೆ ಕಾಮಧೇನುವು।
ಕಾಮಿತಾರ್ಥವನಿತ್ತು ಪೊರೆಯುವ।
ಕಾಮ ಜನಕನ ಪರಮ ಪ್ರೇಮದ ಭಾಮಿನಿಯು ತಾನು॥
ಈ ಮಹಾತುಮೆಯಿಂದಲುದಿಸಿದ।
ಪ್ರೇಮಪುತ್ರಿಯರೆನಿಪ ಗೋವ್ಗಳ।
ನಾಮನಿಶ್ಶೇಷವನು ಮಾಡುವ ಕಾಲವೊದಗಿಹುದು ॥೧೨॥

ವೇದದೊಳು ಮೊದಲಲ್ಲಿ ಮಾತೆಯ।
ಮೋದದಿಂ ಮನ್ನಿಸಿದ ನಂತರ।
ಮಾದರದಿ ಪೊಗಳಿಹರು ತಾತನ ಗುಣಕಥಾವಳಿಯ॥
ಆ ದಯಾಯುತ ಮಾತೆಯಿಂದೆಮ।
ಗಾದ ಮಹದುಪಕಾರಕೇನನು।
ಗೈದು ಋಣವನು ತೀರಿಸುವೆವೆಮ್ಮಿಂದಲಸವಳವು ॥೧೩॥

ಕಸವತಿಂದಾಲಯಕೆ ಬರುತಿಹು।
ದಸುವ ಪೊರೆಯುವ ಸುಧೆಯ ನೀವುದು।
ಹಸಿವಿನಿಂಗಿಸಿದೊಡನೆ ಮರವೆವು ಪೊಂದಿದುಪಕೃತಿಯ॥

ಹಸುವಿಗೊದಗಲು ಮುಪ್ಪಿನಾವಸ।
ವಸದಿ ಕೊಡುವೆವು ಕಾಸಿನಾಸೆಗೆ।
ವಸುಧೆಯೊಳು ಚಂಡಾಲರೆನಿಸಿದ ಕೊರಳಗೊಯ್ಯರಿಗೆ ॥೧೪॥

ಮಸದ ಕತ್ತಿಯ ಕೊರಳಿಗಿರಿಸಲು।
ಬಿಸಿಯುಸಿರ ಬಿಡಲದುವೆ ಮೇಘದ।
ಬೆಸುಗೆ ಬಿಡುವುದು ಬಸುರು ಬೆಂದಾಕ್ಷಣದಿ ನಭದೊಳಗೆ॥
ವಸುಧೆಗೆಲ್ಲಿಂದೈದುವುದು ಮಳೆ।
ಬಿಸಿಲತಾಪದಿ ನಿಳೆಯು ಬೇಯು।
ತ್ತಸನಕ್ಕಿಲ್ಲದೆ ಪಾಪಿಮರಣಕೆ ಜನವು ತುತ್ತಹುದು ॥೧೫॥

ಘರಿಲುಘರಿಲೆಂದಧಮ ರಕ್ಕಸ।
ರರಿಯುತಿರಲಾರಕುತ ಕೋಡಿಯು।
ಪರಿಯುವುದನೋಡಾರು ಸೈರಿಪರಾರು ನಲಿಯುವರು॥
ನರರ ಪೋಷಣೆಗಾಗಿ ಜಗದೀ।
ಶ್ವರನು ಗೋವನು ನಿರ್ಮಿಸಿದನೆಂ।
ಬರಿವ ದೇನಾಯ್ತೊರೆವೆ ನಾನದ ನೀಗ ವಿಸ್ತರದೆ ॥೧೬॥

ಹಿಂದೆ ಬ್ರಹ್ಮಾಂಡವನು ತನ್ನಾ।
ನಂದಕೆಂದಾಶಿವನು ಸೃಜಿಪಂ।
ದೊಂದು ಮನುಜವ್ಯಕ್ತಿಯೆಂಬುದನಂತೆಯೇ ರಚಿಸಿ॥
ಅಂದಮಪ್ಪಾಹಾರ ಮಿದಕೇ।
ನೆಂದು ಚಿಂತಿಸುವನಿತರೊಳಗಿಳೆ।
ಯಿಂದ ಹಾಹಾಕಾರವಸಿಯೊಂದಿಂತು ಕೇಳಿಸಿತು ॥೧೭॥
ಜೀವಿಗಳ ನಿರ್ಮಿಸಿದ ದೇವನೆ।
ಜೀವನಕೆ ಕೊಡದಿರುವುದುಚಿತವೆ।
ಭಾವಿಸುವುದು ಜಗವೆಲ್ಲ ನೀಂ ಕರುಣಾಳುವೆಂದೆನುತ॥
ದೇವದೇವನೆ ತೋರಿ ಕರುಣವ।
ಕಾವುದೆಮ್ಮನು ಭಾವಿಸಲ್ಕಿ।
ನ್ನಾವನಿರುವನು ಪಾಲಿಪಾತನು ನೀನುಪೇಕ್ಷಿಸಲು ॥೧೮॥

□

---

ಸೋಸಲೆ ಸಿದ್ದಪ್ಪ
C/o ಎಸ್. ಶಿವಸ್ವಾಮಿ
ನಿವೃತ್ತ ಫಾರೆಸ್ಟರ್, ಸೋಸಲೆ ಗ್ರಾಮ, ಟಿ. ನರಸೀಪುರ ತಾಲ್ಲೂಕು
ಮೈಸೂರು ಜಿಲ್ಲೆ - ೫೭೧೧೨೦

# ಸಾರಾಅಬೂಬಕ್ಕರ್ : ಸಂದರ್ಶನ

ಪ್ರೊ. ಅಭಯಕುಮಾರ್

**ನಿಮ್ಮ ಊರು ಯಾವುದು?**

ಕೇರಳ ರಾಜ್ಯದ ಕಾಸರಗೋಡು. ನಾನು ಕಲಿಯುತ್ತಾ ಇರುವಾಗ ಮದ್ರಾಸು ಪ್ರಾಂತ್ಯದ ದಕ್ಷಿಣ ಕನ್ನಡದ ಭಾಗವಾಗಿತ್ತು.

**ನಿಮ್ಮ ಕಥೆ ಕಾದಂಬರಿಗಳ ವಸ್ತುಗಳನ್ನು ಯಾವ ಹಿನ್ನೆಲೆಯಿಂದ ಆರಿಸಿಕೊಳ್ಳುತ್ತೀರಿ?**

ನಾನು ಕಂಡ, ಕೇಳಿದ ಘಟನೆಗಳನ್ನೇ ವಸ್ತುಗಳನ್ನಾಗಿ ಆಯ್ಕೆ ಮಾಡಿಕೊಳ್ಳುತ್ತೇನೆ. ನನ್ನ ಎಲ್ಲ ಕಥೆಗಳು ಕಾಲ್ಪನಿಕ ಅಲ್ಲ, ನೈಜ ಘಟನೆಗಳಾಗಿವೆ. ಇತ್ತೀಚೆಗೆ ಬಂದ 'ಪಂಜರ' ಕಾಲ್ಪನಿಕವಾಗಿದೆ. ಅವಿವಾಹಿತ ಹೆಣ್ಣೊಬ್ಬಳು ತಾಯಿಯಾದರೆ ಯಾವೆಲ್ಲಾ ತೊಂದರೆಗಳನ್ನು ಎದುರಿಸಬೇಕು ಎಂಬ ಘಟನೆಯ ಸುತ್ತ ಆ ಕಾದಂಬರಿಯನ್ನು ರಚಿಸಿಕೊಂಡಿದ್ದೇನೆ. ಆದರೆ ಘಟನೆಗಳೂ ಕೂಡ ನಡೆಯುತ್ತಿದೆ.

**ಸಾಹಿತ್ಯಿಕ ವಲಯ ನಿಮ್ಮ ಪರಿಸರದಲ್ಲಿ ಇತ್ತಾ?**

ಆ ಪರಿಸರದಲ್ಲಿ ಸಾಹಿತ್ಯಿಕ ವಲಯ ಅಂತ ಇರ್ಲಿಲ್ಲ. ಆದರೆ ಮನೆಯಲ್ಲಿ ಎಲ್ಲರೂ ಓದುತ್ತಾ ಇದ್ದರು. ನಮ್ಮ ತಂದೆ ಹೆಚ್ಚು ಓದ್ತಾ ಇದ್ದರು. ಇಂಗ್ಲಿಷ್ ಪುಸ್ತಕಗಳ ದೊಡ್ಡ ಲೈಬ್ರರಿಯನ್ನೇ ಹೊಂದಿದ್ದರು. ಕನ್ನಡವನ್ನೂ ಓದುತ್ತಾ ಇದ್ದರು. ಕನ್ನಡ ಗೊತ್ತಿಲ್ಲ ಅಂತ ಇಲ್ಲ. ಅಂದ್ರೆ ಚಿಕ್ಕಂದಿನಲ್ಲಿ ಓದ್ತಾ ಇದ್ದರು. ನನ್ನ ಅಣ್ಣಂದಿರೆ ನನಗೆ ಹೆಚ್ಚಾಗಿ ಪ್ರೋತ್ಸಾಹ ಕೊಟ್ಟರು. ಅವರು ಇಂಟರ್ ಮೀಡಿಯೆಟ್ ಮಂಗಳೂರಿನಲ್ಲಿ ಮಾಡಿದ್ದು. ಟ್ರೈನಲ್ಲಿ ಓದ್ಲಿಕ್ಕೆ ಅಂತ ಪುಸ್ತಕಗಳನ್ನು ಕೊಳ್ಳುತ್ತಿದ್ದರು. ಅದನ್ನು ನಾನು ಓದ್ತ ಇದ್ದೆ. ಕನ್ನಡದಲ್ಲಿ ನಮಗೆ ಎಲ್ಲರಿಗೂ ಇಂಟ್ರೆಸ್ಟ್ ಇತ್ತು. ಎಲ್ಲರೂ ಓದ್ತಾ

ಇದ್ದೆವು. ಆ ವಾತಾವರಣ ಓದುವಂತಹ ವಾತಾವರಣ ಇತ್ತು. ಬರೆಯಲು ಯಾರೂ ಮುಂದೆ ಬರುತ್ತಿರಲಿಲ್ಲ. ನಮ್ಮ ತಾಯಿಗೆ ಜಾನಪದ ಕಥೆಗಳಲ್ಲಿ ತುಂಬಾ ಆಸಕ್ತಿ ಇತ್ತು. ಆದ್ರೆ ಅವರಿಗೆ ಬರಹ ಇರ್ಲಿಲ್ಲ. ಬರಹ ಸಿಕ್ಕಿದ್ರೆ ಅವರು ನನಗಿಂತ ಒಳ್ಳೆಯ ಕಥೆಗಾರ್ತಿ ಆಗುತ್ತಿದ್ದರು. ತಂದೆಯ ತಾಯಿ ಕೂಡಾ ಜಾನಪದ ಕಥೆ ಹಾಡುಗಳನ್ನು ಬಹಳಷ್ಟು ತಿಳಿದಿದ್ದರು. ಅವರಿಗೂ ಬರಹ ಇರ್ಲಿಲ್ಲ. ನಂಗೆ ಬರಹ ಸಿಕ್ಕಿತು. ಅದ್ದರಿಂದ ಬರೆದೆ. ಅಲ್ಲೆ ತುಂಬಾ ಓದುವ ಹುಚ್ಚಿತ್ತು. ನಾನು ಮದುವೆಯಾಗಿ ಮಂಗಳೂರಿಗೆ ಬಂದ ನಂತರ ಆ ಮನೆಯಲ್ಲಿ ಓದುವಂತಹ ಆಸಕ್ತಿ ಯಾರಿಗೂ ಇರಲಿಲ್ಲ. ಒಂದು ಪತ್ರಿಕೆ ಕೂಡಾ ಓದುವಂತಹ ಹವ್ಯಾಸ ಆ ಮನೆಯಲ್ಲಿ ಇರ್ಲಿಲ್ಲ. ಪತ್ರಿಕೆ ಏನಾದ್ರು ಸಿಕ್ಕಿದ್ರೂ ಕೂಡಾ ಮನೆಯ ಗಂಡಸರನ್ನಷ್ಟೇ ತಲುಪುತ್ತಿತ್ತು. ಮನೆಯ ಹೆಂಗಸರನ್ನು ತಲುಪುತ್ತಲೇ ಇರಲಿಲ್ಲ. ಅಂದ್ರೆ ನನ್ನ ನಾದಿನಿಯವರೆಲ್ಲಾ ಓದಿದವರಲ್ಲ. ಶಾಲೆಯ ನೋಡಿದವರೇ ಅಲ್ಲ. ನಾನು ಆ ಮನೆಗೆ ಬಂದ ಮೇಲೇನೇ ಆ ಮನೆಯ ಹೆಣ್ಣು ಮಕ್ಕಳು ಶಾಲೆಗೆ ಹೋಗಲು ಶುರು ಮಾಡಿದ್ದು.

**ನಿಮಗೆ ಕನ್ನಡ ಸಾಹಿತ್ಯದಲ್ಲಿ ಆಸಕ್ತಿ ಉಂಟಾಗಲು ಕಾರಣವೇನು?**

ಕನ್ನಡ ನಾನು ಕಲಿತ ಭಾಷೆ. ನನ್ನ ಮಾತೃಭಾಷೆ ಏನೂ ಕನ್ನಡವಲ್ಲ. ಈಗ ಎಲ್ಲ ಹೇಳ್ತಾ ಇದ್ದಾರೆ. ಮಾತೃಭಾಷೆಯಲ್ಲೇ ಕಲಿಯಬೇಕು ಅಂತ. ಆದ್ರೆ ನಮ್ಮ ಅನುಭವ ಬೇರೆನೇ. ನಮ್ಮ ಮನೆಯಲ್ಲಿ ಯಾರೂ ಮಾತೃಭಾಷೆಯಲ್ಲಿ ಕಲೀಲಿಲ್ಲ. ನಮ್ಮ ತಂದೆ ಕೂಡಾ ಮಾತೃಭಾಷೆಯಲ್ಲಿ ಕಲೀಲಿಲ್ಲ. ನಮ್ಮ ಹತ್ತಿರ ಯಾವ ಶಾಲೆ ಇದೆಯೋ ಅಲ್ಲಿಗೆ ಸೇರಿಸಿದ್ರು. ನಮ್ಮ ತಂದೆಗೆ ಶಿಕ್ಷಣ ಬೇಕು ಅಂತಲ್ಲದೆ ಅದು ಮಾತೃಭಾಷೆಯಲ್ಲೇ ಆಗ್ಬೇಕು ಅಂತ ಅವರು ಹೇಳ್ತಾನೇ ಇರ್ಲಿಲ್ಲ. ನಾವು ಮಾತೃಭಾಷೆಯ ಶಾಲೆಯನ್ನು ಹುಡುಕಿಕೊಂಡು ಹೋಗ್ಬೇಕಾಗಿತ್ತು. ಆವಾಗ ಇಂತಹ ಚಿಂತನೆ ಇರ್ಲಿಲ್ಲ. ನನ್ನ ಸಹಪಾಠಿಗಳೆಲ್ಲರೂ ಕನ್ನಡ ಮಾತೃಭಾಷೆಯವರಾಗಿರಲಿಲ್ಲ. ಕೊಂಕಣೀ, ತುಳು, ಮಲಯಾಳ ಮಾತನಾಡುವವರು. ಕನ್ನಡ ಮಾತೃಭಾಷೆಯಾಗಿದ್ದವರು ನಾಲ್ಕು-ಐದು ಮಂದಿಯಷ್ಟೆ. ಹಾಗೆ ಕನ್ನಡವನ್ನೇ ನಾನು ಓದಿದ್ದು. ನಂತರ ಕರ್ನಾಟಕ ರಾಜ್ಯಕ್ಕೆ ಬಂದೆ. ನನ್ನ ಜನಗಳನ್ನು ತಲುಪುವುದಕ್ಕೆ ಬರಹದಿಂದ ಮಾತ್ರ ಸಾಧ್ಯವೋ ಏನೋ ಅಂತ ಕನ್ನಡದಲ್ಲೇ ಬರೆಯಲು ಆರಂಭಿಸಿದೆ.

**ಬರೆಯುವುದಕ್ಕೆ ಆರಂಭದಿಂದ ಪ್ರೋತ್ಸಾಹ ಕೊಟ್ಟವರು ಯಾರು?**

ಇಲ್ಲ. ಯಾರೂ ಪ್ರೋತ್ಸಾಹ ಕೊಡ್ಲಿಲ್ಲ. ನನ್ನ ಬರವಣಿಗೆಯನ್ನು ನಿಲ್ಲಿಸ್ಲಿಕ್ಕೆ ಪ್ರಯತ್ನಿಸಿದವರೇ ಹೆಚ್ಚು. ಬರೀ ಅಂತ ಹೇಳುವವರು ಯಾರೂ ಇರ್ಲಿಲ್ಲ. ನಾನು ಬರೆದ ಮೇಲೆ ನನ್ನ ತಂದೆ ಓದ್ತಾ ಇದ್ರು. ಲಂಕೇಶ್ ಪತ್ರಿಕೆಯಲ್ಲಿ ಮೊದಲು ಬಂದಾಗ ನಾನು ಲಂಕೇಶ್ ಅವರಲ್ಲಿ ನನ್ನ ತಂದೆಯವರಿಗೆ ಕಳಿಸಿಕೊಡಲು ಹೇಳಿದೆ. ಅವರು ಒಂದೆರಡು ಕಂತು ಓದಿದ ಕೂಡ್ಲೆ ಪತ್ರ ಬರೆದ್ರು. ಚೆನ್ನಾಗಿದೆ, ಬರೀ ಅಂತ ತುಂಬಾ ಪ್ರೋತ್ಸಾಹ ಮಾಡಿದ್ರು. ನನ್ನ ಅಣ್ಣಂದಿರು ಯಾರೂ ಊರಲ್ಲಿ ಇರ್ಲಿಲ್ಲ. ನನ್ನ ತಮ್ಮ ಚೆನ್ನಾಗಿ ಪ್ರೋತ್ಸಾಹ ಕೊಟ್ಟ. ಇಲ್ಲಿ ನನ್ನ ಗಂಡನ ಮನೆಯಲ್ಲಿ ಸಾಹಿತ್ಯದ ಗಂಧಗಾಳಿ ಗೊತ್ತಿಲ್ಲ. ಆದ್ರೆ ಯಾರೂ ನನ್ನನ್ನು ತಡೆಯಲಿಲ್ಲ. ನನ್ನ ಗಂಡ ಬರೀಬೇಡ ಅಂತೇನೂ ಹೇಳಿಲ್ಲ. ಅವರಿಗೆ ಸಂತೋಷವಾಯಿತು. ಪೇಪರಿನಲ್ಲಿ ಹೆಸರು ಇತ್ತಲ್ಲ ಅದಕ್ಕೆ ಖುಷಿಯಾಯಿತು ಅಷ್ಟೇ.

**ಮುಸ್ಲಿಂ ಸಮುದಾಯದಲ್ಲಿ ಸಂಚಲನೆಯುಂಟು ಮಾಡಿದ ಕೃತಿ ಯಾವುದಾದರೂ ನಿಮ್ಮಿಂದ ರಚನೆಯಾಗಿದೆಯಾ? ಮತ್ತು ಅದನ್ನು ನೀವು ಯಾವ ರೀತಿ ಎದುರಿಸಿದ್ರಿ?**

ಮುಸ್ಲಿಂ ಸಮುದಾಯದಲ್ಲಿ ಸಂಚಲನೆಯಂಟು ಮಾಡಿದ ಕೃತಿ ಅಂತ ಯಾವುದಿಲ್ಲ. ಆದ್ರೆ ಮೊದಲ ಕೃತಿ 'ಚಂದ್ರಗಿರಿಯ ತೀರದಲ್ಲಿ' ಆಗಿರಬಹುದು. ನಾನು ಬರೆದಾಗ್ಲೇ ಸ್ವಾಗತವೂ ಸಿಕ್ಕಿತು. ಅದಕ್ಕೆ ವಿರೋಧವೂ ಬಂತು. ಕೆಲವರೆಲ್ಲಾ ಹೇಳಿದ್ರಂತೆ, ಅಂತಹ ಘಟನೆ ನಮ್ಮ ಊರಲ್ಲಿ ಆಗುವುದೇ ಇಲ್ಲ. ಮೊದಲನೇ ಗಂಡನನ್ನು ಇನ್ನೊಮ್ಮೆ ಮದುವೆ ಆಗಬೇಕಾದ್ರೆ ಅವಳು ಒಂದು ದಿನದ ಮಟ್ಟಿಗಾದೂ ಇನ್ನೊಬ್ಬನ ಜೊತೆ ಮದುವೆಯಾಗಿ ಇರಬೇಕು. ಇದಕ್ಕೆ ನಾನು ಸುಮ್ನೆ ಬರೆಯುತ್ತಾ ಇದ್ದೇನೆ, ಪ್ರಚಾರಕ್ಕೆ ಬರೆಯುತ್ತಾ ಇದ್ದೇನೆ. ಹಣಕ್ಕಾಗಿ ಬರೆಯುತ್ತೇನೆ. ಹೀಗೆಲ್ಲಾ ಹೇಳಿದ್ದು. ಧಾರ್ಮಿಕ ರಂಗದವರ ವಿರೋಧ ಇತ್ತು. ಮತ್ತೆ ನಾನು ಮುಂದುವರಿಸಿದೆ. ಬೇರೆ ಕೃತಿಗಳಲ್ಲಿಯೂ ಬರೆದೆ. ಕಣ್ಣು ತೆರೆದ್ರು ಮುಸ್ಲಿಮರು. ಮತ್ತೆ 'ಸಹನಾ' ಬಂದಾಗ ಅವರಿಗೆ ತಡೀಲಿಕ್ಕೆ ಆಗ್ಲಿಲ್ಲ. ಗಲಾಟೆ ಮಾಡಿದ್ರು. ನಂತರ ನನ್ನ ಲೇಖನಗಳನ್ನೆಲ್ಲ ನೋಡಿಕೊಂಡು ಧರ್ಮದಿಂದ ಹೊರಗೆ ಹಾಕಬೇಕೆಂದು ಮಾಡಿದ್ರು. ಬಹುಶಃ ಇಷ್ಟೆಲ್ಲಾ ಮಾಡಿದ್ರೆ ನಾನು ಬಾಯಿ ಮುಚ್ಚಿಕೊಂಡು ಸುಮ್ನೆ ಕೂತುಕೊಳ್ತೇನೆ ಅಂತ ಅವರಂದುಕೊಂಡ್ರು. ನಾನು ಆದ್ರೂ ಬರೆದೆ. ತಂದೆಗೆ ತೋರಿಸಿದೆ. ನನ್ನಂತೆಯೇ ಸಮಾಜದ ಒಂದು ಭಾಗವಾಗಿರುವ ಅವರಿಗೆ ಅಧಿಕಾರ ಏನಿದೆ. ನನಗೆ ನೀನು ಹಾಗೆ ಮಾಡು ಹಾಗೆ ಮಾಡ್ಬೇಡ ಅಂತ ಹೇಳಿಕ್ಕೆ. ಅವರೂ ನನ್ನಂತೆ ನನ್ನ ಸಮಾಜದ ಒಂದು ಅಂಗ. ಹಾಗಿರುವಾಗ ನನ್ನನ್ನು ಸಮಾಜದಿಂದ ಹೊರಗೆ ಹಾಕುವ ತಾಕತ್ತು ಅವರಿಗೆ ಇದೆಯಾ ಅಂತ. ಹಾಗೆ ಮತ್ತೆ ನಾನು ಕೋರ್ಟಿಗೆ ಹೋದೆ. ಕೋರ್ಟಿಗೆ ಹೋದ ನಂತರ ಅವರು ಹಾಗೆ ಬರೆಯುದನ್ನು ನಿಲ್ಲಿಸಿದ್ರು. ಮತ್ತೆ ಕೋರ್ಟಿನಿಂದ ವಿಚಾರಣೆಗೆ ಬರುವಾಗ ನಾಲ್ಕು ವರ್ಷವಾಯಿತು. ಮತ್ತೆ ನಾನು ಬರೆಯುತ್ತಾ ಇದ್ದೆ. ಅವರ ಬಾಯಿ ಬಂದಾಯಿತು.

**ವಜೋತ್ ಅನ್ನುವುದು ಇಂದಿನ ಸಮುದಾಯದಲ್ಲಿ ಇದೆಯಾ?**

ಹೌದು. ಅದು ನಿಜ ಜೀವನದಲ್ಲಿ ನಡೆದ ಘಟನೆ. ನನಗೆ ಗೊತ್ತಿರ್ಲಿಲ್ಲ. ಒಬ್ಬ ಹಿರಿಯರು ಹೇಳಿದ ಘಟನೆ. ನಮ್ಮ ಮನೆ ಹತ್ರ ಇಂತಹ ಘಟನೆ ಹೀಗೀಗೆ ಆಗಿದೆ. ಆ ಹುಡುಗಿ ಮತ್ತು ಆ ಗಂಡನೂ ಬರ್ಲಿಲ್ಲ. ಅವನು ಎಲ್ಲಿದ್ದಾನೆ ಅವಳು ತಾಯಿಯಲ್ಲಿ ಕೇಳಿದಳಂತೆ ತಲಾಖ್ ಕೇಳಿದನಂತೆ. ಮತ್ತೆ ಅವಳು ಸತ್ತು ಹೋದಳು. ನಾನು ಮೊದಲೇ ಹೇಳಿದೆನಲ್ಲ ನನ್ನ ಕಥೆ ಕಾದಂಬರಿಗಳ ವಸ್ತುಗಳು ನಾನು ಕಂಡ, ಕೇಳಿದ ನೈಜ ಘಟನೆಗಳೇ ಅಂತ.

**ಅದನ್ನು ಒಪ್ಪಿಕೊಂಡು ಬದುಕನ್ನು ಕಟ್ಟದಂತಹ ಮಹಿಳೆಯರೂ ನಿಮ್ಮಲ್ಲಿದ್ದಾರಾ?**

ಇದ್ದಾರೆ. ಅದನ್ನು ಒಪ್ಪಿಕೊಂಡವರು ಇದ್ದಾರೆ. ಮತ್ತೆ ಏನು ಮಾಡುವುದು. ಬೇರೆ ಏನೂ ದಾರಿ ಇರುವುದಿಲ್ಲ. ಸಮಾಜ ಇಂತಹದನ್ನು ಹೇರುತ್ತದೆ. ಇದು ಎಲ್ಲಿಯವರೆಗೆ ಇದೆ ಅಂದ್ರೆ ಗಿರಿಜಾವ್ಯಾಸ್, ಮಹಿಳಾ ಆಯೋಗದ ಅಧ್ಯಕ್ಷರು, ಆಮೇಲೆ ಅಂಬಿಕಾ ಸೋನಿ, ಮುಲಾಯಂ ಸಿಂಗ್ ಯಾದವ್ ಇವರು ಎಲ್ಲರೂ ಶರೀಯತ್ ಹೇಳಿದ ಹಾಗೆ, ಜಮಾತ್ ಹೇಳಿದ ಹಾಗೆ ನಡೆಯಬೇಕು ಅಂದಿದ್ದಾರಲ್ಲ; ಅದು ತಪ್ಪೇ ಆಗಿದ್ರೂ ಕೂಡಾ.

**ಯಾವ ಕಾಲದಿಂದ ವಜೋತ್ ಮಹಿಳೆಯರ ಮೇಲೆ ಹೇರಲಾಗಿದೆ?**

ಅದು ಪೈಗಂಬರರ ಕಾಲಕ್ಕಿಂತಲೂ ಮೊದಲೇ ಇತ್ತು ಅಂತಲೂ, ನಂತರ ಪೈಗಂಬರರ ಮರಣಾ ನಂತರ ಇಂತಹುದೆಲ್ಲಾ ಆರಂಭವಾದದ್ದು. ಪ್ರವಾದಿಗಳು ಬೇರೆನೇ ಹೇಳಿದ್ದು ಅವರು ಹೇಳಿದ್ದು ಯಾವುದೂ ನಡೆಯಲಿಲ್ಲ. ಯಾಕೆಂದರೆ ಅವರು ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಬೇಕೇಬೇಕು ಅಂತ ಹೇಳಿದ್ದಾರೆ. ಅರಬ್ ದೇಶದಿಂದ ಚೈನಾದವರೆಗೂ ಹೆಣ್ಣು ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಕಳಿಸಬೇಕು ಎಂದು ಹೇಳಿದ್ದಾರೆ. ಆಗ ಅರಬ್ ದೇಶದಲ್ಲಿ ಶಿಕ್ಷಣ ವ್ಯವಸ್ಥೆ ಇರಲಿಲ್ಲ. ಆದರಿಂದ ಈ ವಾಕ್ಯ ಕುರಾನ್ ಅಲ್ಲಿ ಇದೆ. ಹೆಣ್ಣು ಮಕ್ಕಳಿಗೆ ಕೂಡಾ ಶಿಕ್ಷಣ ಕೊಡ್ಬೇಕು. ಗಂಡು ಮಕ್ಕಳಿಗೆ ಕೂಡಾ ಕಲಿಸುವವಳು ತಾಯಿ. ಆದ್ದರಿಂದ ಮೊದಲು ಅವಳಿಗೆ ಶಿಕ್ಷಣ ಕೊಡಬೇಕು. ಇಲ್ಲದಿದ್ದರೆ ನಾಗರಿಕರು ಉತ್ತಮವಾಗಿ ಬೆಳೆಯುವುದಿಲ್ಲ ಎಂದು ಪೈಗಂಬರರು ಹೇಳಿದ್ದಾರೆ. ಪೈಗಂಬರರ ಮರಣಾನಂತರ ಕೂಡ್ಲೆ ಹೆಣ್ಣು ಮಕ್ಕಳನ್ನು ನಿರ್ಬಂಧಿಸಿದರು. ಇತ್ತೀಚೆಗೆ ತಾನೆ ಮಂಗಳೂರಲ್ಲಿ ಹೆಣ್ಣುಮಕ್ಕಳು ಓದಾದಲು ಶುರು ಮಾಡಿದ್ದು. ಒಂದು ಇಪ್ಪತ್ತು ವರ್ಷದ ನಂತರ- ಅಂದ್ರೆ ನಾನು ಬರೀಲಿಕ್ಕೆ ಶುರು ಮಾಡಿದ ನಂತರ- ನನ್ನ ಗಂಡನ ಮನೆಗೆ ಬಂದ ನಂತರ ಆ ಮನೆಯ ಹೆಣ್ಣು ಮಕ್ಕಳು ಶಾಲೆಗೆ ಹೋದದ್ದು. ಗಂಡು ಮಕ್ಕಳು ಕೂಡಾ ಶಾಲೆಗೆ ಹೋಗ್ತಾ ಇರಲಿಲ್ಲ. ವಿದ್ಯಾಭ್ಯಾಸ ನಮ್ಮವರಿಗೆ ಬೇಡವೇ ಬೇಡ. ಧಾರ್ಮಿಕ ವಿದ್ಯಾಭ್ಯಾಸ ಮಾತ್ರ ಸಾಕು ಅಂತ ಹೇಳುವಂತಹ ಮೌಲವಿಗಳು ಜನರನ್ನು ಹಾದಿ ತಪ್ಪಿಸುವವರು. ವಜೋತ್ ಅನ್ನುವುದು ಪ್ರವಾದಿಗಳು ಹೇಳಿದ ವಿಷಯವಲ್ಲ. ವಜೋತ್ ಅನ್ನುವುದು ಮೊದಲೇ ಇತ್ತಂತೆ. ಪ್ರವಾದಿಗಳು ಅದನ್ನು ವಿರೋಧಿಸಿದರು. ಆ ವಾಕ್ಯ ಕುರಾನಿನಲ್ಲಿ ಇದೆ. ಹಿಂದಿನ ಗಂಡನ್ನೇ ಪುನಃ ಮದುವೆ ಆಗಬೇಕಾದರೆ ಒಂದು ದಿನದ ಮಟ್ಟಿಗಾದರೂ ಆಕೆ ಬೇರೊಬ್ಬನೊಂದಿಗೆ ಇರಬೇಕು. ಆದ್ರೆ ಆ ವಾಕ್ಯದ ಅರ್ಥ ತಪ್ಪಿರಬಹುದು. ಆ ಸಂದರ್ಭದಲ್ಲಿ ಕೂಡಾ ಆಕೆ ಮೊದಲನೇ ಗಂಡನನ್ನೇ ಮರುವಿವಾಹವಾಗಬಹುದು. ಮೊದಲನೇ ಗಂಡ ಬಿಟ್ಟ ನಂತರ ಇನ್ನೊಬ್ಬನನ್ನು ಮದುವೆಯಾಗ್ತಾಳೆ. ಎರಡನೇ ಗಂಡ ಬಿಟ್ಟ ನಂತರ ಈ ಮೊದಲಿನ ಗಂಡ 'ನಾನೇ ನಿನ್ನನ್ನು ಮದುವೆ ಆಗ್ತೇನೆ' ಅಂತ ಹೇಳಿದ್ರೆ ಮರುವಿವಾಹವಾಗುವ ಪದ್ಧತಿಯನ್ನು ಬಹುಶಃ ಹೀಗೆ ಅಪಾರ್ಥವಾಗಿ ವ್ಯಾಖ್ಯಾನಿಸಿರಬೇಕು. ಕುರಾನಿನ ವಾಕ್ಯಗಳು ಕೂಡಾ ಅಷ್ಟು ಸುಲಭವಲ್ಲ. ಆರುಸಾವಿರದ ಆರುನೂರು ಕುರಾನಿನ ವಾಕ್ಯಗಳಲ್ಲಿ ಮುನ್ನೂರು ವಾಕ್ಯಗಳಿಗೆ ಮಾತ್ರ ಸರಿಯಾದ ಅರ್ಥ ನೀಡಲು ಪಂಡಿತರಿಗೆ ಸಾಧ್ಯವಾಗಿದೆ. ಇನ್ನು ಉಳಿದ ವಾಕ್ಯಗಳಲ್ಲಿ ಅವರಲ್ಲಿಯೇ ಈಗಲೂ ಕೂಡಾ ಭಿನ್ನಾಭಿಪ್ರಾಯವಿದೆ. ಹಿಗಾಗಿ ವಜೋತ್ ಪದ್ಧತಿ ಪಂಡಿತರ ಅಪಾರ್ಥ ವ್ಯಾಖ್ಯಾನದಿಂದ ಸೃಷ್ಟಿಯಾಗಿರುವ ಒಂದು ಕೌಟುಂಬಿಕ ಪಿಡುಗಾಗಿದೆ.

**ನಿಮ್ಮ ಕೃತಿಗಳು ಸಾಮಾಜಿಕ ಬದಲಾವಣೆ ತರುವಲ್ಲಿ ಎಷ್ಟು ಸಫಲವಾಗಿದೆ?**

ಸಾಮಾಜಿಕ ಬದಲಾವಣೆ ತರುವಲ್ಲಿ ಎಷ್ಟು ಸಫಲವಾಗಿದೆ ಅಂತ ನಂಗೆ ಗೊತ್ತಿಲ್ಲ. ಆದರೆ ವಿದ್ಯಾಭ್ಯಾಸಕ್ಕೆ ತಮ್ಮನ್ನು ಹೆಚ್ಚಿನವರು ತೆರೆದುಕೊಂಡಿದ್ದಾರೆ. ಈ ಬದಲಾವಣೆ ನಾವೆಲ್ಲ ಬರೀಲಿಕ್ಕೆ ಶುರುಮಾಡಿದ ನಂತರವೇ ಅಂತ ನಾನಂದುಕೊಂಡಿದ್ದೇನೆ. ಬೇರೆ ಸಾಮಾಜಿಕ ರೀತಿ ನಂಗೆ ಗೊತ್ತಿಲ್ಲ. ಬುರ್ಖಾ ಧರಿಸುವುದನ್ನು ಜಮಾತಿ ಇಸ್ಲಾಮಿನವರು ಕಡ್ಡಾಯ ಮಾಡಿದ್ದಾರಲ್ಲ. ಕೇರಳದಲ್ಲಿ ಬುರ್ಖಾ ಧರಿಸುವುದು ಇರಲೇ ಇಲ್ಲ. ನಾನು ಶಾಲೆಗೆ ಹೋಗುವ ಸಮಯದಲ್ಲಿ ಮತ್ತು ನನ್ನ ಮದುವೆಯ

ಸಮಯದಲ್ಲೂ ಬುರ್ಖಾವೇ ಇರಲಿಲ್ಲ. ಈಗ ತಿರುವಂನಂತಪುರದವರೆಗೂ ಬುರ್ಖಾ ವ್ಯಾಪಿಸಿದೆ. ಬುರ್ಖಾವನ್ನು ಕಡ್ಡಾಯ ಮಾಡಿ ಕೋಟಿಗಟ್ಟಲೆ ವ್ಯಾಪಾರ ಬೆಳೆಯಿತು. ಆದರೆ ಮುಸ್ಲಿಂ ಮಹಿಳೆಯರನ್ನು ಕತ್ತಲೆಯಲ್ಲಿಯೇ ಇಟ್ಟಿತು.

**ನಿಮ್ಮ ಕಥೆ ಕಾದಂಬರಿಗಳಲ್ಲಿ ಓದಿದಂತಹ ನಿಮ್ಮದೇ ಸಮುದಾಯದ ಮಹಿಳೆಯರ ಪ್ರತಿಕ್ರಿಯೆ ಯಾವ ರೂಪದಲ್ಲಾದರೂ ನಿಮ್ಮನ್ನು ತಲುಪಿದೆಯೇ?**

ಇಂತಹ ಅನೇಕ ಮಂದಿ ಹೆಣ್ಣು ಮಕ್ಕಳು ತಮ್ಮ ನೋವನ್ನು ನನ್ನೊಂದಿಗೆ ಹಂಚಿಕೊಂಡಿದ್ದಾರೆ. ಕೆಲವರು ಪತ್ರ ಬರೆದಿದ್ದಾರೆ. ಕೆಲವರು ನನ್ನನ್ನು ಭೇಟಿಯಾಗಿದ್ದಾರೆ.

**ಔದ್ಯೋಗಿಕ ರಂಗದಲ್ಲಿ ತೊಡಗಿಸಿಕೊಂಡಿರುವ ಮುಸ್ಲಿಂ ಮಹಿಳೆಯರು ಇಲ್ಲಿ ಶೋಷಣೆಯನ್ನು ತಡೆಯುವಲ್ಲಿ ಎಷ್ಟು ಸಫಲರಾಗಿದ್ದಾರೆ?**

ಔದ್ಯೋಗಿಕ ರಂಗದಲ್ಲಿ ಮುಸ್ಲಿಂ ಮಹಿಳೆಯರು ಎಲ್ಲಿದ್ದಾರೆ? ಮುಸ್ಲಿಂ ಮಹಿಳೆಯ ಔದ್ಯೋಗಿಕ ರಂಗ ಕೇವಲ ಬೀಡಿ ಕಟ್ಟುವುದು. ಸರಕಾರಿ ರಂಗದಲ್ಲಿ ಮುಸ್ಲಿಂ ಮಹಿಳೆ ಇತ್ತೀಚೆಗೆ ಇರಬಹುದೇನೋ. ಮೊದಲು, ಹತ್ತು-ಹನ್ನೆರಡು ವರ್ಷಗಳ ಹಿಂದೆ ಇರ್ಲಿಲ್ಲ. ಎಲ್ಲಿಯಾದರೂ ಆ ಕಡೆಯಿಂದ ಬಂದವರು ಉರ್ದು ಮಾತನಾಡುವವರು, ಒಂದಿಬ್ಬರು ಮೂವರು ಮಹಿಳೆಯರೋ ಏನೋ ಇಷ್ಟೇ. ಬೀಡಿ ಕಟ್ಟುವಾಗ, ಅವರು ಮನೆಯಲ್ಲಿ ಕೂಡು ಬೀಡಿ ಕಟ್ಟುತ್ತಾರೆ. ಆದರೆ ಅದನ್ನು ಕೊಂಡುಹೋಗುವುದು, ಅಲ್ಲಿನ ಹಣದ ವ್ಯವಹಾರ ಮಾಡುವುದು ಗಂಡಸರು ಅಥವಾ ಮಕ್ಕಳು. ದುಡಿಯುವುದು ಮಾತ್ರ. ಹಣ ಅವರ ಕೈಗೆ ಬರುವುದಿಲ್ಲ.

**ನಿಮ್ಮ ಕೃತಿಗಳಲ್ಲಿ ಮುಸ್ಲಿಂ ಸಂವೇದನೆ ಮತ್ತು ಸ್ತ್ರೀ ಸಂವೇದನೆಯನ್ನು ಮೇಳೈಸಿ ಬರೆಯುವ ಸಂದರ್ಭ, ಸನ್ನಿವೇಶ ಇದೆಯಾ?**

ಮುಸ್ಲಿಂ ಸಂವೇದನೆ, ಹಾಗೂ ಸ್ತ್ರೀ ಸಂವೇದನೆಯನ್ನೇ ನಾನು ಬರೆಯುತ್ತಾ ಇರುವುದು. ಮುಸ್ಲಿಂ ಸಮಾಜದಲ್ಲಿ ಸ್ತ್ರೀಯರು ಏನಾಗ್ತಾ ಇದ್ದಾರೆ, ಹೇಗಿದ್ದಾರೆ ಎಂಬುದನ್ನೇ ನಾನು ಬರೆಯುತ್ತಾ ಇರುವುದು. ಬೇರೆ ಸಮಾಜದ್ದು ಕೂಡಾ ನಾನು ಬರೆದಿದ್ದೇನೆ. ಬರೆದಿಲ್ಲ ಅಂತ ಅಲ್ಲ.

**ಮುಸ್ಲಿಂ ಮಹಿಳೆಯ ಸಂವೇದನೆಗಳು, ಉದಾ: ಶಿಕ್ಷಣವನ್ನು ಪಡೆಯಬೇಕು, ವಿದೇಶಕ್ಕೆ ಹೋಗಬೇಕು, ಅಥವಾ ಸೈಂಟಿಸ್ಟ್ ಆಗಬೇಕು ಈ ರೀತಿಯ ಸಂವೇದನೆಗಳು ನಿಮ್ಮ ಸಮಾಜದಲ್ಲಿ ಕಂಡು ಬರುತ್ತದೆಯೇ?**

ಇಲ್ಲ. ಇಂತಹ ಸಂವೇದನೆ ಎಲ್ಲೂ ಕಂಡಿಲ್ಲ. ಕೆಲವೊಂದು ಶ್ರೀಮಂತ ಮನೆತನಗಳಲ್ಲಿ ಮಾತ್ರ ಅಂತಹ ಹುಡುಗಿಯರಿದ್ದಾರೆ. ಹೆಚ್ಚಿನ ಹೆಣ್ಣು ಮಕ್ಕಳಿಗೆ ತಾನು ಕಲಿಯಬೇಕು, ವಿದ್ಯಾವಂತೆಯಾಗಬೇಕು ಎಂಬ ಭಾವನೆಯೇ ಇಲ್ಲ.

**ಅದಕ್ಕೆ ಧಾರ್ಮಿಕ ಅಡ್ಡಿಗಳೇನಾದ್ರು ಇದೆಯೆ?**

ಧರ್ಮದಲ್ಲಿ ಅಂತಹ ಅಡ್ಡಿಗಳೇನೂ ಇಲ್ಲ. ಪ್ರವಾದಿಗಳೇ ಹೇಳಿದಂತೆ ಮುಸ್ಲಿಂ ಮಹಿಳೆಯರನ್ನು ವಿದ್ಯಾಭ್ಯಾಸಕ್ಕೆ ಅರೇಬಿಯಾದಿಂದ ಚೈನಾದವರೆಗೂ ಕಳುಹಿಸಬಹುದು. ಸಾಮಾನ್ಯವಾಗಿ

ಜಮಾತ್‌ಗಳು ಇಂತದ್ದೆಲ್ಲವನ್ನು ತಡೆಯುವವರು. ಗಂಡಸರ ಬ್ರೈನ್ ವಾಶ್ ಮಾಡಿ ಹೆಣ್ಮಕ್ಕಳನ್ನು ಹೊರಗ ಕಳಿಸಬೇಡಿ ಅಂತ ಗಂಡಸರ ಮೇಲೆ ದಬ್ಬಾಳಿಕೆ ನಡೆಸುತ್ತಾರೆ.

**ಜಾಗತೀಕರಣದ ಈ ಸಂದರ್ಭದಲ್ಲಿ ಜಗತ್ತು ಸಣ್ಣದಾಗುತ್ತಾ ಇದೆ. ಇಂತಹ ಒಂದು ಸನ್ನಿವೇಶದಲ್ಲಿ ಮುಸ್ಲಿಂ ಮಹಿಳೆಯರು ಯಾವ ರೀತಿ ಇವತ್ತು ಬದುಕನ್ನು ಕಟ್ಟಿಕೊಳ್ಳಬೇಕು?**

ಮುಸ್ಲಿಂ ಮಹಿಳೆಯರೂ ಕೂಡಾ ಶಿಕ್ಷಣ ಪಡೆಯಬೇಕು. ಮುಸ್ಲಿಂ ಮಹಿಳೆಯರೂ ಕೂಡಾ ಜಾಗತೀಕರಣದ ಇಂದಿನ ಸಂದರ್ಭದಲ್ಲಿಯೂ ತಮ್ಮನ್ನು ತೆರೆದುಕೊಳ್ಳಬೇಕು. ಆದ್ರೆ ಮುಸ್ಲಿಂ ಮಹಿಳೆಯರು ತಮ್ಮನ್ನು ತೆರೆದುಕೊಳ್ಳುವುದೇ ಇಲ್ಲ ಧಾರ್ಮಿಕ ಮುಖಂಡರು- ನಿಮಗೆಲ್ಲ ಅಲ್ಲಿ ಇದೆ, ನೀವು ಹೋದ ಮೇಲೆ ಯಾವುದಕ್ಕೂ ಹೆದರುವುದು ಬೇಡ. ಮನೆಯೊಳಗಿದ್ದು ಮಕ್ಕಳನ್ನು ಹೆತ್ತು ಪೋಷಿಸಿದ್ರೆ ಸಾಕು ಅಂತ ಬೋಧನೆಗಳನ್ನು ಕೊಡ್ತಾರೆ. ಇಂತಹ ಒಂದು ಸಮಾಜದಲ್ಲಿ, ಪರಿಸ್ಥಿತಿಯಲ್ಲಿ ನಮ್ಮ ಹೆಣ್ಣು ಮಕ್ಕಳು ಏನು ಮಾಡಬಹುದು? ಹೇಳೀ. ಜಾಗತೀಕರಣ, ಉದಾರೀಕರಣ ಇಂತಹ ವಿಷಯದಲ್ಲಿ ಏನೂ ಅರಿವಿಲ್ಲ. ವಿವಾಹ ವಿಚ್ಛೇದನದ ಕ್ರಮದಿಂದಾಗಿ ನಮ್ಮ ಹೆಣ್ಣು ಮಕ್ಕಳು ಗೌರದಿಂದ ಬದುಕುತ್ತಿಲ್ಲ. ಆದುದ್ದರಿಂದ ಆಧುನಿಕ ಜಗತ್ತಿನಲ್ಲಿ ಮುಸ್ಲಿಂ ಮಹಿಳೆಯೂ ಶಿಕ್ಷಣ ಬೇಕು, ಉದ್ಯೋಗ ಬೇಕು.

**ಮುಸ್ಲಿಂ ಸಮಾಜದಲ್ಲಿ ಬಹುಪತ್ನಿತ್ವ ಕಡಿಮೆ ಆಗಿದೆಯಾ?**

ಬಹುಪತ್ನಿತ್ವ ಕಡಿಮೆ. ಮಂಗ್ಳೂರಿನಲ್ಲಿ ಬಹುಪತ್ನಿತ್ವ ಮೊದಲಿನ ಹಾಗೆ ಇಲ್ಲ. ಇಲ್ಲಿ ತಲಾಖ್ ಕೂಡಾ ಅಷ್ಟಿಲ್ಲ. ಇತ್ತೀಚೆಗಷ್ಟೇ ಜಾಸ್ತಿಯಾದದ್ದು. ಇಲ್ಲಿನ ಸಮಾಜಕ್ಕೂ ಕಾಸರಗೋಡಿನದಕ್ಕೂ ತುಂಬಾ ವ್ಯಾತ್ಯಾಸವಿದೆ. ಕೇರಳದಲ್ಲಿ ತಲಾಖ್, ಬಹುಪತ್ನಿತ್ವ ಈಗಲೂ ಕೂಡಾ ಕಡಿಮೆ ಆಗಿಲ್ಲ. ಮಂಗ್ಳೂರಿನಲ್ಲಿ ತಲಾಖ್ ಅಷ್ಟು ಇರ್ಲಿಲ್ಲ. ಎಲ್ಲಿಯಾದ್ರೂ ಒಂದೆರಡು ಆದ್ರೂ ಅದನ್ನು ಅಷ್ಟು ಹೇಳ್ತಾ ಇರಲಿಲ್ಲ. ಬಹಳ ದೊಡ್ಡ ತಪ್ಪು ಆದ ಹಾಗೆ ಸಮಾಜ ನಡ್ಕೊಳ್ತಾ ಇತ್ತು. ಬಹುಪತ್ನಿತ್ವ ಕೂಡಾ ಇರ್ಲೇ ಇಲ್ಲ. ಇತ್ತೀಚೆಗೆ ಕೂಡಾ ಮಧ್ಯಮವರ್ಗದಲ್ಲಿ ಮತ್ತು ಮೇಲ್ವರ್ಗದಲ್ಲಿ ಕೂಡಾ ಇಲ್ಲ. ಇರುವುದು ಕೆಳವರ್ಗದಲ್ಲಿ. ಇಲ್ಲಿ ಬೇಕಾದಷ್ಟು ತಲಾಖ್ ನಡೆಯುತ್ತದೆ. ಅವರಿಗೆ ಕೇಳುವವರಿಲ್ಲ. ಅವರಿಗೆ ಸಮಾಜ, ಮೌಲವಿಗಳು ಹೇಳಿದ ಹಾಗಿರ್ತಾರೆ.

**ನಿಮ್ಮ ಬರವಣಿಗೆಗೆ ಪ್ರಧಾನವಾಗಿ ಲಂಕೇಶ್ ಪತ್ರಿಕೆ ಪ್ರೋತ್ಸಾಹ ಕೊಟ್ಟಿತು ಎನ್ನುವ ಮಾತಿದೆ. ಇದನ್ನು ನೀವು ಒಪ್ಕೋತೀರಾ?**

ಹೌದು, ನಿಜ. ಇವರ್‍ಯಾರೂ ನನಗೆ ಪ್ರೋತ್ಸಾಹ ಕೊಡ್ಲಿಲ್ಲ. "ನನ್ನ ಜನ ಒಂದಾಗಬೇಕು. ದಲಿತರು, ಮುಸ್ಲಿಮರು, ಹಿಂದುಳಿದವರು" ಅಂತ ಲಂಕೇಶರು ಬರೆದರು "ನಾವೆಲ್ಲ ಚಿಕ್ಕವರಿರುವಾಗ ಇಂತಹದೆಲ್ಲ ಕಡಿಮೆ. ಇದು ಈಗ ಶುರುವಾದದ್ದು" ಅಂತ ನಾನೊಂದು ಪತ್ರಿಕ್ರಿಯೆ ಬರೆದೆ. ಲಂಕೇಶರು ಕೂಡ್ಲೆ ಅದನ್ನು ಮುಸ್ಲಿಂ ಹೆಣ್ಣಿನ ಸ್ಪಂದನ ಅಂತ ಪ್ರಥಮ ಪೇಜಿನಲ್ಲಿ ಪ್ರಕಟಿಸಿದರು. ನಾನು ಲಂಕೇಶರು ಕಥೆಗಳನ್ನು ಮೊದಲೇ ಓದ್ತಾ ಇದ್ದೆ. ಸುಧಾದಲ್ಲಿ ಬರ್ತಾ ಇತ್ತು. ಅವರು ಪ್ರಕಟಿಸಿದ ಮೇಲೆ, ಗೋಕಾಕ ಚಳವಳಿಯ ಸಮಯ ಆವಾಗ ಅದಕ್ಕೂ ನಾನೊಂದು ಲೇಖನ ಬರೆದೆ. ಮತ್ತು ನಾಜಿಮಾ ಬಾಂಗಿ ಅನ್ನುವ ಮುಸ್ಲಿಂ ಮಹಿಳೆ ವಿಜಾಪುರದಲ್ಲಿ ಸಿನೆಮಾ ನೋಡದಕ್ಕಾಗಿ,

ಮೌಲವಿಗಳೆಲ್ಲ ಸೇರಿಕೊಂಡು ಅವಳ ಮನೆಗೆ ಕಲ್ಲು ಬಿಸಾಡಿದರು, ಗಲಾಟೆ ಮಾಡಿದರು. ಅದಕ್ಕೆ ನಾನು ಮತ್ತು ಬಾನುಮುಷ್ತಾಕರು ಇಬ್ಬರೂ ಅದನ್ನು ವಿರೋಧಿಸಿ ಲೇಖನ ಬರೆದೆವು. ಇದೆಲ್ಲಾ ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾಯಿತು. ನಂತರ ಲಂಕೇಶ್ ನಂಗೊಂದು ಪತ್ರ ಬರೆದ್ರು. ನಿಮ್ಮ ಸಮಾಜದ ಒಂದು ಕಥೆ ಅಥವಾ ಕಾದಂಬರಿ ಬರೆದು ಕೊಡಿ ಸಣ್ಣದಾಗಿ ಅಂತ. ಆಗ ಕೇವಲ ಏಳು ದಿವಸದಲ್ಲಿ 'ಚಂದ್ರಗಿರಿಯ ತೀರದಲ್ಲಿ' ಬರೆದೆ. ಅವರು ಕೇಳಿದ ಕೂಡಲೇ ಕೊಡಬೇಕು. ಯಾಕೆಂದ್ರೆ ಇನ್ನು ತಡ ಮಾಡಿದ್ರೆ ಅವರು ಬೇಡ ಎನ್ನುತ್ತಾರೋ ಎಂದುಕೊಂಡು, ಆದಷ್ಟು ಸಣ್ಣದಾಗಿಯೇ ಒಂದು ೫೦ ಪುಟದಷ್ಟು ಚಂದ್ರಗಿರಿಯ ತೀರದಲ್ಲಿ ಬರೆದೆ. ಆ ಕೂಡ್ಲೆ ಬಹಳ ಖುಷಿಯಾಯಿತು. ಅವರು ಅದನ್ನು ಪ್ರಕಟಿಸಿದ್ರು. ನಂತರ ನನ್ನ ಎರಡು ಮೂರು ಕಾದಂಬರಿಗಳು ಅವರಲ್ಲಿಯೇ ಬಂದವು. ಲಂಕೇಶ್ ಪತ್ರಿಕೆ ಶುರುಮಾಡದೇ ಇರ್ದಿದ್ರೆ ಸಾರಾ ಅಬೂಬಕರ್ ಅನ್ನುವ ಲೇಖಕಿ ಇರ್ತಾ ಇರಲಿಲ್ಲ. ನಾನಿರ್ತಾ ಇದ್ದೆ.

**ಕನ್ನಡ ಸಾಹಿತ್ಯ ನಿಮ್ಮನ್ನು ಬಂಡಾಯ ಸಾಹಿತ್ಯದ ಹಿನ್ನೆಲೆಯಿಂದ ಗುರುತಿಸಿಕೊಂಡಿದೆ. ಇದಕ್ಕೆ ನೀವೇನು ಹೇಳುತ್ತೀರಿ?**

ಏನು ಹೆಸರು ಬೇಕಾದ್ರು ಕೊಡಿ. ನಾನು ಬರೆಯುತ್ತಾ ಇರುವುದನ್ನು ಬರೆಯುತ್ತಾ ಇರುತ್ತೇನೆ. ಯಾವ ಹೆಸರು ಕೊಟ್ಟರೂ ನಂಗೆ ಏನೂ ಬೇಜಾರು ಇಲ್ಲ, ತೊಂದರೆಯೂ ಇಲ್ಲ. ಇದ್ದುದನ್ನು ಇದ್ದ ಹಾಗೆ ಹೇಳುವುದು. ಪ್ರತಿಭಟನೆ ಅನ್ನುವುದು ನಮ್ಮ ಕುಟುಂಬದಲ್ಲಿ ಮೊದಲಿನಿಂದಲೇ ಇದೆ. ನಾನು ಚಿಕ್ಕವಳಿರುವಾಗ ಮನೆಯಲ್ಲಿ ಏನಾದ್ರೂ ಅನ್ಯಾಯ ಆದ್ರೆ ಅದಕ್ಕೆ ನಾನು ಜೋರು ಮಾಡ್ತಾ ಇದ್ದೆ. ಇಂಥದೆಲ್ಲಾ ನನ್ನ ತಾಯಿಯಿಂದ ಬಂತು.

**ಇತ್ತೀಚೆಗೆ ಸಾಮಾನ್ಯವಾಗಿ ಮುಸ್ಲಿಂಮರು ಅಂದ್ರೆ ಭಯೋತ್ಪಾದಕರು ಅನ್ನುವ ಹಾಗೆ ನಿಂದಿಸ್ತಾ ಇದ್ದಾರೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಮುಸ್ಲಿಮರು ಎಲ್ಲರೂ ಭಯೋತ್ಪಾದಕರಲ್ಲ. ಹಾಗೆ ನೋಡಿದರೆ ಎಲ್ಲಾ ಸಮಾಜದವರನ್ನು ಹೇಳಬಹುದು. ಎಲ್ಲ ಸಮಾಜದಲ್ಲೂ ಕೆಟ್ಟವರು, ಒಳ್ಳೆಯವರು ಇದ್ದೇ ಇರುತ್ತಾರೆ.

□

---

ಪ್ರೊ. ಅಭಯಕುಮಾರ್
ಕನ್ನಡ ವಿಭಾಗ, ಮಂಗಳಗಂಗೋತ್ರಿ
ಕೊಣಾಜೆ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳೂರು ಜಿಲ್ಲೆ

# ಅವರು

ಬಾನುಮುಷ್ತಾಕ್

ಭುವಿಯ ತೋಳುಗಳ ಹಿಡಿದು
ಗಿರಿ ಗಿಟ್ಟಲೆ ಯಾಡಿಸಿದ ಅವರು
ಉಬ್ಬಿದ ತೋಳ ಮಾಂಸ ಖಂಡಗಳ
ಕಂಡು ಹಿಗ್ಗಿ, ನನ್ನ ಜೀವಂತ ಸಮಾಧಿ
ಮಾಡಲುವ ಅವಳ ಎದೆಯ ಬಗಿದರು.

ಚಂದ್ರನ ಬಾಯ ಮೇಲೆ ಬೆರಳಿಟ್ಟು
ಅವನಂಗಳದಿ ವಿಹಾರ ನಡೆಸಿದ ಅವರು
ಎಲ್ಲಾ ಆಕರ್ಷಣೆಗಳ ಮೀರಿ ಲಾಗ ಹಾಕಿ
ನನ್ನ ಜೀವಂತ ಸುಡಲು ಕಟ್ಟಿಗೆಯೊಟ್ಟಿದರು.

ಪರ್ವತಗಳ ಕಾಯಿಗಳನು ನಡೆಸಿ
ಚದುರಂಗವಾಡಿದ ಅವರು ಬೆವರ
ಹನಿಗಳ ತೊಡೆಯುತಾ ನನ್ನನು
ಶತಮಾನಗಳಾಚೆ ಅಟ್ಟಿ ಒಬ್ಬರೇ
ಓಡಿ ಬಹುಮಾನ ಪಡೆದರು.

ನೆಲದಿಂದಲೇ ಆಕಾಶಕಾಯಗಳ
ಕಣ್ಣಲಿ ಕಂಗಳ ನೆಟ್ಟು ಬುಗುರಿಯಾಡಿಸಿದ
ಅವರು ನನ್ನ ಕಣ್ಣ ವಿಕಿರಣಕಂಜಿ
ಸುತ್ತಲೂ ಸೀಸದ ಗೋಡೆಗಳ ಕಟ್ಟಿದರು.

ಸಾಗರಗರ್ಭದಲಿ ಚಿನ್ನಾಟವಾಡಿ
ಬೆತ್ತಲಾದ ಅವರು ನನ್ನ ಬಸಿರ ನಿಗೂಢತೆಗೆ
ಬೆದರಿ, ಅಸೂಯೆಯಿಂದ ಗುರುತಿಗಾಗಿ
ಕಿರೀಟ ತೊಟ್ಟರು.

ನಾನು ಹೊಲಿದ, ಬಣ್ಣ ಕೊಟ್ಟ ಬಂಗಾರದ
ಚೆಂಡುಗಳ ಹಿಡಿದಾಡಿದ ಅವರು, ಅವುಗಳ
ನೆಲಮಾಳಿಗೆಯೊಳಗೆ ನಿಲುವಿನ ಮೇಲೆ,
ಗವಿ-ಗಹ್ವರದೊಳಗೆ ಬಚ್ಚಿಟ್ಟು ಅಮಾಯಕರಂತೆ
ಬಾಯಾ ಸರೆಗೆ ನನ್ನೆದೆರು ನಿಂತರು



ಬಾನುಮುಷ್ತಾಕ್
ನಂ. ೨೦, ಡಿ.ಎ.ಆರ್.ಪಿ. ಕ್ವಾಟ್ರಸ್ ರಸ್ತೆ
ಹಾಸನ - ೫೭೩ ೨೦೧

# ಆಧುನಿಕ ಕಲೆಯ ಬೆನ್ನೆಲುಬು : ಪಿಕಾಸೊ

ಕೆ.ವಿ. ಸುಬ್ರಹ್ಮಣ್ಯಂ

"We all know that Art is not truth. Art is a lie that makes us vealize truth, at least the truth that is given us to understand..."[1]

—Pablo picasso

೧೯೭೩ರ ಏಪ್ರಿಲ್ ೮ರ ಭಾನುವಾರದಂದು ತನ್ನ ೯೧ನೆಯ ವಯಸ್ಸಿನಲ್ಲಿ ಹೃದಯಾಘಾತದಿಂದ ಕಲಾವಿದ ಪಿಕಾಸೊ ಸಾವನಪ್ಪಿದಾಗ ಹೇಳಿದ ಅಂತಿಮ ಪದಗಳು "A Drink to me'. ಸಾವಿನ ಹಾಸಿಗೆಯಲ್ಲಿದ್ದಾಗ ತನ್ನ ಹೃದಯ ತಜ್ಞ ವೈದ್ಯರಿಗೆ "ನೀವು ಮದುವೆಯಾಗದೆ ತಪ್ಪು ಮಾಡಿದಿರಿ; ಅದು ಅತ್ಯಂತ ಉಪಯುಕ್ತ" ಎಂದೂ ಹೇಳಿದ ವಿಖ್ಯಾತ ಪಿಕಾಸೋ, ಹೆಣ್ಣು-ಹಣ-ಮದ್ಯಗಳ ನಡುವೆ ತುಂಟಾಟ ಆಡಿದವನು. ಈ ಬರೆಹ ಇಂದಿನ ದಿನಗಳಲ್ಲಿಯೂ ಬರೆಸಿಕೊಳ್ಳುವಷ್ಟು ಪ್ರಭಾವಶಾಲಿಯಾದ ಪಿಕಾಸೋ ಅವನ ಅಂತಿಮ ದಿನಗಳಲ್ಲಿ ಅಕ್ರಮ ಚಟುವಟಿಕೆಗಳಲ್ಲಿಯೂ ತೊಡಗಿದ್ದು ಅಚ್ಚರಿಯಷ್ಟೇ ಗಾಬರಿಯನ್ನೂ ಉಂಟುಮಾಡುತ್ತದೆ. ತನ್ನ ಶಿಲ್ಪಗಳನ್ನು ಕಂಚಿನ ಮಾಧ್ಯಮದಲ್ಲಿ ನಕಲು ಮಾಡುವ, ಅಥವಾ ರಾಷ್ಟ್ರದ ಹೊರಕ್ಕೆ ಹಣವನ್ನು ಕಳ್ಳಸಾಗಾಣಿಕೆ ಮಾಡುವ ಕೆಲಸಗಳಲ್ಲಿ ಅವನು ತೊಡಗಿದ್ದನು. ಹೀಗಾಗಿಯೇ ನೋಟುಗಳ ಅಕ್ರಮ ಸಾಗಾಣಿಕೆಯಲ್ಲಿ ಒಮ್ಮೆ ಹಿಟ್ಲರನ ಅಭಿಮಾನದ ಶಿಲ್ಪಿ ಅರ್ನೋ ಬ್ರೇಕರ್ ರಕ್ಷಿಸಿದ್ದುಂಟು.

೧. ಮಾರಿಯಸ್ ಡೆ ಝಾಯಸ್‌ನೊಂದಿಗಿನ ಸಂದರ್ಶನವೊಂದರಲ್ಲಿ ಪಿಕಾಸೊ. 'Picasso speaks', The arts (Nwe York), may, ೧೯೨೩ರಲ್ಲಿ ಪಿಕಾಸೊ ಒಪ್ಪಿಗೆ ಪಡೆದ ಅನುವಾದಿತ ಸಂದರ್ಶನ ಪ್ರಕಟವಾಯಿತು.

ಬ್ರೋಕರ್ ತನ್ನ ಬಯಾಗ್ರಫಿಯಲ್ಲಿ ಹಿಟ್ಲರನ "In politics all the artists are innocents...." ಎಂಬ ಮಾತುಗಳನ್ನು ನೆನಪು ಮಾಡಿಕೊಂಡಿದ್ದಾನೆ. ಯಾವ ಅನಿವಾರ್ಯ ಸಂದರ್ಭಗಳ ಹಿನ್ನೆಲೆಯಲ್ಲಿ ಪಿಕಾಸೊ ಹಾಗೆಲ್ಲಾ ನಡೆದುಕೊಳ್ಳಬೇಕಾಗಿ ಬಂದಿರಬಹುದು? ಸ್ಪಷ್ಟವಾಗಿಲ್ಲ.

೧೯೭೨ರ ಜೂನ್ ೩೦ರಂದು ಅತ್ಯಂತ ಹೆಚ್ಚಿನ ಮಾನಸಿಕ ಹಿಂಸೆಯನ್ನು ಅನುಭವಿಸಿದ ಅವನು ಆ ಒತ್ತಡದ ಕಾರಣಕ್ಕಾಗಿ ತನ್ನ ಸ್ವಭಾವ ಚಿತ್ರವನ್ನು ಚಿತ್ರಿಸಿದನು. ಮರುದಿನ ಅವನನ್ನು ಭೇಟಿ ಮಾಡಿದ ಕಲಾ ಇತಿಹಾಸಕಾರ ಪಿಯರ್ರೆ ಡೈಕ್ಸ್‌ನಿಗೆ ಪಿಕಾಸೊ "ಇದನ್ನು ನಿನ್ನೆಯಷ್ಟೇ ಚಿತ್ರಿಸಿದೆ; ಹಿಂದೆಂದೂ ಹೀಗೆ ಚಿತ್ರಿಸಿರಲಿಲ್ಲ" ಎಂದನು. ಭಾವಚಿತ್ರ ನೋಡುತ್ತಿದ್ದ ಡೈಕ್ಸ್ ಏನನ್ನೂ ಹೇಳದೆ ಹಾಗೆಯೇ ಕೇಳಗಿಟ್ಟನು. ಪಿಕಾಸೋ ಬಹುಕಾಲ ಧರಿಸಿ, ಹಲವರನ್ನು ಮೂರ್ಖರನ್ನಾಗಿಸಿದ ಮುಖವಾಡಗಳ ಬಳಿ ಆ ಭಾವಚಿತ್ರವನ್ನು ಇಡಲಾಗಿತ್ತು!

೧೮೮೧ರ ಅಕ್ಟೋಬರ್ ೨೫ರಂದು ರಾತ್ರಿ ಸ್ಪೈನ್‌ನ ಮಾಲಗಾದಲ್ಲಿ ಪಿಕಾಸೊ ಹುಟ್ಟಿದಾಗ ಉಸಿರಾಟದ ತೊಂದರೆ. ಅಳುತ್ತಲೂ ಇರಲಿಲ್ಲ. ಸತ್ತು ಹುಟ್ಟಿದ ಮಗು ಎಂದು ತೀರ್ಮಾನಿಸಿ ತಾಯಿ ನಿರ್ಲಕ್ಷಿಸಿದಳು. ಆದರೆ ಸಂಬಂಧಿಕರೊಬ್ಬರು ಅರ್ಹ ವೈದ್ಯರ ನೆರವಿನಿಂದ ರಕ್ಷಿಸಿದರು. ಪಾಬ್ಲೋ ರಿಯ್ಜು ಪಿಕಾಸೊ ಬದುಕಿಕೊಂಡ. ಸ್ಪೈನ್ ಸಂಪ್ರದಾಯದಂತೆ ತಂದೆಯ ಹೆಸರಿನಿಂದ Pablo ಹಾಗೂ ತಾಯಿಯ ಹೆಸರಿನಿಂದ Ruiz ಗಳನ್ನು ಹೊಂದಿಸಿ Pablo Raiz Picdasso ಎಂದು ಕರೆಯಲಾಯಿತು. ಪಿಕಾಸೊನ ತಂದೆ ಶಾಲೆಯೊಂದರಲ್ಲಿ ಕಲಾಶಿಕ್ಷಕನಾಗಿದ್ದನು. ತಾಯಿ ಕಪ್ಪಾಗಿ, ಕಡಿಮೆ ಎತ್ತರವಿದ್ದರೂ ಪಿಕಾಸೊ ತನ್ನ ತಾಯಿಯನ್ನು ತನ್ನ ಮಾದರಿಯಾಗಿ ಭಾವಿಸಿದ್ದನು. ಬಾಲ್ಯದಿಂದಲೇ ಚಿತ್ರಕಲೆಯತ್ತ ಆಕರ್ಷಿತನಾಗಿದ್ದ ಅವನು ಶಾಲಾ ಕಲಿಕೆಯಲ್ಲಿ ಹೆಚ್ಚಿನ ಆಸಕ್ತಿ ತೋರಲಿಲ್ಲ. ಒಂದು ರೀತಿಯಲ್ಲಿ 'ಆಂಗ್ರಿ ಎಂಗ್ ಮ್ಯಾನ್' ನಂತೆ ಶಿಸ್ತು, ಆಜ್ಞೆಗಳನ್ನು ಪರಿಪಾಲಿಸದ ಪಿಕಾಸೊ ಶಾಲಾ ಮುಖ್ಯಸ್ಥರಿಂದಲೇ ಶಾಲೆಯೊಳಕ್ಕೆ ಪಾರಿವಾಳಗಳೊಂದಿಗೆ ಬರಲು ಅಪ್ಪಣೆ ಪಡೆದಿದ್ದ! ಶಾಲಾ ಕಲಿಕೆಗೆ ಹೀಗಾದರೂ ಗಮನ ನೀಡಲಿ ಎಂಬ ಉದ್ದೇಶದಿಂದ ಆಡಳಿತ ಮಂಡಳಿ ಈ ಒಪ್ಪಿಗೆ ನೀಡಿತ್ತು. ಕಲಿಕೆಯತ್ತ ಗಮನ ನೀಡದೆ ಪಿಕಾಸೊ ಪಾರಿವಾಳಗಳನ್ನು ಚಿತ್ರಿಸುವುದರಲ್ಲಿ ಮಗ್ನನಾದ; ಹೊರಗೆ ಗೂಳಿಕಾಳಗ ನೋಡುವುದರಲ್ಲಿ ಸಂತೋಷ ಕಂಡುಕೊಂಡ.

ಪಿಕಾಸೊ ತಂದೆಯನ್ನು ಎಷ್ಟು ಪ್ರೀತಿಸುತ್ತಿದ್ದನೆಂದರೆ ಇತರರ ಭಾವಚಿತ್ರಗಳನ್ನು ಚಿತ್ರಿಸುವಾಗಲೆಲ್ಲ ತನ್ನ ತಂದೆಯ ನೆನಪು, ರೂಪ ಕಾಡುತ್ತಿದ್ದುದಾಗಿ ಹೇಳಿಕೊಂಡಿದ್ದಾನೆ. ಮಗನ ಆಸಕ್ತಿಯನ್ನು ಗುರುತಿಸಿದ ತಂದೆ ಸಾಂಪ್ರದಾಯಿಕ ಚಿತ್ರವಸ್ತುಗಳಾದ ಪ್ರಕೃತಿ ಹಾಗೂ ಜನರನ್ನು ಚಿತ್ರಿಸಲು ಪ್ರೋತ್ಸಾಹಿಸಿದನು. ಆದರೆ ಅವನ ಬಂಡುಕೋರತನವನ್ನು ಎಷ್ಟೇ ಪ್ರಯತ್ನಿಸಿದರೂ ತಿದ್ದಲಾಗಲೇ ಇಲ್ಲ. ಇದೇ ಗುಣ ಪಿಕಾಸೋನ ನಡತೆಯ ವಿಶಿಷ್ಟ ಲಕ್ಷಣವೂ ಆಯಿತು. ಬಾಲ್ಯದಲ್ಲೇ ಕಿರಿಯ ತೊಂದರೆಯಿಂದ ಖಾಸಗಿ ಸಂಸ್ಥೆಯೊಂದರಲ್ಲಿ ಕಲಿಯಲು ಸೇರಿದ ಪಿಕಾಸೋ ಎಲ್ಲಿಯೂ ಓದು, ಬರೆಹ, ಲೆಕ್ಕ ಇತ್ಯಾದಿಗಳನ್ನು ಸಮಾಧಾನಕರವಾಗಿ ಕಲಿಯಲೇ ಇಲ್ಲ.

ಹುಡುಗರ ಗೆಳೆತನ ಇಷ್ಟಪಡದ ಪಿಕಾಸೊ ಹುಡುಗಿಯರ ಉಡುಪುಗಳಲ್ಲಿ ಆಸಕ್ತಿ ತೋರಿದ. ಸೂರ್ಯ ಮತ್ತು ಸಮುದ್ರಗಳ ಕಲ್ಪನಾತೀತ ಸೌಂದರ್ಯವನ್ನು ಬಾಲ್ಯದಲ್ಲೇ ಅಲ್ಲದೆ ತನ್ನ ಅಂತಿಮ

ದಿನಗಳಲ್ಲೂ ನೋಡುವ ಗೀಳು ಹೊಂದಿದ್ದ. ಹೀಗಾಗಿಯೇ ಸೂರ್ಯ ಮತ್ತು ಸಮುದ್ರಗಳು ಅವನ ಸಹಚರರಂತೆ ಜೀವನಪಿಡೀ ಉಳಿದುಕೊಂಡವು.

೧೮೮೯-೧೮೯೦ರ ನಡುವೆ ಅವನ ಕುಟುಂಬ ಹಲವು ತೊಂದರೆಗಳಿಗೆ ಒಳಗಾಗಿ ೧೮೯೧ರಲ್ಲಿ ಲಾಕೊರುನಾಗೆ ವಾಸ ಬದಲಿಸಿತು. ಶಾಲಾ ಶಿಕ್ಷಣವನ್ನು ತಂದೆಯ ಮಾರ್ಗದರ್ಶನದಲ್ಲಿ ಪಡೆದ ೧೦ ವರ್ಷದ ಪಿಕಾಸೋ ತನ್ನ ಮೊದಲ ಕೃತಿಗಳ ಸರಣಿಯನ್ನು ಚಿತ್ರಿಸಿದನು. ೧೩ನೆಯ ವಯಸ್ಸಿಗೇ ತಂದೆಯ ನೆರವಿನೊಂದಿಗೆ ಕಲಾಪ್ರದರ್ಶನವೊಂದನ್ನು ವ್ಯವಸ್ಥೆ ಮಾಡಿದನು. ಬದಲಾವಣೆ ಬಯಸಿದಂತೆ ತನ್ನನ್ನೇ ಅಲ್ಲದೆ ತನ್ನ ಕುಟುಂಬ, ಸುತ್ತಲಿನ ಎಲ್ಲವನ್ನೂ ಚಿತ್ರಿಸಲಾರಂಭಿಸಿದನು. ತಂದೆಯ ಮಾರ್ಗದರ್ಶನದಲ್ಲಿ ಕಲಿತ ಪಿಕಾಸೊ ಚಿತ್ರಿಸಲು ಬಳಸುವ ಪದಾರ್ಥ (material) ಗಳ ಸಾಧ್ಯತೆಗಳನ್ನು ಹೊಸ ರೀತಿಗಳಲ್ಲಿ ದುಡಿಸಿಕೊಳ್ಳುವ ಹುಡುಕಾಟದಲ್ಲಿ ತೊಡಗಿದನು. ಎಲ್ಲರಿಗಿದ್ದಂತೆ ಕುಂಚ, ಬಣ್ಣಗಳು ಮಾತ್ರ ಚಿತ್ರಿಸುವ ಪರಿಕರಣಗಳಾಗಿರಲಿಲ್ಲ; ಚಾಕು, ಕತ್ತರಿ, ಪಿನ್ನುಗಳು, ಅಂಟು, ಇತ್ಯಾದಿಗಳೂ ದುಡಿಸಿಕೊಳ್ಳಲ್ಪಟ್ಟವು.

ಗಂಟೆಗಟ್ಟಲೇ ಕುಳಿತು ರೇಖಿಸುತ್ತಿದ್ದನು. ಬಿಡುವಿನ ದಿನಗಳಲ್ಲಿ ಅಜ್ಜಿ ಕಥೆ ಹೇಳಿ ಪುನರ್ ನಿರೂಪಿಸಲು ಹೇಳಿದರೆ, ಕೆಲವೊಮ್ಮೆ ತಾನೇ ಅವುಗಳನ್ನು ಸೃಷ್ಟಿಸಿದಂತೆ ಹೊಸತನ ಲೇಪಿಸಿ ಪಿಕಾಸೊ ಕಥೆ ಹೇಳುವ ಸಾಮರ್ಥ್ಯ ಹೊಂದಿದ್ದ. ತಂದೆ ಮಗನನ್ನು ಗೂಳಿಕಾಳಗಗಳಿಗೆ ಕರೆದೊಯ್ಯುತ್ತಿದ್ದನು. ಇತರರನ್ನು ಟೀಕಿಸುವ ಗುಣವನ್ನು ತಾಯಿಯಿಂದ ಕಲಿತ ಪಿಕಾಸೊ ಸಂದರ್ಭಕ್ಕೆ ತಕ್ಕಂತೆ ಇರುವುದನ್ನು ಕಲಿತನು. ಕಲಾಶಾಲೆಯಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಅವರ ನೋಟ್‌ಬುಕ್‌ಗಳಲ್ಲಿ 'one must learn to pating' ಎಂದು ಬರೆಸಿ, ಆ ವಾಕ್ಯವನ್ನು ನಕಲು ಮಾಡಲು ಹೇಳುತ್ತಿದ್ದರು. ಪಿಕಾಸೊ ಅದನ್ನು ತಿರುಗು ಮುರುಗು ಮಾಡಿ 'one must not learn to paint' ಎಂದು ಬರೆದು ಅದನ್ನು ಹಲವು ಬಾರಿ ನಕಲು ಮಾಡಿದ್ದನು. ೧೮೯೫ರಲ್ಲಿ ತಂಗಿಯ ಸಾವಿನ ಕಾರಣ ಅವನ ಕುಟುಂಬ ಅತೀವ ದುಃಖದಲ್ಲಿ ಮುಳುಗಿತು. ಆ ಮುಂದಿನ ಹಲವಾರು ತಿಂಗಳು ಪಿಕಾಸೊ ಹೆಚ್ಚಿನ ತೀವ್ರತೆಯಿಂದ ಚಿತ್ರಿಸಿದನು. ಮನೆಯವರೊಂದಿಗೆ ಬಾರ್ಸಿಲೋನಿಯಾಗೆ ಹೋಗಬೇಕಾಗಿ ಬಂದಿತು. ಹೀಗೆ ಆಗಾಗ ಅಲೆಮಾರಿಯಂತಾದರೂ ಅವನ ಚಿತ್ರಿಸುವ ಹಂಬಲ ಕಡಿಮೆಯಾಗಲಿಲ್ಲ. ಅಂದಿನ ಸಂದರ್ಭದ ಅವನ ಮನಸ್ಸಿನ ಸ್ಥಿತಿಯಂತೆ 'Christ blessing the Devil' ಮೂಡಿಬಂದಿತು. 'the Holy in Egypt' ಮತ್ತು 'Alter to the blessed virgin' ಸಹ ಮೂಡಿಬಂದವು. ೧೫ರ ಹರೆಯದಲ್ಲಿ ಕಲಾಶಾಲೆಯ ಪರೀಕ್ಷೆಯಲ್ಲಿ ತನ್ನನ್ನು ಅತ್ಯುತ್ತಮ ಮಟ್ಟದಲ್ಲಿ ಬಿಂಬಿಸಿಕೊಂಡನು. ೧೮೯೬ರಲ್ಲಿ ಹಲವಾರು ಧಾರ್ಮಿಕ ಚಿತ್ರಗಳನ್ನು ಚಿತ್ರಿಸಿದನು. 'The Renunciation', 'the last supper' ಇತ್ಯಾದಿಗಳ ನಡುವೆ ಕ್ರಿಸ್ತನ ಚಿತ್ರವೊಂದು ಅಕೆಡೆಮಿಕ್ ಲಕ್ಷಣಗಳನ್ನು ಮೀರಿ ಭಾವಾತೀತವಾಗಿ ಚಿತ್ರತಗೊಂಡಿತ್ತು.

ಚಿತ್ರಿಸುವುದರಲ್ಲಿ ಪಡೆದ ಅನಿರೀಕ್ಷಿತ ಯಶಸ್ಸು ಬಾಲ್ಯದ ಕಲಾವಿದನಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು ಸಾಧಿಸುವಂತೆ ತೋರಿತು. ಆರ್ಥಿಕ ತೊಂದರೆಗೆ ಸಿಲುಕಿದ ಕುಟುಂಬದ ಪರಿಸ್ಥಿತಿ ಮ್ಯಾಡ್ರಿಡ್‌ಗೆ ಹಿಂತಿರುಗಿ ಸಾಮಾನ್ಯ ಶಿಕ್ಷಣವನ್ನು ಮುಂದುವರೆಸುವಂತೆ ಮಾಡಿತಾದರೂ, ಪಿಕಾಸೊ ಹಾಗೆ ಮಾಡದೆ ಗ್ರಾಫಿಕ್ ಕಲಾವಿದನಾಗಿ ವೃತ್ತಿಯನ್ನು ಪ್ರಾರಂಭಿಸಿಯೇಬಿಟ್ಟನು. ಪತ್ರಿಕೆ

ಮತ್ತಿತರ ಮಾಧ್ಯಮಗಳಿಗೆ ರೇಖಾಚಿತ್ರಗಳನ್ನು ಕೊಡಲಾರಂಭಿಸಿದನು. ಕೊಠಡಿಯ ಚಿತ್ರಿಸುವ ಭಾಗದಲ್ಲಿ ಬಣ್ಣಗಳು ಎಲ್ಲೆಂದರಲ್ಲಿ ಹರಡಿಕೊಂಡಿದ್ದವು. ಮನೆಯ ಸೂರಿನ ಮೇಲಿನಿಂದ ಕ್ಲಿಕ್ಕಿಸಿದ ಛಾಯಾಚಿತ್ರಗಳು ಕೋಣೆಯಲ್ಲಿ ತುಂಬಿದ್ದವು.

೧೮೯೭ರಲ್ಲಿ ಅವನ ವಿಶಿಷ್ಟ ಚಿತ್ರ 'Science et Charite' ಮ್ಯಾಡ್ರಿಡ್‌ನ ಲಲಿತ ಕಲಾ ಪ್ರದರ್ಶನದಲ್ಲಿ 'ಗೌರವಾನ್ವಿತ ಉಲ್ಲೇಖ' ಪಡೆಯಿತು.[2] ಈ ಸಾಧನೆ ಅದೇ ಊರಿನಲ್ಲಿ ಶಾಶ್ವತವಾಗಿ ನೆಲೆಸುವ ನಿರ್ಧಾರ ಕೈಗೊಳ್ಳುವಂತೆ ಮಾಡಿತು. ಅಲ್ಲಿ ಅವನ ಸುತ್ತಲಿನ ಬದುಕು, ಕೆಫೆ, ಬೀದಿ, ಮತ್ತು ವ್ಯಭಿಚಾರದ ಮನೆಗಳು ಅವನ ಅಭಿವ್ಯಕ್ತಿಗೆ ಆಕರಗಳಾದವು. ಮರು ವರ್ಷ ತೀವ್ರ ಅನಾರೋಗ್ಯಕ್ಕೆ ಒಳಗಾಗಿ ಇಡೀ ವರ್ಷ ಕಟಾಲನ್ ಹಳ್ಳಿಯ ಬೀದಿಗಳಲ್ಲಿ ಅವನ ಸಮಯ ಕಳೆಯಿತು. ೧೮೯೯ರಲ್ಲಿ ಸ್ವಲ್ಪ ದಪ್ಪನಾಗಿದ್ದ ಅವನು ತನ್ನ ಸ್ವಂತ ಕಾಲ ಮೇಲೆ ನಿಲ್ಲಲು, ಹಳ್ಳಿಯಲ್ಲಿ ಬದುಕಲು ತೀರ್ಮಾನಿಸಿದನು.

ತನಗಾಗಿ ಹೊಸತೇನನ್ನಾದರೂ ಮಾಡಲು ಖಾತರನಾಗಿದ್ದ ಪಿಕಾಸೊ ಕಲಾಶಾಲೆಯ ತರಬೇತಿಯನ್ನು ಮುಂದೂಡಿದನು. ತನ್ನ ಕುಟುಂಬದವರು ಯೋಜಿಸಿದ್ದ ಭವಿಷ್ಯದ ಬದುಕಿನ ರೀತಿಯನ್ನು ತಿರಸ್ಕರಿಸಿದನು. ತನ್ನ ಹೆಸರಿನ ಮುಂದಿದ್ದ ತಾಯಿಯ ಹೆಸರಿನ ಮೊದಲ ಪರ 'ಪಿಕಾಸೊ'ವನ್ನು ಉಳಿಸಿಕೊಂಡು ತಂದೆಯ ಹೆಸರಿನ 'ರುಯ್ಝ್' ಪದವನ್ನು ಸದಾ ಕಾಲಕ್ಕೂ ಕೈಬಿಟ್ಟನು! ಆನಂತರ ಅವನ ಹೆಸರು ಪಾಬ್ಲೊ ಪಿಕಾಸೊ ಅಷ್ಟೆ.

ಬಾರ್ಸಿಲೋನಾದಲ್ಲಿ ಪಿಕಾಸೋಗೆ ಹೆಚ್ಚು ಗೆಳೆಯರಿದ್ದರು. ಬಹುತೇಕರು ಕಲಾವಿದರೇ ಅಲ್ಲದೆ ಸಾಹಿತ್ಯ ರಂಗದವರಾಗಿದ್ದರು. ಅವರಿಗೆಲ್ಲ ಪ್ಯಾರೀಸ್ ನೋಡುವ ಆಸೆಯಿತ್ತು. ಅವರೆಲ್ಲರ ಪ್ರಾಯೋಜನೆಯಲ್ಲಿ ೧೯೦೦ರಲ್ಲಿ ೫೦ ಭಾವಚಿತ್ರಗಳನ್ನು ಪ್ರದರ್ಶಿಸಿದನು. ತಾನು ಕಂಡ ಹಲವರ ಮುಖಗಳೊಂದಿಗೆ ನಡೆಸಿದ ಹಲವು ನೆಲೆಯ ತುಂಟಾಟದ ಒಳನೋಟಗಳಿದ್ದ ಪ್ರದರ್ಶನ ಅದು. ಪ್ರದರ್ಶನಲ್ಲಿದ್ದ 'Last Moments' ಕೃತಿಯು ಸ್ಪೈನ್ ವಿಭಾಗದ ಪ್ಯಾರೀಸ್ ಪ್ರದರ್ಶನಕ್ಕೆ ಆಯ್ಕೆಯಾಯಿತು. ಆ ಕೃತಿಯ ಪ್ರದರ್ಶನ ನೋಡಲು ಪ್ಯಾರೀಸಿಗೆ ತಾನೇ ಸ್ವತಃ ಹೋಗುವುದೇ ಅವನ ಮುಖ್ಯ ಉದ್ದೇಶವಾಯಿತು; ಪ್ಯಾರೀಸ್‌ಗೆ ಹೋಗಿ ನೋಡಿದ; ಸಂತಸಪಟ್ಟ.

'ಇಂಪ್ರೆಷನಿಸಂ' ನೊಂದಿಗಿನ 'ಮಾಡರ್ನಿಸಮ್' ಬಾರ್ಸಿಲೋನಿಯಾದ ಚಿತ್ರಕಲೆಯಲ್ಲಿ ಕಾಣಿಸಿಕೊಂಡಿತು. ಪಿಕಾಸೊ ಮುಖ್ಯವಾಗಿ ಅಂದಿನ ಶೈಲಿಯ ಜೀವಧ್ವನಿಯನ್ನು ದಾಖಲಿಸಲು ಪ್ರಯತ್ನಿಸಿ Expressionism Moderinsm ಗಳೆರಡನ್ನೂ ಒಟ್ಟೊಟ್ಟಿಗೆ ದುಡಿಸಿಕೊಂಡನು. ಗೆಳೆಯರಿಂದ 'Picasso' ಎಂದು ಸಹಿ ಮಾಡಲು ಒತ್ತಾಯ. ಆದರೆ ಪಿಕಾಸೊ ಪ್ರಾರಂಭದಲ್ಲಿ

---

2. "My first drawings could never be exhibited in an exposition of children's drawings. The awkwardness and naivete of childhood were almost absent from them...."

-Picasso,
Picasso-Portrait of
picasso as a young man
-Norman mailet
warner Bokks, 1996

'Pablo R. Picasso' ಎಂದೂ ನಂತರ 'P.R. Picasso' ಎಂದೂ ಸಹಿಯ ರಾಜಕಾರಣದಲ್ಲಿ ತೊಡಗಿಕೊಂಡನು. ಗೆಳೆಯನೊಬ್ಬ ಪ್ರೇಮದಾಟದಲ್ಲಿ ಸಿಲುಕಿ, ಅಂತಿಮವಾಗಿ ತನಗೆ ತಾನೇ ಗುಂಡಿಟ್ಟು ಪ್ರಾಣ ಕಳೆದುಕೊಂಡ ಘಟನೆ ಪಿಕಾಸೊ ಮೇಲೆ ಪಟ್ಟಿನ ಪರಿಣಾಮ ಬೀರಿತು. ಭಾವನಾತ್ಮಕ ಅನುಭವಗಳನ್ನು ಮಾತ್ರ ಹೊಂದಿದ್ದ ಅವನು ಬದುಕಿನ ವ್ಯಾವಹಾರಿಕ ನೋಟಗಳ ಅನುಭವಗಳನ್ನು ಪಡೆಯುವ ಸಂದರ್ಭಗಳು ಉಂಟಾಯಿತು. ಈ ಅವಧಿಯಲ್ಲಿ ಅವನಿಂದ ಮೂಡಿಬಂದ ಕೃತಿಸರಣಿ 'Blue period' ಎನ್ನು ಎಂದು ಪರಿಗಣಿಸಲ್ಪಟ್ಟಿದೆ. ಈ ಕೃತಿಗಳ ವೈವಿಧ್ಯಮಯ ವರ್ಣಛಾಯೆಗಳು ಈ ಅವಧಿಯಲ್ಲಿ ಮೂಡಿಬಂದ ಮಾನವೀಯ ಅನುಕಂಪ, ಕಣ್ಣೋಟವಿಲ್ಲದವರ ಭಾವಚಿತ್ರಗಳು, ಭಿಕ್ಷುಕರು, ಕುರುಡರು, ಬೆಲೆವೆಣ್ಣುಗಳ ಹಲವು ಒಳನೋಟಗಳ ಅನುಭವ ನೀಡುತ್ತವೆ. ಈ ದೃಷ್ಟಿಯು ಮುಂದಿನ ಕೆಲವು ವರ್ಷಗಳ ಕೃತಿಗಳಲ್ಲಿ ಮುಂದುವರಿಯಿತು. ಪಿಕಾಸೋನ ಗೆಳೆಯನ ಮರಣಾ ನಂತರದ ೨ ಭಾವಚಿತ್ರಗಳನ್ನು (೧೯೦೧), ೨ ಅಂತಿಮ ಮೆರವಣಿಗೆಯ ದೃಶ್ಯಗಳನ್ನು ಚಿತ್ರಿಸಿದ್ದು ಇದೇ ಅವಧಿಯಲ್ಲಿ.

ಇತರರೊಂದಿಗೆ ಹೆಚ್ಚು ಮಾತನಾಡದ ಪಿಕಾಸೊ ತನ್ನ ವೈಯಕ್ತಿಕ ಭಾವನೆಗಳನ್ನು ಇತರರೊಂದಿಗೆ ಹೇಳಿಕೊಳ್ಳಲು ಇಷ್ಟಪಡುತ್ತಿರಲಿಲ್ಲ. ತನ್ನ ನಡತೆಯ ಟೀಕಾಕಾರರಿಗೆ ಉತ್ತರಿಸುವಂತೆ ಹಲವು ಕೃತಿಗಳಿರುತ್ತಿದ್ದವು. ಕಲಾವಿದ ಮ್ಯಾಟಿಸ್‌ನೊಂದಿಗಿನ ಸ್ನೇಹ-ಜಗಳಗಳ ವಿವರಗಳೂ ಕುತೂಹಲ ಮೂಡಿಸುತ್ತವೆ. ಸೌಂದರ್ಯ ಶಾಸ್ತ್ರದ ಬಗೆಗಿನ ಪ್ರಶ್ನೆಗಳ ಪ್ರಸ್ತಾಪವಾದಾಗಲೆಲ್ಲಾ ಅಲ್ಲಿಂದ ನುಣುಚಿಕೊಳ್ಳುತ್ತಿದ್ದ ಪಿಕಾಸೊ ಅಂತಹ ಚರ್ಚೆಗಳಲ್ಲಿ ಪಾಲ್ಗೊಳ್ಳಲು ಎಂದೂ ಸಮಯ ಮಾಡಿಕೊಳ್ಳುತ್ತಿರಲಿಲ್ಲ. ಮ್ಯಾಡ್ರಿಡ್‌ನಲ್ಲಿ ಹೊಸ ಮನೆಯನ್ನು ಸಜ್ಜುಗೊಳಿಸಿದ ರೀತಿಯಲ್ಲಿ ಸರಳತೆ ಇತ್ತು. ಅಲ್ಲಿನ ಅತಿ ಶ್ರೀಮಂತ ಜನರ ಸಂಸ್ಕೃತಿಯನ್ನೇ ಅಲ್ಲದೆ ಅತ್ಯಂತ ಕೆಳವರ್ಗದ ಜನರ ಸಂಸ್ಕೃತಿಯನ್ನೂ ಗ್ರಹಿಸಿ ಅಭಿವ್ಯಕ್ತಿಸಿದ್ದು ಗಮನೀಯ. ಕೆಳವರ್ಗದ ಜನರ ಹೆಂಡತಿಯರನ್ನು ತೈಲ ಹಾಗೂ ಪೇಸ್ಟಲ್ ಬಣ್ಣಗಳಿಂದಲೂ ಚಿತ್ರಿಸಿದನು!

೧೯೦೧-೧೯೦೪ರ ನಡುವೆ ಅವನು ಬಾರ್ಸಿಲೋನಾ, ಮತ್ತು ಪ್ಯಾರೀಸ್‌ಗಳಿಗೆ ತನ್ನ ನೀಲಿ ಬಣ್ಣದ ಕಲಾಕೃತಿಗಳೊಂದಿಗೆ ಭೇಟಿ ನೀಡುತ್ತಿದ್ದನು. ಫ್ರೆಂಚ್ ಭಾಷೆ ಬಾರದ, ಮಲಗಲು ಸ್ಥಳವಿಲ್ಲದ ಸಮಸ್ಯೆಯನ್ನು ಧಿಕ್ಕರಿಸಿ ಅಲೆದಾಡಿದ. ಹಗಲಿನಲ್ಲಿ ಬಹುಪಾಲು ಪ್ಯಾರೀಸಿನ ಬೀದಿ, ಕಫೆಟೇರಿಯಾ, ಲೋವ್ರೆಯ ಕಲಾಪ್ರದರ್ಶನವೊಂದನ್ನು ನೋಡುವುದರಲ್ಲಿ ಕಳೆಯುತ್ತಿದ್ದನು.

ಸೈಂಟ್ ಲಜಾರೆಯ ಮಹಿಳಾ ಸೆರೆಮನೆಗೆ ೧೯೦೧-೧೯೦೨ರ ನಡುವೆ ಉದ್ದೇಶಪೂರ್ವಕವಾಗಿ ಭೇಟಿ ನೀಡಿದ ಪಿಕಾಸೊ ಹಲವಾರು 'model' ಗಳನ್ನು ನೋಡಿದನು. ಅವರೆಲ್ಲ ಹಲವು ರೀತಿಗಳಲ್ಲಿ ಅವನ ಕೃತಿಗಳಲ್ಲಿ ಕಾಣಿಸಿಕೊಂಡಿರಬಹುದು. ಬಾಲ್ಯದಿಂದಲೇ ಕ್ಯಾಥೋಲಿಕ್ ಧರ್ಮದ ಆಚರಣೆಯಲ್ಲಿದ್ದ ಅವನು ಆ ಹೊತ್ತಿಗೆ ಪ್ರತಿಯೊಂದರ ಬಗ್ಗೆಯೂ ಬಂಡಾಯ ಮಾಡುತ್ತಿದ್ದಂತೆ ಚರ್ಚಿನ ವಿರುದ್ಧವೂ ತಿರುಗಿಬಿದ್ದನು. ಆದರೂ ಅವನ ಆಳದಲ್ಲಿ ಧಾರ್ಮಿಕ ಪ್ರಜ್ಞೆ ಉಳಿದುಕೊಂಡಿತ್ತು. ಅತಿಪಾರಿ ಸಂವೇದನೆಯೊಂದಿಗೆ 'ಅಲಂಕಾರ ಪಟ್ಟಿಸ್ವಾಮಿ'ಯಂತೆ ನೀಟಾದ ಉಡುಪು ತೊಡುತ್ತಿದ್ದನು; ಮುಖವನ್ನು ನುಣ್ಣಗೆ ಇಟ್ಟುಕೊಳ್ಳುತ್ತಿದ್ದನು. ಸದಾ ಅವನೊಂದಿಗಿರುತ್ತಿದ್ದ ಕಪ್ಪು ಜಾಕೆಟ್, ಎದೆಮಟ್ಟದ ಕೋಟು, ಟೈ ಹಾಗೂ ಅಗಲವಾದ ಕಪ್ಪು ಹ್ಯಾಟು ಇತ್ಯಾದಿಗಳು ಅವನನ್ನು ಕ್ರಾಂತಿಕಾರಿಯಂತೆ ಬಿಂಬಿಸುತ್ತಿದ್ದವು.

೧೯೦೩ರಲ್ಲಿ ವಿಮರ್ಶಕ ಚಾರ್ಲ್ಸ್ ಮೋರ್ಸೆ ಮತ್ತಿಬ್ಬರ ಸಹಯೋಗದೊಂದಿಗೆ ಪಿಕಾಸೊ ಕೃತಿಗಳು ಪ್ರದರ್ಶಿಸಲ್ಪಟ್ಟವು. ಪ್ರದರ್ಶನದ 'ನೀಲಿ ಅವಧಿ'ಯ ಕೃತಿಸರಣಿಯಲ್ಲಿ 'ಗುಲಾಬಿ' ಬಣ್ಣದ ಕೃತಿ ಸರಣಿಯ ಮೊದಲ ಕೃತಿಯೂ ಇದ್ದಿತು! ೧೯೦೪ರ ಹೊತ್ತಿಗೆ ಪ್ಯಾರೀಸನ್ನು ತನ್ನ ಶಾಶ್ವತ ವಾಸಸ್ಥಳವನ್ನಾಗಿಸಿಕೊಳ್ಳಬೇಕೆಂದು ತೀರ್ಮಾನಿಸಿದಾಗ ಪಿಕಾಸೊ ಪ್ಯಾರೀಸ್ ನಾಗರಿಕರಿಗೆ ಅಷ್ಟೇನೂ ಪರಿಚಿತನಾಗಿರಲಿಲ್ಲ. ಆ ಹೊತ್ತಿಗೆ ಫೆರ್‌ನಾಂಡೆ ಆಲಿವರ್‌ಳೊಂದಿಗೆ ಒಡನಾಟವಿತ್ತು. ಈ ಒಡನಾಟ ಪಿಕಾಸೋ ಬದುಕಿನಲ್ಲಿ ಹಲವು ಬದಲಾವಣೆಗಳನ್ನು ತಂದಿತು. ಹಾಗಾಗಿ ಅವನ ಕಲಾಕೃತಿಗಳಲ್ಲಿ ಅನುಭವವಾಗುತ್ತಿದ್ದ ಬೌದ್ಧಿಕ ಹಾಗೂ ಸೌಂದರ್ಯಾತ್ಮಕ ನಾವೀನ್ಯತೆಗಳು ಅನನ್ಯವಾಗಿದ್ದವು; ಬಣ್ಣಗಳೂ ಬದಲಾದವು. ಕಂದು ಕೆಂಪು ಬಣ್ಣಗಳಿಗೆ ಬದಲಾದ ಪಿಕಾಸೊ Rose period (1904-05) ಕೃತಿಗಳಿಗೆ ಕಾರಣನಾದನು. ಈ ಕೃತಿ ಸರಣಿಯಲ್ಲಿ ಪ್ಯಾರೀಸಿನ ಬದುಕು ಹಲವಾರು ರೀತಿಗಳಲ್ಲಿ ಕಾಣಿಸಿಕೊಂಡಿತು. ಸರ್ಕಸ್ ಜನರ ಬದುಕನ್ನು ಗ್ರಹಿಸಿದ ಕೃತಿಗಳವು.

ಗೆಳೆಯ ಅಪೋಲ್ಲಿನೈರ್‌ನೊಂದಿಗೆ ಹಲವಾರು ಭಾವಚಿತ್ರಗಳನ್ನು ಪಿಕಾಸೊ ಚಿತ್ರಿಸಿದ್ದೂ ಉಂಟು. ಬದುಕಿನ ಜೀವಂತಿಕೆಯೊಂದಿಗೆ ಮೂಡಿಬಂದ 'Famille de Salimabanqves' ಅಹ್ಲಾದಾಯಕ ಅನುಭವ ನೀಡುವ ಕೃತಿ. ಇವೆಲ್ಲ ಅಂದರೆ Rose Period' ನ ಕೃತಿಗಳೆಲ್ಲ ಅತ್ಯಂತಿಕವಾಗಿ 'Blue Period' ಮೇಲಿನ ಸಾಧಿಸಿದ ವಿಜಯವಂತಿಕೆಯನ್ನು ಬಿಂಬಿಸುವಂತಿದ್ದವು. ಸರ್ಕಸ್ ಜನರ ರೂಪ, ಆಶಯ, ಗುಲಾಬಿ ಬಣ್ಣಗಳ ನಿರ್ವಹಣೆ ಸಮಕಾಲೀನ ಜನರ ಬಾಹ್ಯ ಬದುಕನ್ನು ಸ್ವಚ್ಛಂದ ಛಂದಸ್ಸಿನಂತೆ ಗ್ರಹಿಸಲಾಗಿತ್ತು. ಪತ್ರಿಕೆಯ ದೃಶ್ಯಕಲೆಯ ಅಂಕಣಗಳಲ್ಲಿ ಹೆಚ್ಚಿನ ಚರ್ಚೆಗೆ ಒಳಗಾದರೂ ಈ ಕೃತಿಗಳು ಕೊಳ್ಳುವವರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಲಿಲ್ಲ. ನಂತರದ ಒಂದು ಪ್ರದರ್ಶನವಲ್ಲಿ ಕೊಳ್ಳುವವರು ಹೆಚ್ಚಾಗಿ ಕಾಣಿಸಿಕೊಂಡರು! ಹೆಚ್ಚಿನ ಸಂಖ್ಯೆಯ ಕೃತಿಗಳು ಕೊಳ್ಳಲ್ಪಟ್ಟವು. ಪಿಕಾಸೋ ಬದುಕು ಸಾಗಿಸಲು ಹಾಗೂ ಹೆಚ್ಚು ಹೆಚ್ಚು ಪ್ರವಾಸ ಮಾಡಲು ಸಾಧ್ಯವಾಯಿತು. ಅದು Blue Period ನ ಅಜೀರ್ಣವಾಗುವಷ್ಟಾಗಿದ್ದ ಸಾಂಕೇತಿಕತೆಯ ವಿರುದ್ಧದ ಒಂದು ರೀತಿಯ ಧರ್ಮಯುದ್ಧದಂತಹ ಅವಧಿ. ಸಾಂಕೇತಿಕತೆಯ ಗೀಳಿನಿಂದ ಹೊರಬರಲು ಹೊಸ ಕೃತಿಗಳ ಮಾರಾಟ ನೆರವಾಯಿತು. ಸ್ವತಂತ್ರ ವಸ್ತು-ಅನುಭವ ಗ್ರಹಿಕೆಗೆ ಪೂರಕವಾಗುವಂತಹ ಸಂದರ್ಭ ಸೃಷ್ಟಿಸಿಕೊಳ್ಳಲಾಯಿತು. ಚಿತ್ರ ಅವಕಾಶವಲ್ಲಿ (space), ಬಣ್ಣ, ರೂಪಗಳ ಸಂಯೋಜನೆಗಳಲ್ಲಿ ಹೊಸತನಗಳು ಕಾಣಿಸಿಕೊಂಡವು. ಅವನ ಕೃತಿಗಳನ್ನು ಜನಸಾಮಾನ್ಯರು ನೋಡುವುದು ಸುಲಭವಾಗಿ ಸಾಧ್ಯವಾಗದಾಯಿತು. ತನ್ನ ಸ್ಟುಡಿಯೋದಲ್ಲಿ ಗಂಟೆಗಟ್ಟಲೆ ಬಾಗಿಲು ಹಾಕಿಕೊಂಡು ಚಿತ್ರಿಸಲಾರಂಭಿಸಿದನು.

ಇದೇ ಸಂದರ್ಭದಲ್ಲಿ ಪಿಕಾಸೊ ಕೃತಿಗಳನ್ನು ಸಂಗ್ರಹಿಸಲಾರಂಭಿಸಿದ್ದ ಗೆರ್‌ಟ್ರೂಡ್ ಸ್ಟೈನ್‌ಳ ಗೆಳೆತನವೇ ಅಲ್ಲದೆ ಆರ್ಥಿಕ ಭದ್ರತೆಯೂ ದೊರಕಿತು. ಅವಳ ಮನೆ ಹಲವಾರು ಕಲಾವಿದರೇ ಅಲ್ಲದೆ ಸಾಹಿತಿಗಳನ್ನೂ, ವಿದೇಶೀ ಕಲಾ ಸಂಗ್ರಹಾಕರನ್ನೂ ಆಕರ್ಷಿಸುತ್ತಿತ್ತು. ಪಿಕಾಸೊ ಕೃತಿಗಳು ಅಮೆರಿಕೆಯ ಹಲವರಿಂದ ಕೊಳ್ಳಲ್ಪಟ್ಟವು. ೮೦-೯೦ ಬಾರಿ ಕುಳಿತು ಆಕೆ ತನ್ನ ಭಾವಚಿತ್ರವನ್ನು ಚಿತ್ರಿಸಿಕೊಂಡಳು! ಈ ಭಾವಚಿತ್ರದಲ್ಲಿ ಅವಳ ಆಳವನ್ನೆಲ್ಲಾ ಬಗೆದಂತೆ, ಪಿಕಾಸೊ ತನ್ನನ್ನೇ ಹುಡುಕಿಕೊಂಡಂತೆ ಹೆಚ್ಚು ತೀವ್ರತೆಯಿಂದ ಹಾರ್ದಿಕ ಹೋರಾಟದಿಂದ ಅವಳನ್ನು ಚಿತ್ರಿಸಿದನು. "...with stein just beginning to write under the inflvence of post

impressionism, and picasso on the verge of disrupting his canvases with actval words." ನಂತಹ ಸಂದರ್ಭ ಇಬ್ಬರಿಗೂ.[೩]

ಪಿಕಾಸೊ ಮತ್ತು ಅವನ ಗೆಳೆಯ ಜಾರ್ಜಸ್ ಬ್ರಾಕ್ ಕ್ಯೂಬಿಸಂನ ಮೊದಲ ಘಟ್ಟಕ್ಕೆ ಕಾರಣರು. ಬಹುತೇಕ ವಿಮರ್ಶಕರು Geometric Art ಎಂದು ತಪ್ಪಾಗಿ ಗ್ರಹಿಸಿರುವುದು ಒಂದು ವಿಪರ್ಯಾಸ.[೪] ರಿನೈಸಾನ್ಸ್ ಸಂಪ್ರದಾಯದ (ಯಥಾ ದೃಷ್ಟರೂಪಣ) ಮತ್ತು illusion (ಭ್ರಮೆ)ಗಳನ್ನು ಮೀರಿದ ಹೊಸ ದೃಷ್ಟಿಯ ಕಲೆಯ ರೂಪವನ್ನು ಪ್ರತಿಬಿಂಬಿಸಲು ಆ ಕೃತಿಗಳು ವಿಶಿಷ್ಟ ಪ್ರಯತ್ನ ಮಾಡಿದ್ದವು. ಒಂದೇ ವಸ್ತುವಿನ ವಿವಿಧ ದೃಷ್ಟಿಯ ಭಾವಗಳನ್ನು ಒಂದೇ ಕ್ಯಾನ್‌ವಾಸ್‌ನ ಅವಕಾಶ (space) ದಲ್ಲಿ ಅನುಭವಿಸಲು ಸಾಧ್ಯ ಮಾಡಿದಂತಹ ಕೃತಿಗಳವು. ಕಲಾಕೃತಿಯೊಂದನ್ನು ಅದೇ ಮೊದಲ ಬಾರಿಗೆ ಹಲವು ರೀತಿಗಳಲ್ಲಿ ಅನುಭವಿಸುವುದನ್ನು ಸಾಧ್ಯ ಮಾಡಿದ್ದರು. ೧೯೦೬ರಲ್ಲಿ ಸ್ಪೈನ್‌ನಲ್ಲಿ ತಂಗಿದ್ದಾಗ ಪಿಕಾಸೊನ ಬಹುತೇಕ ಕೃತಿಗಳಲ್ಲಿ ಗ್ರೀಕ್, ಇಟೇಲಿಯನ್ ಮತ್ತು ಬಹುಮುಖ್ಯವಾಗಿ ಆಫ್ರಿಕನ್ ಆದಿಮುಖಿಗಳೊಂದಿಗೆ ಪಿಕಾಸೋ ಮುಖಾಮುಖಿಯಾದ ರೀತಿ ಅಪೂರ್ವ. ಕ್ಯೂಬಿಸಂ ಹಾದಿಯಲ್ಲಿ ನಡೆಯುವಂತಾಯಿತು. ಅನಂತರ ಅವನ ಮಹತ್ವದ ಸಂಯೋಜನೆಗಳಲ್ಲಿ ಒಂದಾದ ೧೯೦೭ರಲ್ಲಿ 'Les Demoiselles d Avigmon', 1907 ರಲ್ಲಿ ಚಿತ್ರಿಸಲ್ಪಟ್ಟಿತು.[೫] ಪ್ರಾರಂಭದಲ್ಲಿ ಈ ಕೃತಿಯನ್ನು 'The brothel of Avianon' ಎಂದು ಕರೆಯಲಾಗುತ್ತಿತ್ತು. ಅವಿಗ್ನಾನ್ ಗಲ್ಲಿಯ ವ್ಯಭಿಚಾರದ ಮನೆಯೊಳಗಿನ ಗ್ರಹಿಕೆಗಳ ಈ ಕೃತಿಯ ಚಿತ್ರಿತ ಅವಕಾಶದ ಮೇಲ್ಲ ಒಡೆದ ಗಾಜಿನ ಸಂಯೋಜನೆಯಂತೆ ಚಿತ್ರಾಂಶಗಳನ್ನು ಮೂಡಿಸಿಕೊಂಡಿದೆ. ಈ ಸಂಯೋಜನೆ ಸಮಕಾಲೀನ ಕಲಾವಿದರು ಹಾಗೂ ವಿಮರ್ಶಕರ ಗ್ರಹಿಕೆಗೆ ಸವಾಲುಗಳನ್ನು ಸೃಷ್ಟಿಸಿತು. ಈ ಕಲಾಕೃತಿಯ ಜತೆ ಜತೆಗೇ ಆಫ್ರಿಕದ ಕಲೆ ಅದರಲ್ಲೂ ಮುಖವಾಡಗಳು ಹಲವರನ್ನು ಪ್ರಭಾವಿಸಿದವು. ಇಂಗ್ಲಿಷ್ ಕವಿಗಳೂ ಇಲ್ಲಿ ನೆನಪಾಗುತ್ತಾರೆ. ಇದೇ ವರ್ಷ ಎಝ್ರಾ ಪೌಂಡ್ 'masks' ಕವನ ಬರೆದರೆ, ಡಬ್ಲ್ಯು.ಬಿ. ಈಟ್ಸ್ ಒಂದೆರಡು ವರ್ಷಗಳ ನಂತರ ಬರೆದನು. ಒಂದು ರೀತಿಯಲ್ಲಿ ಇವರಿಗೆಲ್ಲ "Myrteries of identity" ಯ ಗೀಳು. ಪಿಕಾಸೊ ಕೃತಿಗಳ ಸಂಗ್ರಾಹಕಿ, ಬರಹಗಾರ್ತಿ ಗರ್‌ಟ್ರೂಡ್ ಸ್ಟೈನ್‌ಳ ಸಾವಿನ ನಂತರ ಪ್ರಕಟವಾದ 'Melancha' ಪುಸ್ತಕವನ್ನು ಪಿಕಾಸೊ ತನ್ನ ಭಾವಚಿತ್ರದಲ್ಲಿ ಮುಖವನ್ನು ಚಿತ್ರಿಸಲು ಮುಖವಾಡವೊಂದರ ನೆರವು ಪಡೆದಾಗ ಹಾಗೂ 'les Demoiselles d' Avignon' ಚಿತ್ರಿಸಲ್ಪಡುತ್ತಿದ್ದ ಸಂದರ್ಭದಲ್ಲಿ ತಿದ್ದಿ ಪುನರ್ ರೂಪಿಸಿದ್ದಳು. ಕಪ್ಪು ಯುವತಿಯ ಭಾವನಾತ್ಮಕ ವಿಚಾರಣೆಯ ಕಥೆ ಅದು.

---

೩. ಓದಿ : The Dialect of Modernism
-Michael Worth : P.59, Oxford, 1994

೪. ಈ ಬಗೆಗಿನ ಮುಂದುವರಿದ ಉಸಿರುಗಟ್ಟಿಸುವ ಚರ್ಚೆಗೆ ಮತ್ತು ಐನ್‌ಸ್ಟೀನ್, ಪಿಕಾಸೊ ನಡುವಿನ ಸಮಾನಾಂತರ ಚಿಂತನೆ, ದೃಷ್ಟಿ, ಸೃಜನಶೀಲ ಕೊಡುಗೆಗಳ ವಿವರಗಳಿಗಾಗಿ ಓದಿ : Einstein, Picasso
-Ar thur i. Miller
Basic Books, New York, 2001

೫. ಈ ಕೃತಿ ಪ್ರಸ್ತುತ ನ್ಯೂಯಾರ್ಕ್‌ನ ದಿ ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್ ಗ್ಯಾಲರಿಯಲ್ಲಿದೆ. ತೈಲವರ್ಣದ, 8'X7'8" ಅಳತೆಯ ಕ್ಯಾನ್ವಾಸ್ ಅವಕಾಶದಲ್ಲಿ ಚಿತ್ರಿಸಿರುವ ಕೃತಿಯಿದು.

ಸಮಕಾಲೀನ ಸಂದರ್ಭದ ಅಸಾಮಾನ್ಯ ಕಲಾವಿದನೆಂದು ಪರಿಗಣಿಸಲ್ಪಟ್ಟ ಪಿಕಾಸೊ ತನ್ನ ವಿನಾಶಕಾರಿ ಪ್ರವೃತ್ತಿಗೂ ಹೆಸರಾದವನು. ತನ್ನ ಶೈಲಿಯನ್ನು ಚಿತ್ರಿಸುವ ಪ್ರಕ್ರಿಯೆಯಲ್ಲಿ ವೈವಿಧ್ಯಮಯವಾಗಿ ಬದಲಿಸಿದಂತೆ ತನ್ನ ಸಂಗಾತಿಗಳನ್ನೂ ಪಿಕಾಸೊ ಬದಲಿಸಿದವನು. ಆ ಎಲ್ಲ ಹೆಣ್ಣುಗಳು ಅವನ ಮನಸ್ಸಿನ ಮೇಲೆ, ಆ ಮೂಲಕ ಅವನ ಕಲೆಯ ಅಭಿವ್ಯಕ್ತಿ, ಶೈಲಿಗಳ ಮೇಲೆ ಪ್ರಭಾವ ಬೀರಿದರು. ಅವನು Blue Period ಕೃತಿ ಸರಣಿಯಿಂದ Rose Period ಕೃತಿ ಸಮೂಹಕ್ಕೆ ಜಿಗಿದದ್ದೇ ಅವನ ಮೊದಲ ಸಂಗಾತಿ ಫರ್ನಾಂಡೆ ಆಲಿವರ್‌ಳ ಸಹವಾಸದಿಂದ. ಅವನ ಸಂಗಾತಿಯರು, ಮಕ್ಕಳು ರೂಪದರ್ಶಿಗಳಾಗಿದ್ದ ಹಲವಾರು ಭಾವಚಿತ್ರ, ಶಿಲ್ಪ, ಪ್ರಿಂಟ್‌ಗಳನ್ನು ಅವನು ಸೃಷ್ಟಿಸಿದ್ದಾನೆ.

ಹೆಣ್ಣಿನ ಬಗೆಗಿನ ಅವನ 'ವಿನಾಶಕ ದೃಷ್ಟಿ' 'Les Demoisclles d Avignon' ಕೃತಿಯಲ್ಲಿ ನಗ್ನತೆಯನ್ನು ಕಠೋರ, ಕೋನಸ್ಥ ಸಮತಲದಲ್ಲಿ ಪುನರ್ ರೂಪಿಸಿರುವಿಕೆಯಲ್ಲಿ ಪ್ರತಿಫಲಿಸಿದೆ. "I do Picture, then I destroy it' ಎಂದು ಪಿಕಾಸೋ ಹೇಳಿಕೊಂಡಿದ್ದಾನೆ. ವ್ಯಭಿಚಾರದ ಮನೆಯಲ್ಲಿರುವಂತೆ ತನ್ನ ಜೀವನ ಸಂಗಾತಿ ಫೆರ್ನಾಂಡೆ ಒಲೀವಿಯರ್ ಹಾಗೂ ಪರಿಚಿತನೊಬ್ಬನ ಅಜ್ಜಿ, ಹಾಗೂ ಮಾರಿ ಲೌರೆನ್‌ಸಿನ್ ಮೊದಲಾದವರನ್ನು 'ವಿಕೃತಿ ಸೌಂದರ್ಯ'ದ ನೆರವಿನಿಂದ ಚಿತ್ರಿಸಿದ್ದಾನೆ. ಈ ಕೃತಿಯನ್ನು ಕುರಿತು ಆಗಾಗ ತಮಾಷೆ ಮಾಡುತ್ತ ನಗೆ ಚಟಾಕಿಗಳನ್ನು ಹಾರಿಸುತ್ತಿದ್ದುದಾಗಿ ಪಿಕಾಸೊ ಸಂದರ್ಶನವೊಂದರಲ್ಲಿ (೨-೧೨-೧೯೩೩) ಹೇಳಿಕೊಂಡಿದ್ದಾನೆ!

ಇಂದು ಮಹಾನ್ ಕಲಾಕೃತಿಗಳೊಂದಾಗಿ ಆಧುನಿಕ ಕಲೆಯ ಇತಿಹಾಸದಲ್ಲಿ ಪರಿಗಣಿಸಿರುವ ಈ ಕೃತಿ ತನ್ನ ವಿವಾದಗಳ ನಡುವೆಯೂ ದೃಶ್ಯಕಲೆಯ ಐತಿಹಾಸಿಕ ಪ್ರಜ್ಞೆಯನ್ನು ಅರಗಿಸಿಕೊಂಡ ಕೃತಿಯಾಗಿದೆ.

೧೯೦ಂಲರಲ್ಲಿ ಪಿಕಾಸೋ ಹಾಗೂ ಫ್ರೆಂಚ್ ಕಲಾವಿದ ಜಾರ್ಜಸ್ ಬ್ರಾಹ್ಪ್ ಭೂದೃಶ್ಯಗಳನ್ನು ವಿಶಿಷ್ಟವಾಗಿ ಚಿತ್ರಿಸಿದರು. ಅಪೂರ್ವ ಗ್ರಹಿಕೆಗಳವು. ಪುಟ್ಟ ಪುಟ್ಟ ಘನ ಆಕೃತಿಗಳಿಂದ ಮೂಡಿಬಂದಂತಹ ಅನುಭವ; ಘನಾಕೃತಿ ಕಲೆ (cubism) ಹುಟ್ಟಿಕೊಂಡಿತು. ಇನ್ನೊಬ್ಬರೊಂದಿಗೆ ಸೇರದ, ಚಿತ್ರಿಸದ ಪಿಕಾಸೊ ಬ್ರಾಹ್ಪ್‌ನೊಂದಿಗೆ ೧೯೦೭ ರಿಂದ ೧೯೧೨ ರವರೆಗೆ ಚಿತ್ರಿಸದನು! ೧೯೧೨-೧೪ರ ನಡುವೆ ಕ್ಯೂಬಿಸಂ ಹೊಸ ಆಯಾಮವನ್ನು ಪಡೆದುಕೊಂಡಿತು. ಗಣಿತಜ್ಞ ಮೌರೈಸ್ ಪ್ರಿನ್ಸೆಟ್‌ನ ಕೊಡುಗೆಯೂ ಪಿಕಾಸೊನ ರೂಪ ನಿರ್ವಹಣೆಯಲ್ಲಿ ಪ್ರಭಾವ ಬೀರಿದೆ. ಕೊಲಾಜ್‌ಗಳೂ ಸಹ. ಅವನ ಸಾವಿನ ನಂತರವಷ್ಟೇ ಅವನ ಶಿಲ್ಪಗಳು ಅವನ ಸ್ಟುಡಿಯೋದಿಂದ ಹೊರಗೆ ಕಾಣಿಸಿಕೊಂಡವು. ೧೯೩೧ರಲ್ಲಿ ಹೊಸ ಹೆಂಡತಿಯ ಜತೆಗೆ ಹೊಸ ಶಿಲ್ಪ ಸ್ಟುಡಿಯೊ ಸ್ಥಾಪಿಸಿ ಹೊಸ ಹೊಸ ಪ್ರಯೋಗಗಳನ್ನು ತನ್ನ ಸಾವಿನ (೧೯೭೩)ವರೆಗೆ ಮುಂದುವರೆಸಿದನು.

ಯಾವುದೇ ಸರ್ಕಾರಿ ಕಲಾ ಸಂಸ್ಥೆಯೊಂದಿಗೆ ಸಂಪರ್ಕ ಇಟ್ಟುಕೊಳ್ಳದ ಪಿಕಾಸೊ ೨ ವಿಶ್ವಸಮರಗಳ ಸಮಯದಲ್ಲಿ ನಡೆದ ಬಹುಮುಖ್ಯ ಕಲಾಚಳುವಳಿಗಳೊಂದಿಗೆ ಹತ್ತಿರದ ಸಂಪರ್ಕ ಇಟ್ಟುಕೊಂಡಿದ್ದನು. ಸರ್ರಿಯಲಿಸ್ಟ್ ಚಳುವಳಿಯ ಬಹುಮುಖಿ ಪ್ರತಿಪಾದಕ ಆಂಡ್ರೆಬ್ರೇಟನ್ ಪಿಕಾಸೊನನ್ನು ಆ ಚಳುವಳಿಯ ಮುಂಚೂಣಿಯ ಕಲಾವಿದನೆಂದು ಪರಿಗಣಿಸಿದ್ದನು. ಆ ಚಳುವಳಿಯ ಕಲಾವಿದರು ಮುಖ್ಯವಾಗಿ ಬರೆಹಗಾರರ ಸ್ನೇಹದ ಫಲವಾಗಿ ಅವನ ಕಲೆ ಹೊಸ ಎತ್ತರಗಳನ್ನು

ಕಂಡಿತು. ೧೯೩೦ರ ಬಹುತೇಕ ಸರ್‍ರಿಯಲಿಸ್ಟ್ ಬರಹಗಾರರಂತೆ ಪಿಕಾಸೊ ಸಹ metamorphosis ದೃಷ್ಟಿಯೊಂದಿಗೆ ತನ್ನ ಕೃತಿಗಳಲ್ಲಿ ಆಟವಾಡಿದನು. ಅವನ ಪ್ರಿಂಟ್ ಮತ್ತಿತರ ಮಾಧ್ಯಮಗಳ ಸರ್‍ರಿಯಲಿಸ್ಟ್ ಅಭಿವ್ಯಕ್ತಿಗಳಿಗಿಂತಲೂ ಕಾವ್ಯದಲ್ಲಿ ವಿಶೇಷವಾಗಿ ಅಭಿವ್ಯಕ್ತಿಸಿದನು. ೧೯೩೪ರಲ್ಲಿ ಚಿತ್ರಿಸಿದ ಇದೇ ವರ್ಷ ಕಾವ್ಯ ಕೃತಿಯಲ್ಲಿ ತೊಡಗಿದ್ದನು. ಜಾಲ್‌ರ್ಯಾಕ್, ಗೊನ್‌ಗೋರಾ, ಅಂಡ್ರೆಸುಯರೆಟ್, ರೋಜರ್ ಗ್ರೀ ಮೊದಲಾದವರ ಸಾಹಿತ್ಯ ಕೃತಿಗಳಿಗೆ ಅಲ್ಲದೆ ಗೆಳೆಯ ಪಾಬ್ಲೋ ನೆರೂಡಾನ ಕವನಗಳಿಗೆ ಸಾಂದರ್ಭಿಕ ಚಿತ್ರಗಳನ್ನೂ ಚಿತ್ರಿಸಿದನು.

೧೯೩೭ರ ಏಪ್ರಿಲ್ ೨೬ರಂದು ಜರ್ಮನ್ ಯುದ್ಧವಿಮಾನಗಳು ಸ್ಪೈನ್‌ನ ಬಾಸ್ಕ್ ವಿಭಾಗದ ಗುರ್ನಿಕಾ ಪಟ್ಟಣದ ಮೇಲೆ ಬಾಂಬುಗಳನ್ನು ಸುರಿಯಿತು. ಪಟ್ಟಣ ೭೦% ರಷ್ಟು ನಾಶವಾಯಿತು. ಆ ಆಘಾತಕಾರಿ ಸಂದರ್ಭ ಅವನ ಮಹಾನ್ ಯುದ್ಧ ವಿರೋಧೀ ವರ್ಣಚಿತ್ರ 'ಗುರ್ನಿಕಾ' ಸೃಷ್ಟಿಯಾಗಲು ಕಾರಣವಾಯಿತು. ಇದೇ ಮೊದಲ ಬಾರಿಗೆ ಕೃತಿ ರಚನೆಯ ಸಂದರ್ಭದಲ್ಲಿ ವೀಕ್ಷಕರಿಗೆ ಅವಕಾಶವಿದ್ದಿತು. ಈ ಕೃತಿ ಪಿಕಾಸೊನ ೪೦ ವರ್ಷಗಳ ಕಲೆಯ ಸಾರಸಂಗ್ರಹದಂತೆ, ಅವನು ತನ್ನನ್ನೇ ಬಗೆದು ನೋಡಿಕೊಂಡಂತೆ, ಸಮಾಜವನ್ನೂ ಪ್ರಭಾವಿಸುವಂತೆ ಮೂಡಿಬಂದಿತು. ಭ್ರಾಂತಿ ವಿಚಾರಗಳಿಗೆ ಸ್ಮಾರಕದಂತೆ, ವಿನಾಶದ ವಿರೋಧದಂತೆ ನೋಡುಗರನ್ನು ಆವರಿಸಿಕೊಂಡಿತು. ವಿಮರ್ಶಕ ರಾಬರ್ಟ್ ಹ್ಯೂಗ್ಸ್ (ಅಮೆರಿಕ) 'Gvernica was the last great history painting' ಎಂದು ಉದ್ಗರಿಸಿರುವುದು ಸಹಜವೇ ಆಗಿದೆ.

೧೯೩೭ರ ಅಂತ್ಯಕ್ಕೆ ಪಿಕಾಸೊ ಕಾವ್ಯ ಹಿಂಸಾತ್ಮಕ ಕಲ್ಪನೆಗಳೊಂದಿಗೆ ತುಂಬಿತು. ಫ್ರಾಂಕೊನ ಅಣಕದಂತೆ ಚಿತ್ರಾತ್ಮಕ ವಿನ್ಯಾಸಗಳೂ ಸೇರಿಕೊಂಡವು. 'Dream and lie of Franco' ಇಲ್ಲಿ ನೆನಪಾಗುತ್ತಿದೆ. ಅವನ ಕವಿತೆಯೊಂದು ಫ್ರಾಂಕೊನನ್ನು ಅಸಹ್ಯ ಹುಟ್ಟಿಸುವ, ಮಾನವೀಯ ಭಾವನೆಗಳಿಲ್ಲದ ತಲೆ ನೆರೆತ ಹೋಳಿಯೊಬ್ಬನಿಗೆ ಹೋಲಿಸಿತ್ತು. ಕಾವ್ಯದ, ವ್ಯಾಕರಣದ ಎಲ್ಲ ವಿಧಿ, ವಿಧಾನಗಳನ್ನು ಧಿಕ್ಕರಿಸಿದ ಕವನ ಅದು. ಹಾಗಾಗಿಯೇ ಅವನು 'I would prefer invent a grammer of my own, than to bind myself to rules, which do not belong to me' ಎಂದು ತನ್ನ ವಿಮರ್ಶಕರಿಗೆ ಉತ್ತರಿಸಿದ್ದ. ೧೯೩೬, ೧೯೩೭ರಲ್ಲಿ ಅವನ ಕವನ ಸಂಕಲನಗಳು, ೧೯೪೧ರಲ್ಲಿ ಅವನ ಸರ್‍ರಿಯಲಿಸ್ಟ್ ನಾಟಕ 'De Desir attrape par la queve' ಬರೆಯಲ್ಪಟ್ಟಿತು.

೧೯೬೫ರಲ್ಲಿ ತನ್ನ ಗೆಳೆಯನೊಬ್ಬನಿಗೆ, ದುರ್ಬಲ ಕಣ್ಣು, ಕಿವಿಗಳ, ಮುಪ್ಪಿನಿಂದ ನರಳುತ್ತಿದ್ದ ಪಿಕಾಸೊ "....I know very well that neither of us smoke any longer. Age has forced us to give it up, but the desire remains! It's the same with making love. We don't do it any more, but the desire is still with us" ಎಂದು ಹೇಳಿಕೊಂಡಿದ್ದ.

೨೦ನೆಯ ಶತಮಾನದ ಕಲೆಯ ಬೆನ್ನೆಲುಬು ಪಿಕಾಸೊ. ಆಧುನಿಕ ಕಲೆಯ ಗುಣ ಲಕ್ಷಣಗಳನ್ನು ನಿರ್ಧರಿಸಿದ ಕೃತಿಗಳಿಗೆ ಪಾತ್ರರಾದವರಲ್ಲಿ ಬಹುಮಾನ್ಯನು. ಮಟಳೆಯದು ಸಂಘಟಿಸುವ ಪಟಿಂಗ, ನಿತ್ಯ ಅತೃಪ್ತಜೀವಿ, ಹೊಸ ಹೋರಾಟಗಳಿಗೆ ಸಿದ್ಧನಾಗಿ ನಿಂತ ವಿಜಯಿ, ಆಳದಲ್ಲಿ ಬಚ್ಚಿಟ್ಟುಕೊಂಡಿರುವ ಹೋರಿ ಮಾಡುವ ದ್ವಂದ್ವ ವ್ಯಕ್ತಿತ್ವಗಳನ್ನು ಅರಗಿಸಿಕೊಂಡಿದ್ದ ಕ್ರಾಂತಿಕಾರಿ ಕಲಾವಿದ. ಸುದೀರ್ಘ ಬದುಕಿನಲ್ಲಿ ಸಾಂಪ್ರದಾಯಿಕ 'ನೋಡುವ ದೃಷ್ಟಿ'ಗಳನ್ನು ಧಿಕ್ಕರಿಸಿದ

ವರ್ಣರಂಜಿತ, ಕೆಲವೊಮ್ಮೆ ಆಘಾತಕಾರಿ ಖಾಸಗಿ ಬದುಕಿನ ಪಿಕಾಸೊ ಇಂದು ವಿಖ್ಯಾತ. ಬದುಕಿದ್ದಾಗಲೇ ಪ್ಯಾರಿಸ್ಸಿನ ಲೋವ್ರೆ ಮ್ಯೂಸಿಯಂನಲ್ಲಿ ತನ್ನ ಕೃತಿಗಳ ಪ್ರದರ್ಶನ ಕಂಡವನು. ಅವನ ಶಿಲ್ಪ, ಚಿತ್ರ, ಪ್ರಿಂಟ್, ರೇಖಾಚಿತ್ರಗಳು ಸೆರಾಮಿಕ್ ಕೃತಿಗಳು ನವದೆಹಲಿ, ಮುಂಬಯಿಗಳಲ್ಲಿ ಪ್ರದರ್ಶಿಸಲ್ಪಟ್ಟವು. ಅವನ ರೇಖಾಚಿತ್ರಗಳು ಚೆನ್ನೈನ ಬ್ರಿಟೀಷ್ ಕೌನ್ಸಿಲ್ ಆಶ್ರಯದಲ್ಲಿ ಹಲವು ವರ್ಷಗಳ ಹಿಂದೆ ಬೆಂಗಳೂರಿಗೂ ಬಂದಿದ್ದವು.

□

---

ಕೆ.ವಿ. ಸುಬ್ರಮಣ್ಯ
೪೦/೩, ೧೦ನೇ ಕ್ರಾಸ್, ೧ನೇ ಮುಖ್ಯರಸ್ತೆ
ಮೈಸೂರು ರಸ್ತೆ, ಬೆಂಗಳೂರು -೩೮

# ಹೇಟೆ ಹನುಮನ ಕನಸು

ಹರೀಶ್‌ಕಟ್ಟೆಬೆಳಗುಲಿ

ನೋಡು
ನೋಡುತ್ತಿದ್ದಂತೆ
ಓಡಿ ಬಂದ ಹುಂಜ
ಬಲ ರೆಕ್ಕೆ ಬಿಡಿಸಿ ಕಾಲಿಗೆ ತೊಡಿಸಿ,
ಕೊಕ್ಕು ನೆಲಕ್ಕೆ ಕುಕ್ಕಿ
ಕಾಳಿನ ಚಿತ್ತಾರ ಬಿಡಿಸಿ
ಕಾಳಿನಾಸೆಗೆ ಬಂದ ಹನುಮನ
ಹೇಟೆಯ ಜುಟ್ಟಿಡಿದು ಮೆಟ್ಟಿತು.

ನೋಡೋ ಹಿರಿಯರು
ಆಡೋ ಹುಡುಗರು
ಅದ್ದಲಿಸಲಿಲ್ಲ,
ನಾಲಿಗೆ ಉದ್ದಮಾಡಿ
ಬಹಳ ತೀಟೆಯದು
ಕೇರಿಯ ತುಂಬೆಲ್ಲ ಇದರದೇ ಮರಿ
ಬಿತ್ತರಗೊಂಡ ನಗುವಿನ ಲಹರಿ.

ಹೇಟೆ ಕಂಡ ಹನುಮನ ಕಣ್ಣು
ಬಯಲಾಗಿ ಬಯಲಾಚೆಗೂ ಬಯಲಾಗಿ
ಆಕಾಶದಗಲವಾಗಿ,
ಹುಟ್ಟುವ ಮೊಟ್ಟೆಯು ಕಣ್ಣೊಳಗೆ
ಮರಿಯಾಗಿ, ಹೇಟೆಯಾಗಿ, ಹುಂಜವಾಗಿ....
ಅಳತೆ ಮೀರಿದ ಎದೆಯೊಳಗಿನ ಕನಸು.

ಮಾನದ ಅರಿವೆಗೆ ಒಂದು
ಉಪ್ಪು ಎಣ್ಣೆಗೆ ಮತ್ತೊಂದು
ದೇವರ ಹರಕೆಗೆ ಇನ್ನೊಂದು
ಹಬ್ಬಕ್ಕೆ ಮೊಗದೊಂದು
ಸಾಲ ತೀರಿಸುವುದಕ್ಕೆ, ನೆಂಟರ ಓಲೈಕೆಗೆ....
ಹೀಗೆ ಹನುಮನ ಕನಸು ಬೆಳೆಯುತ್ತಾ ಹೋಯ್ತು

ಹುಂಜದ ಋಣವ ಹೊಟ್ಟೆಯಲ್ಲಿ ಹೊತ್ತ
ಹೇಟೆ, ಮೈ ಕೊಡವಿ ಸಿಗದ ಕಾಳಿಗೆ ತಡಕಿ
ನಡೆಯಿತು ಮೇವು ಹುಡುಕಿ.

□

ಹರೀಶ್‌ಕಟ್ಟೆಬೆಳಗುಲಿ
ನಿರ್ದೇಶಕರ ಕಛೇರಿ
ಪದವಿಪೂರ್ವ ಶಿಕ್ಷಣ ಇಲಾಖೆ, ಕೊಠಡಿ ಸಂಖ್ಯೆ ೬, ಅರಮನೆ ರಸ್ತೆ
ಬೆಂಗಳೂರು - ೧

# ಆಫ್ರಿಕನ್ ಸಾಹಿತ್ಯದ ಗರುಡ : ಅಚೀಬೆ

ಬಿ. ಎಲ್. ರಾಜು

ಆಫ್ರಿಕಾ: ಕಗ್ಗತ್ತಲೆಯ ಮತ್ತೊಂದು ಹೆಸರು ಎನ್ನುವಷ್ಟರ ಮಟ್ಟಿಗೆ ಆಫ್ರಿಕಾ ತೀರಾ ಇತ್ತೀಚಿನವರೆಗೂ ಹೊರಜಗತ್ತಿಗೆ ನಿಗೂಢವಾಗಲೇ ಉಳಿದಿತ್ತು. 'ಕಗ್ಗತ್ತಲೆಯ ಖಂಡ' ಎನ್ನುವ ರೂಪಕವನ್ನು ಅದರ ಹಣೆಗೆ ಹಚ್ಚಿಬಿಡಲಾಗಿತ್ತು. ಇದೇನೂ ಆಶ್ಚರ್ಯವಲ್ಲ. ಇಂದಿಗೂ ಜಗತ್ತಿನ ಇನ್ನೂ ಅನೇಕ 'ಮನಸ್ಸು'ಗಳಿಗೆ ಆಫ್ರಿಕಾ ನಿಗೂಢ.

ಇಂತಹ ನಿಗೂಢತೆಯ ಮಧ್ಯದಿಂದ ಎದ್ದು ಬಂದ ಲೇಖಕ ಚಿನುವ ಅಚೀಬೆ ಕೇವಲ ಒಬ್ಬ ಬರಹಗಾರ ಮಾತ್ರವಲ್ಲ, ಆತನೊಬ್ಬ ಆಫ್ರಿಕಾ ಸಂಸ್ಕೃತಿಯನ್ನು ಹೊರಜಗತ್ತಿಗೆ ಎತ್ತಿ ತೋರಿದ ಮಹಾದೊಂದಿ. ಆಫ್ರಿಕಾಖಂಡದಿಂದ ಬಂದ ಮೂವರು ಮಹಾನ್ ಲೇಖಕರೆಂದರೆ ಚಿನುವಾ ಅಚೀಬೆ, ಗೂಗಿ ವಾ ಥಿಯೋಂಗ, ವೋಲೆ ಸೋಯಿಂಕ. ಕುತೂಹಲದ ಸಂಗತಿ ಎಂದರೆ ಈ ಮೂವರೂ ಸಾಹಿತ್ಯದಲ್ಲಿ ನೋಬೆಲ್ ಪ್ರಶಸ್ತಿ ವಿಜೇತರು.

ಕಾಮನ್ ವೆಲ್ತ್ ಸಾಹಿತ್ಯದಲ್ಲಿ ಚಿನುವಾ ಅಚೀಬೆಯದು ದೊಡ್ಡ ಹೆಸರು. ೧೯೩೦ರಲ್ಲಿ ಹುಟ್ಟಿದ ಅಚೀಬೆ ಮೂಲತಃ ನೈಜೀರಿಯಾದವರು. ೧೯೫೮ರಲ್ಲಿ 'ಥಿಂಗ್ಸ್ ಫಾಲ್ ಅಪಾರ್ಟ್' ಎನ್ನುವ ಬಹಳ ಮಹತ್ವದ ಕಾದಂಬರಿ ಬರೆದ ಅಚೀಬೆಯವರು ಆ್ಯರೋ ಆಫ್ ಗಾಡ್, ನೋ ಲಾಂಗರ್ ಅಟ್ ಈಸ್ ಮುಂತಾದ ಹೆಸರಾಂತ ಸಾಹಿತ್ಯಕೃತಿಗಳ ಮೂಲಕ ಹೆಸರಾದವರು.

ಅಚೀಬೆಯ ಎಲ್ಲಾ ಕೃತಿಗಳು ಇಂಗ್ಲೀಷಿನಲ್ಲಿವೆ. ಅಚೀಬೆಯ ಆಂಗ್ಲ ಭಾಷೆಯ ಬರವಣಿಗೆಯು ಅವರೇ ಹೇಳಿಕೊಳ್ಳುವಂತೆ ಹೊಸ ಇಂಗ್ಲೀಷ್ ಆಗಿದೆ- ಆ ಮೂಲಕ ಸ್ಥಳೀಯ ಸಂವೇದನೆಗಳನ್ನೂ ಅಲ್ಲಿನ ಪರಿಸರದೊಂದಿಗೇ ಬೆಸೆಯುವಲ್ಲಿ ಹೊಸ ಇಂಗ್ಲೀಷ್ ಪ್ರಮುಖ ಪಾತ್ರವಹಿಸಿದೆ. ಹಾಗಾಗಿಯೆ

ಅಚೀಬೆಯವರು ಇಂಗ್ಲೀಷ್ ಭಾಷೆಯ ಕುರಿತಾದ ತಮ್ಮ ನಿಲುವನ್ನು ಅತ್ಯಂತ ಸ್ಪಷ್ಟವಾಗಿ ವಿವರಿಸುತ್ತಾರೆ: ಆಫ್ರಿಕಾದ ಬರಹಗಾರರು ಬಳಸುವ ಇಂಗ್ಲೀಷೆಂದರೆ ಯೂರೋಪಿಯನ್ನರ ಕಲ್ಪನೆಯ ಇಂಗ್ಲೀಷ್ ಅಲ್ಲ ಎನ್ನುತ್ತಾರೆ. ಮುಂದುವರೆದು ಇಂಗ್ಲೀಷ್ ಸಾಹಿತ್ಯದಲ್ಲಿ ಹುಟ್ಟುತ್ತಿದ್ದ ಟ್ರೆಂಡ್‌ಗಳನ್ನು ಅತ್ಯಂತ ಖಚಿತವಾಗಿ ನಿರಾಕರಿಸುವುದರ ಜೊತೆಗೆ ತಮ್ಮದೇ ಹೊಸ ಶೈಲಿಯನ್ನು ಹುಟ್ಟು ಹಾಕಿದ್ದಾರೆ. ಕಲೆಗಾಗಿ ಕಲೆ ಎನ್ನುವ ಯೂರೋಪಿಯನ್ ತತ್ವದ ವಿರುದ್ಧವಾಗಿ ಅಚೀಬೆಯವರು ಆಫ್ರಿಕಾದ ಮೌಖಿಕ ಪರಂಪರೆಯ ಬೀಜಮಂತ್ರವಾದ ಕಲೆಯು ಮಾನವನ ಒಳಿತಿಗಾಗಿ ಇರುವಂತದ್ದು ಎನ್ನುವುದನ್ನು ಸಮರ್ಥಿಸುತ್ತಾರೆ. ತಮ್ಮ ಹಿಂದಿನವರು ಮುಂದಿನ ಜನಾಂಗದ ಏಳ್ಗೆಗಾಗಿ ಕಥೆಗಳನ್ನು ಕಟ್ಟಿಕೊಡುವಾಗಲೇ ಪುರಾಣಗಳನ್ನೂ, ಐತಿಹ್ಯಗಳನ್ನು ಸೇರಿಸಿರುವಂತೆ ಒಂದು ಒಳ್ಳೆಯ ಕಥೆ ಅಥವಾ ಕಾದಂಬರಿಯು ಒಂದು ಸಂದೇಶದೊಂದಿಗೇ ಮುಕ್ತಾಯವಾಗಬೇಕು ಎನ್ನುತ್ತಾರೆ.

ಜಾನಪದವೆನ್ನುವುದು ಅಚೀಬೆಯವರ ಪಾಲಿಗೆ ಅತ್ಯಂತ ಜೀವಂತಿಕೆಯ ಸಂವಹನ ಮಾಧ್ಯಮ. ಸಂಸ್ಕೃತಿಗಳು ತಮ್ಮ ವೈವಿಧ್ಯ ಹಾಗೂ ವೈಭವಗಳನ್ನು ಮುಂದಿನ ತಲೆಮಾರುಗಳಿಗೆ ಸಾಗಿಸಲು ಜಾನಪದವನ್ನೇ ಆಶ್ರಯಿಸುತ್ತವೆ. ಯಾಕೆಂದರೆ ಜಾನಪದವು ಹಲವು ಸಂದರ್ಭಗಳಲ್ಲಿ ಜನರ ಅತ್ಯಂತ ಕ್ಲಿಷ್ಟ ಸಮಸ್ಯೆಗಳಿಗೆ ಚಮತ್ಕಾರದ ಪರಿಹಾರವನ್ನು ಸೂಚಿಸುತ್ತವೆ. ಜಾನಪದೀಯ ಸಂಸ್ಕೃತಿಯಿಂದಲೇ ಅತ್ಯಂತ ಜೀವಂತವೆನಿಸಿಕೊಂಡ ಇಬೋ ಸಮಾಜದಿಂದ ಬಂದ ಅಚೀಬೆ ತಮ್ಮ ಎಲ್ಲಾ ಸಾಹಿತ್ಯ ಕೃತಿಗಳಲ್ಲಿ ಜಾನಪದವನ್ನು ಅತ್ಯಂತಿಕವಾಗಿ ಮಡಿಸಿಕೊಂಡಿದ್ದಾರೆ.

ತಮ್ಮ ಎಲ್ಲಾ ಸೃಜನಶೀಲ ಬರಹಗಳಲ್ಲಿ ಆಫ್ರಿಕಾದ ಸಂವೇದನೆಗಳನ್ನು ಮಿಳಿತಗೊಳಿಸಿರುವ ಅಚೀಬೆಯವರ ಬಗೆಗೆ ಖ್ಯಾತ ವಿಮರ್ಶಕ ಬ್ರೂಸ್ ಕಿಂಗ್ ಹೀಗೆ ಬರೆಯುತ್ತಾರೆ: ಆಫ್ರಿಕನ್ ಸಾಹಿತ್ಯದಲ್ಲಿ ಯೂರೋಪಿಯನ್ ಸಾಹಿತ್ಯ ಪ್ರಕಾರವಾದ ಕಾದಂಬರಿಯನ್ನು ಅತ್ಯಂತ ಯಶಸ್ವಿಯಾಗಿ ಸೇರ್ಪಡೆಗೊಳಿಸಿದವರು ಅಚೀಬೆ.

ಅಚೀಬೆಯವರು ತಮ್ಮ ಕೃತಿಗಳಲ್ಲಿ ಬಳಸಿರುವ ಇಂಗ್ಲೀಷ್ ಭಾಷೆ ಮತ್ತು ಆಫ್ರಿಕನ್ ಸಂಸ್ಕೃತಿಯ ಕುರಿತು-ಲಾಯ್ಡ್ ಡಬ್ಲ್ಯು. ಬ್ರೌನ್ ಹೀಗೆ ಬರೆಯುತ್ತಾರೆ: ಅಚೀಬೆಯವರ ಸಾಹಿತ್ಯ ಕೃತಿಗಳಲ್ಲಿನ ಕಲಾತ್ಮಕವಿನ್ಯಾಸದಲ್ಲಿ ಬಳಕೆಯಾಗುವುದು. ಪ್ರಮುಖವಾಗಿ ಭಾಷೆ. ಆ ಭಾಷೆಯು ಇಂಗ್ಲೀಷ್ ಭಾಷೆಯೊಂದನ್ನೇ ಶ್ರೀಮಂತಗೊಳಸುವುದಿಲ್ಲ, ಓದುಗನಿಗೂ ಸಂಸ್ಕೃತಿಯ ಕುರಿತಾದ ಸಮಗ್ರವಾದ ಅನುಭವವನ್ನು ಕಟ್ಟಿಕೊಡುತ್ತದೆ. ಇಲ್ಲಿ ಭಾಷೆ ಎಂದರೆ ಅದೊಂದು ಸಂವಹನ ತಂತ್ರ ಅಲ್ಲ ಅದು ಸಂಸ್ಕೃತಿಯ ಸಮಗ್ರ ಅನುಭವ, ನಾಗರಿಕತೆಯ ಉತ್ತುಂಗ ಸ್ಥಿತಿ.

ತಮ್ಮ ಕೃತಿಗಳ ಆಕೃತಿ ಮತ್ತು ಆಶಯಗಳಲ್ಲಿ ಇಬೋ ಸಂಸ್ಕೃತಿಯ ನೈತಿಕತೆ ಮತ್ತು ರಸಗ್ರಹಣ ದೃಷ್ಟಿಕೋನಗಳನ್ನು ಸಮರ್ಥವಾಗಿ ಬೆಸೆದಿರುವ ಅಚೀಬೆ ಒಬ್ಬ ಲೇಖಕನ ಜವಾಬ್ದಾರಿಯನ್ನು ಸರಿಯಾಗಿ ನಿಭಾಯಿಸಿದ್ದಾರೆ. ಆಫ್ರಿಕಾದ ಚರಿತ್ರೆ ಮತ್ತು ವರ್ತಮಾನಗಳ ಜೀವನವನ್ನು ಅದರ ಎಲ್ಲಾ ನೋವು-ನಲಿವು-ನಿಗೂಢತೆಗಳೊಂದಿಗೆ ಚಿತ್ರಿಸಿದ್ದಾರೆ. ಹೆಚ್ಚಾಗಿ ಅಚೀಬೆ ಹೇಳಬಯಸಿರುವುದೇನೆಂದರೆ- ಆಫ್ರಿಕಾದ ಜನರು ಸಂಸ್ಕೃತಿಯನ್ನು ಯೂರೋಪಿಯನ್ನರಿಂದ ಕಲಿಯಬೇಕಿಲ್ಲ. ಅದು ಅವರ ಬದುಕಿನೊಳಗೇ ಅದರ ಎಲ್ಲಾ ಆಳುಹರವು, ಸೌಂದರ್ಯದೊಂದಿಗೆ ಗಾಢವಾಗಿ ಬೆಸೆದುಕೊಂಡುಬಿಟ್ಟಿದೆ.

ಅಚೀಬೆಯ ಇಬೋ ಸಂಸ್ಕೃತಿಯೊಳಗೆ ಒಳ್ಳೆಯ ಮಾತುಗಾರನೆಂದರೆ ಯಾರು ತನ್ನ ಮಾತಿನಲ್ಲಿ ಪಾರಂಪರಿಕವಾಗಿ ಉಳಿದು ಬೆಳೆದುಬಂದಿರುವ ಗಾದೆ, ಕೌಶಲ್ಯ ಹಾಗೂ ವಿವೇಕವನ್ನು ಬಳಸುತ್ತಾನೊ ಅವನು ಎಂದು ನಂಬಲಾಗುತ್ತದೆ. ಗಾದೆಗಳೆಂದರೆ ಅದುಗೆ ಎಣ್ಣೆ ಇದ್ದಂತೆ ಮಾತುಗಳನ್ನು ಅದರಲ್ಲಿ ಬಳಸಿ ತಿನ್ನಲಾಗುತ್ತದೆ ಎಂದು ಛಾಪಿಸುತ್ತಾರೆ. ಹಾಗಾಗಿಯೇ ಅಚೀಬೆಯವರು ತಮ್ಮ ಎಲ್ಲಾ ಕಾದಂಬರಿಗಳಲ್ಲೂ ಆಫ್ರಿಯ ಪರಂಪರೆಯಿಂದ ಬಂದ ವಿವೇಕ ಮತ್ತು ಜಿಜ್ಞಾಸೆ, ಕಾವ್ಯ ಮತ್ತು ಸೌಂದರ್ಯಗಳನ್ನು ಬಹಳ ಪರಿಣಾಮಕಾರಿಯಾಗಿ ಬಳಸುತ್ತಾರೆ. ಆ ಮೂಲಕ ಹೊರ ಜಗತ್ತು ಹೇಗೆ ಕಪ್ಪು ಸಾಹಿತ್ಯ ಮೀಮಾಂಸೆಯನ್ನು ಗ್ರಹಿಸಬೇಕೆಂದು ತೋರಿಸಿಕೊಡುತ್ತಾರೆ.

'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯು ಅಚೀಬೆಯವರಿಗೆ ಹೆಸರು ತಂದುಕೊಟ್ಟ ಮಹತ್ವಾಕಾಂಕ್ಷೆಯ ಕೃತಿ. ಒಂದೇ ಓದಿನಲ್ಲಿ ಹಲವು ಧ್ವನಿ ತರಂಗಗಳ ಕಂಪನಗಳನ್ನೆಬ್ಬಿಸಬಲ್ಲ ಕಾದಂಬರಿ. ಇದರಲ್ಲಿ ಇಬೋ ಸಂಸ್ಕೃತಿಯ ಕಥೆಯಿದೆ. ಅದರ ನಾಯಕ ಒಕಾಂಕ್ವೊ ತನ್ನ ಜೀವಿತಾವಧಿಯಲ್ಲಿ ಮಹತ್ವವಾದವುಗಳನ್ನು ಸಂಪಾದಿಸಿದ ವ್ಯಕ್ತಿ. ಆತ ಒಬ್ಬ ಕುಸ್ತಿಪಟು, ಒಬ್ಬ ಶ್ರೀಮಂತ ರೈತ, ಮೂವರು ಹೆಂಡಿರ ಗಂಡ, ಹಲವು ಪದವಿಗಳ ವಿಜೇತ.

ಬ್ರಿಟೀಷರ ಆಗಮನದೊಂದಿಗೆ ಇಬೋ ಸಮುದಾಯ ಅಲುಗಾಡುತ್ತದೆ. ಬ್ರಿಟೀಷರು ಹೇರುವ ಧರ್ಮದಿಂದಾಗಿ ಇಬೋ ಸಂಸ್ಕೃತಿ ದಿಕ್ಕೆಡುತ್ತದೆ. ಹೊರಗಿನ ಪ್ರಬಲ ಸಂಸ್ಕೃತಿಯ ಹೇರಿಕೆಯಿಂದಾಗಿ ಇಲ್ಲಿನ ಪಾರಂಪರಿಕ ಮೌಲ್ಯಗಳು ಛಿದ್ರಗೊಳ್ಳುತ್ತವೆ. ಈ ಎಲ್ಲಾ ಸಂಘರ್ಷಗಳು ಕಾದಂಬರಿಯ ನಾಯಕ ಒಕಾಂಕ್ವೊನ ಮೂಲಕ ಪ್ರಕಟಗೊಳ್ಳುತ್ತವೆ. ಒಕಾಂಕ್ವೋನು ವಸಾಹತುಶಾಹಿಯು ತರುವ ಬದಲಾವಣೆಗಳಿಗೆ ತೆಗೆದುಕೊಳ್ಳುವುದಿಲ್ಲ. ಕೊನೆಗೆ ಆದಿಮ ಕಾಲದಿಂದಲೂ ತನ್ನ ಇಬೋ ಸಂಸ್ಕೃತಿಯು ನಂಬಿಕೊಂಡು ಬಂದಿದ್ದ ಆತ್ಮಹತ್ಯೆ ಮಹಾಪಾಪ ಎನ್ನುವ ತತ್ವಕ್ಕೆ ವಿರುದ್ಧವಾಗಿ ಆತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೀಗೆ ಎರಡು ಸಂಸ್ಕೃತಿಗಳ ಸಂಘರ್ಷ ಕೃತಿಯುದ್ದಕ್ಕೂ ನಡೆಯುತ್ತದೆ. ಕೊನೆಗೆ ಇಬೋ ಸಂಸ್ಕೃತಿಯು ಮಗುಚಿ ಬೀಳುತ್ತದೆ.

ಈ ಕೃತಿಯ ಒಂದು ವಿಶಿಷ್ಟ ಗುಣವೆಂದರೆ ಇಬೋ ಸಮಾಜದ ಸಾಂಪ್ರದಾಯಿಕ ಹಳ್ಳಿಯ ಸಂಕೀರ್ಣಚಿತ್ರಣ. ಅಚೀಬೆಯವರ ಉದ್ದೇಶ ಹೊರಜಗತ್ತಿನ ಜೊತೆಜೊತೆಗೆ ಒಳಗಿನ ಈಗಿನ ಇಬೋ ಜನಾಂಗದವರಿಗೇ ತಮ್ಮ ಮೂಲ ಸಂಸ್ಕೃತಿಯನ್ನು ತಿಳಿಸುವುದು. ಯಾಕೆಂದರೆ ಈ ಕೃತಿಯ ರಚನೆಯ ಸಂದರ್ಭದ ಅನೇಕ ಆಫ್ರಿಕನ್ನರು ಯೂರೋಪಿಯನ್ನರ 'ಆಫ್ರಿಕಾದವರಿಗೆ ಇತಿಹಾಸವಿಲ್ಲ, ಸಂಸ್ಕೃತಿಯೂ ಇಲ್ಲ' ಎನ್ನುವ ತೀರ್ಪನ್ನು ಒಪ್ಪಿಕೊಳ್ಳಲು ತಯಾರಾಗಿದ್ದರು.

ಇಂಗ್ಲೀಷ್ ಸಾಹಿತ್ಯದ ಪ್ರಮುಖ ಬರಹಗಾರರಾದ ಜೋಸೆಫ್ ಕಾನ್ರಾಡ್ ಹಾಗೂ ಜಾಯ್ಸ್ ಕೇರಿಯವರು ಪೂರ್ವಾಗ್ರಹಪೀಡಿತ ದೃಷ್ಟಿಕೋನದಲ್ಲಿ ಬರೆದ ಹಾರ್ಟ್ ಆಫ್ ಡಾರ್ಕ್‌ನೆಸ್ ಹಾಗೂ ಮಿಸ್ಟರ್ ಜಾನ್ಸನ್ ಕೃತಿಗಳಲ್ಲಿ ಆಫ್ರೀಕವನ್ನು ಅನಾಗರೀಕವೆಂದು ಚಿತ್ರಿಸಿದ್ದರು. ಈ ಚಿತ್ರಣಕ್ಕೆ ಪ್ರತಿಭಟನೆ ಎಂಬಂತೆ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯನ್ನು ಬರೆದ ಅಚೀಬೆ ಜನಾಂಗೀಯವಾದವನ್ನು ಕಟುವಾಗಿ ಟೀಕಿಸಿದ್ದಾರೆ.

೧೯೬೪ರಲ್ಲಿ ಬರೆದ 'ಆ್ಯರೋ ಆಫ್ ಗಾಡ್' ಅಚೀಬೆಯವರ ಮತ್ತೊಂದು ಸಂಕೀರ್ಣ ಸಾಂಸ್ಕೃತಿಕ ಕಾದಂಬರಿ. ನಾಗರಿಕತೆಗಳ ಸಂಘರ್ಷ, ಅಧಿಕಾರಗಳ ಸಂಘರ್ಷ, ಧಾರ್ಮಿಕ ವ್ಯವಸ್ಥೆಗಳ

ಮುಖಾಮುಖಿಗಳು ಈ ಕೃತಿಯ ವಸ್ತು. ಈ ಕೃತಿಯ ಕೇಂದ್ರ ವ್ಯಕ್ತಿ ವಸೂಲು ತನ್ನ ಅಹಂಗೆ ತಾನೇ ಬಲಿಯಾಗುತ್ತಾನೆ. ಆತನ ನಂತರ ಉಮುವಾರೋನ ಅಂತ್ಯ ಶಿಥಿಲತೆಯ ಅಂಚಿನಲ್ಲಿ ನಿಂತ ಆಫ್ರಿಕಾದ ಇಬೋ ಸಮಾಜದ ಬಿಕ್ಕಟ್ಟುಗಳನ್ನೂ ಅಚೀಬೆ ಅತ್ಯಂತ ಮನೋಜ್ಞವಾಗಿ ಚಿತ್ರಿಸುತ್ತಾರೆ.

ತಮ್ಮ ಎಲ್ಲಾ ಕೃತಿಗಳಲ್ಲಿ ಸಂಸ್ಕೃತಿಗೆ ಹೆಚ್ಚು ಒತ್ತು ನೀಡುವ ಅಚೀಬೆ ಅದರ ಭಾಗವಾದ ದಂತಕತೆಗಳು, ನೀತಿಕತೆಗಳು, ಆಚರಣೆ ಮತ್ತು ಸಮಾರಂಭಗಳನ್ನು ಅತ್ಯಮತ ಆಪ್ತವಾಗಿ ಚಿತ್ರಿಸುತ್ತಾರೆ. ನಿಸರ್ಗದ ಚಿತ್ರಣ ಮತ್ತೆ ಮತ್ತೆ ಕಣ್ಣಿಗೆ ರಾಚಿಸುತ್ತದೆ.

ಆಫ್ರಿಕನ್ ಸಾಹಿತ್ಯದಲ್ಲೆ ಅತ್ಯಂತ ಹೆಚ್ಚು ರೂಪಕಗಳನ್ನು ಬಳಸುವ ಅಚೀಬೆಯವರ ಥಿಂಗ್ಸ್ ಫಾಲ್ ಅಪಾರ್ಟ್‌ನಲ್ಲಿ ಕಾಣಸಿಕೊಳ್ಳುವ ಒಂದೆರಡು ಗಮನಸೆಲೆಯುವ ರೂಪಕಗಳು ಹೀಗಿವೆ. 'ಕೋಲಾ ತರುವವನು ಬದುಕನ್ನು ತರುತ್ತಾನೆ', 'ಒ ಕೊಂಕ್ವೊ ಒಬ್ಬ ರಾಚುವ ಉರಿ, ಉರಿಯುತ್ತಿರುವ ಬೆಂಕಿ', 'ಅವನ ಮಗ ಆರಿದ ಬೂದಿ', 'ಒಬೇರಿಕಾನ ಮನೆ ಇರುವೆ ಗೂಡಾಗಿದೆ'. ಹೀಗೆ ರೂಪಕಗಳ ಮೂಲಕ ಏಕಕಾಲಕ್ಕೆ ಸಂಸ್ಕೃತಿ ಮತ್ತು ಭಾಷೆಯನ್ನು ತೀಕ್ಷ್ಣವಾಗಿ ಬಳಸುವ ಅಚೀಬೆ ನಿಜವಾಗಿಯೂ ಆಫ್ರಿಕಾದ ಸೂಕ್ಷ್ಮ ಸಂವೇದನೆಯು ಲೇಖಕ.

ಇಂತಹ ರೂಪಕ ಪ್ರತಿಭೆಯಾದ ಚಿನುವ ಅಚೀಬೆಯನ್ನು ಅವನ ಅರವತ್ತನೆಯ ವಯಸ್ಸಿನಲ್ಲಿ ಒಂದು ರೂಪಕದ ಮೂಲಕವೇ ಸನ್ಮಾಸಲಾಯಿತು. ಆ ಒಂದೇ ಮಾತಿನ ರೂಪಕ: ಇರೋಕೋ ಏರಿದ ಗರುಡ. ಆಫ್ರಿಕಾದ ನಿಸರ್ಗದ ಬಗೆಗೆ ತಿಳಿದಿರುವ ಜನರಿಗೆ ಇರೋಕೋ ಗೊತ್ತು. ಇರೋಕೋ ಕಾಡಿನಲ್ಲಿ ಬೆಳೆಯುವ ಅತ್ಯಂತ ಎತ್ತರದ ಹಾಗೆಯೆ ಬಲಿಷ್ಟ ಮರ. ಈ ಮರವನ್ನು ಹತ್ತುವುದು ಅಷ್ಟು ಸುಲಭವಲ್ಲ. ಹಾಗೆಯೇ ಗರುಡ-ಗರುಡ ಪಕ್ಷಿಗಳ ರಾಜ. ಹಾಗಾಗಿಯೆ ಇಬೋ ಸಂಸ್ಕೃತಿಯ ಗಾದೆಯ ಮಾತಿದೆ. ಏನೆಂದರೆ 'ಇರೋಕೋವನ್ನು ಯಾರೂ ಎರಡು ಬಾರಿ ಹತ್ತಲಾರರು.' ಹಾಗೆ ಹತ್ತಿದವನು ತನಗೆ ಮೇಲಿನಿಂದ ಕಂಡಿದ್ದೆಲ್ಲವನ್ನು ಕೆಳಗಿಳಿದು ಬಂದು ಹೇಳಿಬಿಡಬೇಕು. ಯಾಕೆಂದರೆ ಆತ ಇನ್ನೊಮ್ಮೆ ಹತ್ತಲಾರ. ಆದರೆ ಗರುಡ ಮಾತ್ರ ಈ ಮರವನ್ನು ಎಷ್ಟು ಬಾರಿ ಕೂಡಾ ಹತ್ತಿ ತುದಿ ತಲುಪಬಲ್ಲದು.

ಇಲ್ಲಿ ಇರೋಕೊ ಆಫ್ರಿಕನ್ ಸಂಸ್ಕೃತಿಯನ್ನು ಪ್ರತಿನಿಧಿಸಿದರೆ ಗರುಡ ಅಚೀಬೆ. ಸಾಹಿತ್ಯಕವಾಗಿ ಅಚೀಬೆ ಆ ಎತ್ತರವನ್ನು ಎಂದೋ ಏರಿದ್ದಾರೆ.

□

---

ಬಿ.ಎಲ್. ರಾಜು
ಆಂಗ್ಲಭಾಷ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬೆಳ್ಳಾರೆ, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ

# ಲೇಖಕರಿಗೆ ವಿನಂತಿ

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ದ ಸ್ವರೂಪದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಬೇಕೆಂಬ ಹಂಬಲವನ್ನು ತಾವು ಇದುವರೆಗಿನ ಸಂಚಿಕೆಗಳ ಮೂಲಕ ಗಮನಿಸಬಹುದಾಗಿದೆ. ಕನ್ನಡದ ಶ್ರೇಷ್ಠ ಲೇಖಕರನ್ನೆಲ್ಲ ಒಳಗೊಳ್ಳುವಂತೆಯೂ ಹಾಗೂ ಹೊಸ ಸಂವಾದ, ಸಂವೇದನೆಗಳ ಶಕ್ತ ವೇದಿಕೆಯಾಗಿ ಪತ್ರಿಕೆ ಗಂಭೀರ ಸಾಹಿತ್ಯ ಚಿಂತನೆಗಳ ಅಭಿವ್ಯಕ್ತಿಯಾಗಿ ರೂಪುಗೊಳ್ಳಬೇಕೆಂಬುದೂ ನಮ್ಮ ಆಶಯವಾಗಿದೆ. ಕನ್ನಡದ ಹಿರಿಯ ಹಾಗೂ ಭರವಸೆಯ ಹೊಸ ಪೀಳಿಗೆಯ ಲೇಖಕರೆಲ್ಲರ ಭಾಗವಹಿಸುವಿಕೆಯೇ ಪತ್ರಿಕೆಗೆ ಜೀವದ್ರವ್ಯವಾದ್ದರಿಂದ ತಮ್ಮ ಅಮೂಲ್ಯ ಸಹಕಾರ ಅತ್ಯಗತ್ಯ.

ಅನ್ಯಭಾಷೆಯ ಶ್ರೇಷ್ಠ ಬರಹಗಳ ಅನುವಾದದೊಂದಿಗೆ, ಸ್ವತಂತ್ರ ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. 'ಅನಿಕೇತನ'ಕ್ಕಾಗಿ ಕವಿತೆ / ಕಥೆ / ಕಿರುನಾಟಕ / ವಿಮರ್ಶಾತ್ಮಕ / ವೈಚಾರಿಕ ಲೇಖನ / ಪ್ರಬಂಧ / ಸಾಂಸ್ಕೃತಿಕ ಚಿಂತನೆ ಹಾಗೂ ಅನುವಾದಗಳನ್ನು ಕಳುಹಿಸಿ ಕೊಡುವುದರ ಮೂಲಕ ನಮ್ಮ ಪ್ರಯತ್ನಕ್ಕೆ ಸಹಕರಿಸಬೇಕೆಂದು ಕೋರುತ್ತಿದ್ದೇವೆ. ದಯವಿಟ್ಟು ಬರೆಯಿರಿ. ಪತ್ರಿಕೆಗೆ ಹೊಸ ರೂಪ ಕೊಡಬೇಕೆಂಬ ಪ್ರಯತ್ನಗಳ ನಮ್ಮೊಂದಿಗೆ ಸದಾ ನೀವಿರುತ್ತೀರೆಂಬುದೇ ನಮ್ಮ ಧೈರ್ಯ ಹಾಗೂ ವಿಶ್ವಾಸ.

ಅನುವಾದಗಳಾದರೆ ಮೂಲ ಲೇಖಕರ ಹೆಸರು, ವಿಳಾಸ, ಮೂಲ ಬರಹದ ಭಾಷೆಯ ವಿವರ ಅಗತ್ಯ. ಅನುಮತಿ ಪತ್ರದ ಜೆರಾಕ್ಸ್ ಪ್ರತಿ ಜೊತೆಯಲ್ಲಿರುವುದು ಅಪೇಕ್ಷಣೀಯ. ಬರವಣಿಗೆ ಹಾಳೆಯ ಒಂದೇ ಮಗ್ಗುಲಲ್ಲಿದ್ದು, ಸ್ಫುಟವಾಗಿ ಓದಲು ಅನುಕೂಲವಾಗುವಂತಿರಲಿ.

ಬರಹಗಳನ್ನು ಕಳುಹಿಸಬೇಕಾದ ವಿಳಾಸ :
**ಸಂಪಾದಕರು, 'ಅನಿಕೇತನ', ಕರ್ನಾಟಕ ಸಾಹಿತ್ಯ ಅಕಾಡೆಮಿ**
**ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨**

-ಸಂಪಾದಕರು



## ಗೋವುಗಳ ಗೋಳಾಟ

ಸಣ್ಣ ಕುಲದವ ದೊಡ್ಡ ಕುಲದವ।
ನೆನ್ನುವಂತಹ ಭಾವನೆಯ ನೀ।
ವಿನ್ನು ಮನದೊಳು ತಂದುಕೊಳ್ಳದೆ ಮನ್ನಿಸುವುದೆನ್ನ॥
ಸಣ್ಣ ಮಳಲೊಳಗಿಪ್ಪ ವಜ್ರವು।
ತನ್ನ ಪ್ರಭೆಯನು ತೋರದಿರುವುದೆ।
ಸಣ್ಣ ದೊಡ್ಡವನೆಂಬ ಭಾವನೆ ಸಣ್ಣವಗೆ ಮಾತ್ರ ॥೭॥

ಕೀಳು ಕುಲದೊಳು ಜನಿಸಿದಂತಹ।
ವಾಲಮಿಾಕರು ಪಾಳ್ದ ರಾಮನ।
ಲೀಲೆಯದು ಜಗಕೆಲ್ಲ ಸಮ್ಮತವಾಗಲಿಲ್ಲೇನು॥
ತಾಳಿ ವಿಧವಿಧದಾಪದಂಗಳ।
ನಾಳಿನಂದದಿ ಗೇದು ನರಳುವ।
ಶ್ರೀಲತಾಂಗಿಯ ಪರಿಯ ಪೇಳುವೆನಲ್ಲದಿನ್ನೇನು ॥೮॥

ಭಾರತಾವನಿ ಯೀಯುವನ್ನದ।
ಸಾರದಿಂ ಬಲಗೊಂಡ ತರುಣರೆ।
ಸಾರಿ ಬೇಡುವೆನಿದನು ಯೋಚಿಸಿ ನಿಮ್ಮ ಮನದೊಳಗೆ॥
ಆರ ರಕ್ತದಿ ಪುಟ್ಟಿದಿರಿ ನೀ।
ವಾರ ಸಾರವ ಹೀರುತಿರುವಿರಿ।
ಧೀರರೇ ನೀವಾದರವುಗಳ ಸಲಹಿ ಮನವೊಲಿದು ॥೯॥

ಪರಹಿತಕೆ ಸರಿಯಾದ ಧರ್ಮವು।
ಧರಣಿಯೊಳಗಿನ್ನಾವುದಿರುವುದು।
ಭರತಖಂಡದ ಪಿರಿಯ ಧರ್ಮವಿದಲ್ಲವೇ ನರರೆ॥
ಸಿರಿಯರಮಣನೆ ಹತ್ತು ರೂಪವ।
ಪರಮ ತೋಷದೊಳೆತ್ತಿದುದುತಾಂ।
ಧರಣಿಗುಪಕೃತಿಗಯ್ವ ಕಾರ್ಯಕ್ಕಲ್ಲದಿನ್ನೇಕೆ ॥೧೦॥

–ಸೋಸಲೆ ಸಿದ್ದಪ್ಪ

Reg. No. 45646/88 Price : 30/-